ಸಂಚಿಕೆ 15 / ಏಪ್ರಿಲ್ / 2023
ಚಾತುರ್ಮಾಸಿಕ / ಕನ್ನಡ ಆವೃತ್ತಿ / ಬೆಂಗಳೂರು

Azim Premji University

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ

# ಲರ್ನಿಂಗ್ ಕರ್ವ್

ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿಯ ಒಂದು ಪ್ರಕಟಣೆ



## ಶಾಲೆಯಲ್ಲಿ ಯೋಗಕ್ಷೇಮದ ಪೋಷಣೆ – ಭಾಗ 2

**ಕನ್ನಡ ಸಂಚಿಕೆಯ ಸಂಪಾದಕರು**
ಎಸ್.ವಿ. ಮಂಜುನಾಥ್
ದಿನೇಶ್ ಮಡಗಾಂವ್‌ಕರ್
ಮಹೇಶ್ ಕುಮಾರ್ ಸಿ ಎಸ್

**ಅನುವಾದ ಪರಿಷ್ಕರಣೆ**
ಚಂದ್ರಶೇಖರ ಮಂಡೆಕೋಲು

**ಪ್ರಕಾಶನ ಸಂಯೋಜಕರು**
ಶಾಂತ ಕೆ
ಶಹನಾಜ್ ಬೇಗಂ
ಸುನೀಲ್ ಎಸ್

**ಸಂಪಾದಕೀಯ ಕಾರ್ಯಾಲಯ**
ಸಂಪಾದಕರು, ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ
ಸರ್ವೇ ನಂ. 66, ಬುರುಗುಂಟೆ ಗ್ರಾಮ
ಚಿಕ್ಕನಹಳ್ಳಿ ಮುಖ್ಯ ರಸ್ತೆ, ಸರ್ಜಾಪುರ
ಬೆಂಗಳೂರು – 562125
ದೂರವಾಣಿ: 080 6614 4900
ಇಮೇಲ್: publications@apu.edu.in
ವೆಬ್‌ಸೈಟ್: www.azimpremjiuniversity.edu.in

**ಮುಖಪುಟ ಚಿತ್ರ**
ಸರ್ಕಾರಿ ಪ್ರಾಥಮಿಕ ಶಾಲೆ,
ಜೈತ್ಪುರ್ ಘೋಷಿ, ಉತ್ತರಾಖಂಡ

**ಮುಖಪುಟ ಛಾಯಾಚಿತ್ರಗ್ರಾಹಕರು**
ಪುರುಷೋತ್ತಮ್ ಸಿಂಗ್ ಠಾಕೂರ್

**ವಿನ್ಯಾಸ**
ಬನ್ಯಾನ್ ಟ್ರೀ
+91 9845864765

**ಕನ್ನಡ ಆವೃತ್ತಿ ವಿನ್ಯಾಸ**
ಫ್ಲವರ್‌ಗ್ರಾಫಿಕ್ ಡಿಸೈನ್ ಸ್ಟುಡಿಯೋ
080 26643097 / 9880288378
info@flowergrafic.com

**ಮುದ್ರಣ**
ಲಕ್ಷ್ಮೀ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು - 560018.
ಕರ್ನಾಟಕ

ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ 'ಲರ್ನಿಂಗ್ ಕರ್ವ್', ಎಂಬುದು ಶಿಕ್ಷಣವನ್ನು ಕುರಿತಾದ ಪ್ರಕಟಣೆಯಾಗಿದೆ. ಇದು ಸಾರ್ವಕಾಲಿಕ ಮಹತ್ವವುಳ್ಳ ಮತ್ತು ಮೌಲ್ಯವುಳ್ಳ ಸಾಂದರ್ಭಿಕ ಹಾಗೂ ನಿರ್ದಿಷ್ಟ ವಿಷಯಾಧಾರಿತ ಚರ್ಚಾ ವಿಷಯಗಳನ್ನು ಶಿಕ್ಷಕರು, ಶಿಕ್ಷಕ ಶಿಕ್ಷಕರು, ಶಾಲಾ ಮುಖ್ಯಸ್ಥರು, ಶಿಕ್ಷಣ ಕಾರ್ಯಕರ್ತರು, ಪೋಷಕರು ಹಾಗೂ ಸರ್ಕಾರೇತರ ಸಂಸ್ಥೆಗಳಿಗೆ ತಲುಪಿಸುವ ಮಹತ್ತರ ಆಶಯವನ್ನು ಹೊಂದಿದೆ. ಇದು ವಿಭಿನ್ನ ಅಭಿಪ್ರಾಯಗಳನ್ನು ಮತ್ತು ದೃಷ್ಟಿಕೋನಗಳನ್ನು ವ್ಯಕ್ತಪಡಿಸಲು ವೇದಿಕೆಯನ್ನು ಒದಗಿಸುವುದೇ ಅಲ್ಲದೆ ಹೊಸಹೊಸ ಮತ್ತು ತಜ್ಞ ವಿಚಾರಧಾರೆಗಳನ್ನು, ಆಲೋಚನೆಯನ್ನು ಪ್ರಚೋದಿಸುವ ದೃಷ್ಟಿಕೋನಗಳನ್ನು ಹಾಗೂ ನವೀನ ಬೋಧನಾ ವಿಧಾನಗಳ ಕಥನಗಳನ್ನು ಹಂಚಿಕೊಳ್ಳಲು ಉತ್ತೇಜಿಸುತ್ತದೆ. ಶೈಕ್ಷಣಿಕ ರಂಗದ ಈ ವಿಚಾರ ಮಂಥನದಲ್ಲಿ ಶೈಕ್ಷಣಿಕ ಜ್ಞಾನ ಮತ್ತು ಪ್ರಾಯೋಗಿಕ ಅನುಭವಗಳ ನಡುವೆ ಸಮತೋಲನವನ್ನು ಕಾಯ್ದುಕೊಳ್ಳುವ ಪ್ರಯತ್ನ ನಮ್ಮದಾಗಿದೆ.



ಈ ಸಂಚಿಕೆಯು ಇಂಗ್ಲಿಷ್‌ನಲ್ಲಿ ಪ್ರಕಟವಾದ 'ಲರ್ನಿಂಗ್ ಕರ್ವ್' ಸಂಚಿಕೆ 15, ಏಪ್ರಿಲ್ 2023ರ ಕನ್ನಡ ಅನುವಾದವಾಗಿದೆ. ಕನ್ನಡ ಸಂಚಿಕೆಯು ಮೇ 2024ರಲ್ಲಿ ಪ್ರಕಟಗೊಂಡಿದ್ದು, ಅದರ ಪಿಡಿಎಫ್ ಮತ್ತು ಬಿಡಿಲೇಖನಗಳು ಈ ಲಿಂಕ್‌ನಲ್ಲಿ ಲಭ್ಯವಿರುತ್ತವೆ:
https://anuvadasampada.azimpremjiuniversity.edu.in/

# ಸಂಪಾದಕರ ಮಾತು



ನನ್ನ ಏಳು ವರ್ಷದ ಹೊಸ ಗೆಳತಿಗೆ ಉಡುಗೊರೆಯಾಗಿ ನೀಡಲು, ಡಾ. ಸಾಯ್ಸ್ ಅವರ "ಓಹ್, ದ ಪ್ಲೇಸಸ್ ಯು ವಿಲ್ ಗೋ!" ಎಂಬ ಪುಸ್ತಕವನ್ನು, ಅದು ಪ್ರಕಟವಾದ ಮೂರು ದಶಕಗಳ ಬಳಿಕ, ಖರೀದಿಸಿದೆ. ಅದರ ಪುಟಗಳನ್ನು ತಿರುವಿಹಾಕುತ್ತಿದ್ದ ನನಗೆ, " ನೀನು ಉತ್ತಮರಲ್ಲಿ ಉತ್ತಮಳಾಗುತ್ತೀಯ" ಹಾಗೂ " ನೀನು ಉಳಿದವರಿಗಿಂತ ಉನ್ನತಸ್ಥಾನಕ್ಕೆ ಏರುತ್ತೀಯ" ಎಂಬ ಪದಗುಚ್ಛಗಳು ಕಣ್ಣಿಗೆ ಬಿದ್ದು, ಹೌಹಾರಿದೆ. ಕಾಲ ಸರಿದಂತೆ ನಮ್ಮ ಸಂವೇದನೆಗಳೆಷ್ಟು ಬದಲಾಗಿವೆ! ಅಂದಿನ ತರಗತಿಗಳಲ್ಲಿ ಕಂಡುಬರುತ್ತಿದ್ದ ಸ್ಪರ್ಧಾತ್ಮಕ ಮನೋಭಾವವು ಇಂದು ಸಹಕಾರದ ಮನೋಭಾವಕ್ಕೆ ಎಡೆಮಾಡಿದೆ. ಅದು ಆಫ್ರಿಕನ್ನರ "ಉಬುಂಟು" (ubuntu) ತತ್ತ್ವವಾಗಿರಬಹುದು ಅಥವಾ ನಮ್ಮದೇ ಆದ "ಸದ್ಭಾವನಾ" ತತ್ತ್ವವಾಗಿರಬಹುದು; ಇಂದು ನಮ್ಮ ತರಗತಿಗಳಲ್ಲಿನ ಗಮನವು ಬಾಂಧವ್ಯ, ಭ್ರಾತೃತ್ವ ಹಾಗೂ ಸೇರ್ಪಡೆ ಮನೋಭಾವಗಳ ಕಡೆಗೆ ಹರಿದಿವೆ. ಯೋಗಕ್ಷೇಮ (Wellbeing) ಎಂಬುದೊಂದು ಜಟಿಲ ಪರಿಕಲ್ಪನೆಯಾಗಿದ್ದು, ಇದಕ್ಕಾಗಿ ಸ್ವಾಸ್ಥ್ಯದೆಡೆಗೆ ಗಮನ ಕೇಂದ್ರೀಕರಿಸುವ ಶಾಲಾ ಸಂಸ್ಕೃತಿಯು ಮುಖ್ಯವಾದರೂ, ಅತ್ಯಂತ ವ್ಯಕ್ತಿಗತವಾದ ಗಮನವನ್ನು ಸಹ ನೀಡಬೇಕಾಗುತ್ತದೆ. ಮಕ್ಕಳು ಕೆಲಸ ಮಾಡುವುದು ಭಾವನೆಗಳ ಸ್ತರದಲ್ಲಿ. ಮಕ್ಕಳ ಯೋಗಕ್ಷೇಮವು ಶಾಲೆ, ಶಿಕ್ಷಕರು, ಇತರ ವಿದ್ಯಾರ್ಥಿಗಳು ಹಾಗೂ ಅಲ್ಲಿನ ಸಮಗ್ರ ವಾತಾವರಣ ಅವರ ಮನಸ್ಸಿನ ಮೇಲೆ ಯಾವ ಪ್ರಭಾವ ಬೀರುತ್ತದೆ ಎಂಬುದನ್ನು ಅವಲಂಬಿಸಿದೆ. ಮಕ್ಕಳ ನಡುವೆ ಕೆಲಸ ಮಾಡುತ್ತಿರುವ ಶಿಕ್ಷಕರ ಕಥೆಗಳು ಹಾಗೂ ಅನುಭವಗಳು ಬಹಳಷ್ಟಿದ್ದು, ಬಹು ವಿಭಿನ್ನವೂ ಆಗಿದ್ದು, ನಾವೀಗ, ಈ ಎರಡನೇ ಭಾಗದಲ್ಲಿ, ಅವುಗಳನ್ನು ನಿಮ್ಮ ಮುಂದೆ ಪ್ರಸ್ತುತಪಡಿಸಲಿದ್ದೇವೆ ಎನ್ನುವುದರಲ್ಲಿ ಅಚ್ಚರಿಯೇನಾದರೂ ಇದೆಯೇ?

ಈ ಸಂಚಿಕೆಯ ಸಂಪಾದನೆಯ ಸಮಯದಲ್ಲಿ ಈ ವಿಷಯ ನಮ್ಮನ್ನು ಅದೆಷ್ಟು ಮೂಕವಿಸ್ಮಿತರನ್ನಾಗಿಸಿತು ಎಂದರೆ, ನಾವು ಭಾಷೆಯ ಕ್ಲಿಷ್ಟತೆಗಳ ಕಡೆಗೆ ಗಮನಹರಿಸುವುದಕ್ಕೆ ಸಾಧ್ಯವೇ ಆಗಲಿಲ್ಲ. ನಾವು, "ಸಮನ್ವಯ (inclusion) ಎಂದರೆ ನಿಜಕ್ಕೂ ಏನು?" ಎಂಬ ಪ್ರಶ್ನೆಯನ್ನು ಕುರಿತು ಆಳವಾಗಿ ಯೋಚಿಸುವಂತೆ ನಮ್ಮ ಲೇಖಕರು ಮಾಡಿದರು. "ಹಾಗೆಂದರೆ, ಕೇವಲ ವಿಶೇಷ ಅಗತ್ಯವಿರುವ ಮಕ್ಕಳನ್ನು ಉಳಿದವರೊಂದಿಗೆ ಕಲಿಯಲು ಅನುವು ಮಾಡಿಕೊಡುವುದು ಎಂದಷ್ಟೆಯೇ?" ಸೌಲಭ್ಯವಂಚಿತ ಸಮುದಾಯಗಳಿಂದ ಬರುವ ಮಕ್ಕಳಿಗೆ ಶಾಲೆಯು ಅವರ ಸರ್ವಾಂಗೀಣ ಅಭಿವೃದ್ಧಿಗೆ ಇರುವ ಏಕಮಾತ್ರ ಅವಕಾಶವೆಂದೂ, ಹಲವು ಸರ್ಕಾರಿ ಶಾಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದಾಖಲಾಗದ ಮಕ್ಕಳು ಶಾಲೆಗೆ ದಾಖಲಾದ ತಮ್ಮ ಅಣ್ಣ/ಅಕ್ಕಂದಿರೊಂದಿಗೆ ಬರುತ್ತಾರೆ ಎಂಬುದನ್ನು ಸಹ ನಮ್ಮ ಲೇಖಕರು ನಮಗೆ ನೆನಪುಮಾಡಿಕೊಟ್ಟರು. ಶಾಲೆಯಿಂದ ಬಹಿಷ್ಕರಿಸಲ್ಪಟ್ಟ ಮಗುವಿನ ಭಾವನೆ ಹೇಗಿರುತ್ತದೆ ಎಂಬುದನ್ನು ಪರಿಗಣಿಸುವಂತೆ ನಮ್ಮನ್ನು ಪ್ರತಿಬಂಧಿಸುವ ಹಲವು ಲೇಖನಗಳು ಇಲ್ಲಿವೆ. ಸಂಘರ್ಷದಲ್ಲೇ ಮುಳುಗಿರುವ ಕುಟುಂಬಗಳಿಂದ ಬರುವ ಮಗುವಿಗೆ ಶಾಲೆಯಲ್ಲಿ ಹೇಗೆ ಅನಿಸುತ್ತದೆ? ಮಗು ತಲೆಬಾಚಿಕೊಳ್ಳದೆ ಶಾಲೆಗೆ ಬರುವುದಾದರೂ ಏಕೆ? ತಾವು ಬಡವರಾದ್ದರಿಂದ ಅಥವಾ ಕೀಳು ಜಾತಿಯವರಾದ್ದರಿಂದ ಯಾರೂ ತಮ್ಮ ಮನೆಗೆ ಬರುವುದಿಲ್ಲ ಎಂದು ಮಗು ಭಾವಿಸುತ್ತದಾದರೂ ಏಕೆ? ತಮ್ಮ ವಿದ್ಯಾರ್ಥಿಗಳ ಜೀವನದಲ್ಲಿ ಏನಾಗುತ್ತಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ತರಗತಿಗಳಲ್ಲಿ ಶಿಕ್ಷಕರು ಮಗುವಿನೊಂದಿಗೆ ತೊಡಗಬಹುದಾದ ಮಾತುಕತೆಯ ವಿಧಾನ ಏಕಮಾತ್ರ ಪ್ರಮುಖ ಚಟುವಟಿಕೆಯಾಗಿ ಹೊರಹೊಮ್ಮಿದೆ. ಧರ್ಮ ಅಥವಾ ಸಮುದಾಯಗಳ ವಿರುದ್ಧ ಕಂಡುಬರುವ ಪೂರ್ವಾಗ್ರಹಗಳಿಗೆ ಸಂಬಂಧಿಸಿದಂತೆ ತರ್ಕ ಮತ್ತು ವಿಚಾರಗಳ ಆಧಾರದ ಮೇಲೆ ತಂಡದಲ್ಲಿ ನಡೆಯುವ ಸಂಭಾಷಣೆಗಳು ಕೆಲವು ಸಾಮಾಜಿಕ ಅಡ್ಡಗೋಡೆಗಳನ್ನು ಕೆಡವುವಂತೆ ತೋರಿದರೆ, ಮಕ್ಕಳೊಡನೆ ಶಿಕ್ಷಕರು ವೈಯಕ್ತಿಕವಾಗಿ, ಅನೌಪಚಾರಿಕವಾಗಿ ನಡೆಸುವ ಮಾತುಕತೆಗಳು ಖಾಸಗಿಗೊಳಗಾಗಬಲ್ಲ ಮಕ್ಕಳಿಗೆ ಬದುಕಿನಲ್ಲಿ ಮುಂದೆ ಸಾಗಲು ಅಗತ್ಯವಿರುವ ಭಾವನಾತ್ಮಕ ಸಾಧನ, ಸಂಪತ್ತನ್ನು ನೀಡಿರುವುದು ಸಾಬೀತಾಗುತ್ತದೆ. ಓರ್ವ ಲೇಖಕರು, ಮಕ್ಕಳಲ್ಲಿನ ಸಂಕಟದ

ಸಂಕೇತಗಳಾಗಿ ನಾವು ಗಮನಿಸಬೇಕಿರುವ ರೀತಿಗೆ "ಮಾನಸಿಕ ಆಘಾತ ಮಸೂರ" (trauma lens) ಎಂಬ ಪಾರಿಭಾಷಿಕ ಪದವನ್ನು ಹುಟ್ಟುಹಾಕಿದ್ದಾರೆ. ತಮ್ಮ ಜೀವನದ ಅನುಭವಗಳನ್ನು ಮಕ್ಕಳು ವ್ಯಕ್ತಪಡಿಸುವಂತಾಗಲು ಕಥೆ ಹೇಳುವುದು ಅದೆಷ್ಟು ಶಕ್ತಿಶಾಲಿ ಸಾಧನ ಎಂಬುದನ್ನು ಹಲವು ಲೇಖಕರು ಪುನರುಚ್ಚರಿಸಿದ್ದಾರೆ. ಯಾವ ರೀತಿಯ ಕಥೆಗಳನ್ನು ಆರಿಸಿಕೊಳ್ಳಬೇಕು ಹಾಗೂ ಅವುಗಳ ಸುತ್ತ ಸಂಭಾಷಣೆಯನ್ನು ಹೆಣೆಯುವುದು ಹೇಗೆ ಎಂಬುದರ ಕುರಿತು ಈ ಲೇಖನಗಳಲ್ಲಿ ಸಲಹೆಗಳಿವೆ. ವಿಭಿನ್ನ ಅಸ್ಮಿತೆಗಳುಳ್ಳ ಮಕ್ಕಳ ನಡುವೆ ಪ್ರೀತಿ, ವಿಶ್ವಾಸ ಹಾಗೂ ಗೌರವಗಳನ್ನು ಪೋಷಿಸಲು ಮಿಶ್ರ ತಂಡದ ಚಟುವಟಿಕೆಗಳನ್ನು ಬಳಸುವ ಬಗ್ಗೆಯೂ ಲೇಖಕರು ಒತ್ತು ನೀಡಿದ್ದಾರೆ. ಸಾರಭೂತವೂ, ಜೀವನವನ್ನು ಸಮೃದ್ಧಗೊಳಿಸು–ವಂತಹದ್ದೂ ಆದ ಮೌಲ್ಯಗಳ ವಿಷಯವಾಗಿ ಮಕ್ಕಳನ್ನು ಸಂವೇದನಾಶೀಲರನ್ನಾಗಿಸುವ ನಿಟ್ಟಿನಲ್ಲಿ ಶಾಲೆ ಹಾಗೂ ಶಿಕ್ಷಕರ ಪ್ರಯತ್ನಗಳ ಬಗ್ಗೆ ಓದುವುದು ತುಂಬಾ ಉತ್ಸಾಹದಾಯಕ–ವಾಗಿತ್ತು. ಮೊದಲ ಭಾಗದಲ್ಲಿ ಛತ್ತೀಸ್‌ಗಢದ ಶಾಲೆಗಳಲ್ಲಿ ಜಾರಿ ಮಾಡಲಾಗುತ್ತಿರುವ "ಸದ್ಭಾವನಾ ವಿದ್ಯಾಲಯ"ದ ಉಪಕ್ರಮವನ್ನು ಕುರಿತಾದ ಲೇಖನವೊಂದನ್ನು ನಾವು ಪ್ರಕಟಿಸಿದ್ದೆವು. ಗೌರವ, ಅನುಕಂಪ ಹಾಗೂ ಸಹಕಾರಗಳನ್ನು ಅವಲಂಬಿಸಿದ ಸಂಬಂಧಗಳನ್ನು ಮಕ್ಕಳು ಕಟ್ಟಿಕೊಳ್ಳಲು ನೆರವಾಗುವಂತೆ ತಮ್ಮ ಅಭ್ಯಾಸಗಳನ್ನು ಬದಲಿಸಿಕೊಳ್ಳುತ್ತಿರುವ ಈ ಶಾಲೆಗಳ ಮೂವರು ಲೇಖಕರ ದನಿಗಳನ್ನು ನಾವಿಲ್ಲಿ ಸಾದರಪಡಿಸುತ್ತಿದ್ದೇವೆ.

ಡಾ. ಸಾಯ್ಸ್ ಅವರ ಪುಸ್ತಕದ ಪ್ರತಿ ನನ್ನ ಬೀರುವಿನಲ್ಲಿ ಇನ್ನೂ ಭದ್ರವಾಗಿ ಉಳಿದಿದೆ. ನನ್ನ ಪುಟ್ಟ ಗೆಳತಿಯು ಈ ಪುಸ್ತಕವು ಅವಳಿಗೆ ತೋರಲಿರುವ ಅಸಂಖ್ಯಾತ ಸಾಧ್ಯತೆಗಳ ವಿಸ್ಮಯಕ್ಕೆ ತನ್ನನ್ನು ತೆರೆದುಕೊಳ್ಳುತ್ತಾಳೋ ಅಥವಾ 'ತಾನು ಇತರರಿಗಿಂತ ಉತ್ತಮಳಾಗಬೇಕು' ಎಂಬಂತಹ ಯಾವ ವಿಚಾರಗಳಿಗೆ ಮಕ್ಕಳನ್ನು ಈಡು ಮಾಡಕೂಡದೆಂದು ನಾವು ಬಯಸುವೆವೋ, ಅಂತಹ ವಿಚಾರಗಳನ್ನೇ ಅಂತರ್ಗತ ಮಾಡಿಕೊಳ್ಳುತ್ತಾಳೋ ಎಂಬುದು ನನಗೆ ಖಚಿತವಾಗಿ ತಿಳಿಯದಾಗಿದೆ.

ನೀವು ಈ ಪುಟವನ್ನು ತಿರುವುದರೊಳಗಾಗಿ, ಇದು ನಿಮ್ಮ ನಿಯತಕಾಲಿಕವೆಂದೂ, ನಿಮ್ಮ ಅಭಿಪ್ರಾಯವನ್ನು ಕೇಳಲು ನಾವು ಬಯಸುತ್ತೇವೆಂದೂ ನೆನಪಿಸಲು ಬಯಸುತ್ತೇನೆ. ಆದ್ದರಿಂದ, ನಿಮ್ಮ ಮೌಲ್ಯಯುತ ಸಲಹೆಗಳನ್ನು ಕಳುಹಿಸುತ್ತಲಿರಿ.

**ಶೆಫಾಲೀ ತ್ರಿಪಾಠಿ ಮೆಹ್ತಾ**
ಸಹ ಸಂಪಾದಕರು
shefali.mehta@azimpremjifoundation.org

# ಪರಿವಿಡಿ



## ಧ್ವನಿಗಳು

# ಪರಿವಿಡಿ

# ತರಗತಿಯಲ್ಲಿ ಭ್ರಾತೃತ್ವವನ್ನು ಕಟ್ಟುವ ಬಗೆ

ಅಮ್ಮನ್ ಮದನ್

ಪರಾನುಭೂತಿಯ ಮಹತ್ತ್ವವನ್ನು ಅರ್ಥ ಮಾಡಿಕೊಳ್ಳುವುದು ಮತ್ತು ಭಿನ್ನತೆಯನ್ನು ಒಪ್ಪಿಕೊಳ್ಳುವುದು ಜೀವನದಲ್ಲಿ ಬಹಳ ಮುಖ್ಯ. ನಮ್ಮ ಬೆಳವಣಿಗೆಯ ದೃಷ್ಟಿಯಿಂದ ಮತ್ತು ಜಗತ್ತಿನಲ್ಲಿ ನಮ್ಮ ಸ್ಥಾನವನ್ನು ಗಟ್ಟಿಗೊಳಸಲು ಇದು ಅತ್ಯಗತ್ಯ ಎಂಬುದನ್ನು ಲೇಖಕರು ಚಿಂತನೆಗೆ ಹಚ್ಚುವ ರೀತಿಯಲ್ಲಿ ಇಲ್ಲಿ ವಿಶ್ಲೇಷಿಸಿದ್ದಾರೆ. ಮಗುವಿನ ಭಾವನಾತ್ಮಕ ಬೆಳವಣಿಗೆಯನ್ನು ಕುಂಠಿತಗೊಳಸ-ಬಹುದಾದ ಸಾಂಪ್ರದಾಯಿಕ ಪೂರ್ವಾಗ್ರಹಗಳು (Traditional biases) ತೀರಾ ಸಾಮಾನ್ಯವಾಗಿದ್ದು, ಶಿಕ್ಷಕರು ಮತ್ತು ದೊಡ್ಡವರು ಮಕ್ಕಳನ್ನು ಹೆಚ್ಚುಹೆಚ್ಚು ತೊಡಗಿಸಿಕೊಳ್ಳುವಂತೆ ಮಾಡುವುದರಿಂದ ಅವರನ್ನು ಈ ಸಂಕೋಲೆಯಿಂದ ಮುಕ್ತರನ್ನಾಗಿ ಮಾಡಬೇಕು.

ನನ್ನ ವಿಶ್ವವಿದ್ಯಾಲಯಕ್ಕೆ ನಾನಾ ಸಮುದಾಯಗಳು, ವರ್ಗಗಳು ಮತ್ತು ಲಿಂಗಕ್ಕೆ ಸೇರಿದ ವಿದ್ಯಾರ್ಥಿಗಳು ಬರುತ್ತಾರೆ. ಅವರು ಇಲ್ಲಿನ ಅಧ್ಯಯನವನ್ನು ಮುಗಿಸಿ ಜೀವನದಲ್ಲಿ ಮುಂದಿನ ಹೆಜ್ಜೆ ಇಡುವ ಸಂದರ್ಭದಲ್ಲಿ ಒಂದು ಮಾತು ಹೇಳುವುದನ್ನು ನಾನು ಕೇಳಸಿಕೊಳ್ಳುತ್ತೇನೆ; 'ಆ ಸಮುದಾಯಕ್ಕೆ ಸೇರಿದವರಿಂದ ಸದಾ ದೂರವಿರುತ್ತಿದ್ದೆ. ಆದರೆ ಅವರು ಇಲ್ಲಿ ನಿಜಕ್ಕೂ ಎಲ್ಲ ವಿಷಯದಲ್ಲೂ ಸರಿಯಾಗಿರುವುದನ್ನು ಗಮನಿಸಿದ್ದೇನೆ. ನಾನು ಅವರ ಗೆಳೆತನವನ್ನೂ ಮಾಡಿದ್ದೇನೆ.' ಇಷ್ಟು ಮಾತ್ರವಲ್ಲದೆ, 'ಒಬ್ಬ ಮಹಿಳೆ ಅಥವಾ ಪುರುಷನ ಜೊತೆ ಗೆಳೆತನ ಬೆಳೆಸಬಹುದು ಎಂದು ಯೋಚಿಸಿಯೂ ಇರಲಿಲ್ಲ. ಆದರೆ ಈಗ ನಾನು ಅಂಥವರ ಸ್ನೇಹಿತನಾಗಿದ್ದೇನೆ' ಎಂದು ಹೇಳುವುದನ್ನೂ ಕೇಳಸಿ-ಕೊಂಡಿದ್ದೇನೆ. ಕೆಲವೊಮ್ಮೆ, ಲೈಂಗಿಕ ಅಲ್ಪಸಂಖ್ಯಾತರ ಜೊತೆಗೂ ಸ್ನೇಹ ಬೆಳೆಸಿಕೊಂಡಿರುವುದನ್ನು ಅವರು ಹೇಳದರು. ಇದು ನನ್ನ ವಿಶ್ವವಿದ್ಯಾಲಯದ ವಿಶೇಷತೆ ಎಂದೇನೂ ನಾನು ಹೇಳುತ್ತಿಲ್ಲ. ಇದು ದೇಶದ ಶಾಲಾ- ಕಾಲೇಜುಗಳ ಕ್ಯಾಂಪಸ್‌ಗಳಲ್ಲಿ ನಡೆಯುತ್ತಿರುವ ಸಂಗತಿಗಳು. ಇಂತಹ ಭ್ರಾತೃತ್ವದ ವಾತಾವರಣವನ್ನು ಸೃಷ್ಟಿಸಲು ಸಾಕಷ್ಟು ಅಡ್ಡಿ ಆತಂಕಗಳು ಇವೆ ಎನ್ನುವುದು ಬೇರೆಯೇ ಮಾತು. ಇದನ್ನೆಲ್ಲ ಹೇಗೆ ಅರ್ಥ ಮಾಡಿಕೊಳ್ಳಲು ಸಾಧ್ಯ? ಜನ ತಮ್ಮ ಭಯ ಮತ್ತು ದ್ವೇಷ ಮನೋಭಾವನೆಯಿಂದ ಯಾವಾಗ ಹೊರಬರುತ್ತಾರೆ? ಇಂಥದ್ದನ್ನೆಲ್ಲ ನಾವು ಹೇಗೆ ಬೆಂಬಲಿಸಬಹುದು ಮತ್ತು ಪರಿಹರಿಸಬಹುದು? ಜನರ ಇಂತಹ ಭಯ ಮತ್ತು ದ್ವೇಷಕ್ಕೆ ಅನೇಕ ಕಾರಣಗಳು ಇದ್ದಿರಬಹುದು. ಒಂದು ಗುಂಪು ಇನ್ನೊಂದನ್ನು ಶೋಷಿಸುತ್ತಿರುವುದಕ್ಕೆ ಸುದೀರ್ಘವಾದ ಇತಿಹಾಸವೂ ಇರಬಹುದು. ಒಂದು ಕಾಲದಲ್ಲಿ ನಾನು ಸಂಚಾರಿ ಗ್ರಂಥಾಲಯವನ್ನು ನಡೆಸುತ್ತಿದ್ದೆ. ಆಗೆಲ್ಲ ವಾರಕ್ಕೊಮ್ಮೆ ಹೊರವಲಯದ ಗ್ರಾಮಕ್ಕೆ ತೆರಳುತ್ತಿದ್ದೆ. ಆಗ ಅನೇಕ ದಲಿತ ಮಕ್ಕಳು ಬರುತ್ತಿದ್ದುದನ್ನು ನೋಡಿ ನಿಜಕ್ಕೂ ಖುಷಿಯಾಗುತ್ತಿತ್ತು. ಆ ಸಂದರ್ಭದಲ್ಲಿ ನಾನು ಗ್ರಾಮದ ಮಧ್ಯದಲ್ಲಿ ಒಂದು ಚೆಂದದ, ವಿಶಾಲವಾದ ಆಲದ ಮರವಿರುವುದನ್ನು ಗಮನಿಸಿದೆ. ಅಲ್ಲಿಗೆ ನಮ್ಮ ಗ್ರಂಥಾಲಯವನ್ನು ಸ್ಥಳಾಂತರಿಸುವಂತೆ ಮಕ್ಕಳಗೆ ಸಲಹೆ ನೀಡಿದೆ. ಇದರಿಂದ ಹೆಚ್ಚಿನ ಜನ ಅಲ್ಲಿಗೆ ಬರಲು ಸಾಧ್ಯವಾಗುತ್ತದೆ ಎಂಬುದು ನನ್ನ ಯೋಚನೆಯಾಗಿತ್ತು. ಆದರೆ ಮಕ್ಕಳು ಅದಕ್ಕೆ ಒಪ್ಪಲಿಲ್ಲ. ಅಲ್ಲಿಗೆ ಹೋಗುವುದು ಬೇಡ ಎಂದೇ ಅವರು ಸಲಹೆ ಮಾಡಿದರು. ಅದಕ್ಕೆ ಮುಖ್ಯವಾದ ಕಾರಣವೇನೆಂದರೆ ಆ ಆಲದ ಮರ ಮೇಲ್ಜಾತಿಯವರು ವಾಸಿಸುತ್ತಿದ್ದ ಪ್ರದೇಶದ ಮಧ್ಯದಲ್ಲಿತ್ತು. ಅಂತಹ ಪ್ರದೇಶಗಳಗೆ ಮಕ್ಕಳು ಹೋದರೆ ಅವರಿಗೆ ಕಿರುಕುಳ ನೀಡುವುದು ಮತ್ತು ನಿಂದಿಸುವುದು ನಿಶ್ಚಿತವಾಗಿತ್ತು. ಹಾಗೆ ಮಾಡಿದರೆ ಅವರು ಅದರಿಂದ ದೂರವೇ ಇರಬೇಕಾಗುತ್ತಿತ್ತು.

ಇಂತಹ ಭಯ, ತಿರಸ್ಕಾರ, ಅಸಮ್ಮತಿ ಮತ್ತು ದ್ವೇಷಕ್ಕೆ ಗುಂಪುಗಳ ನಡುವೆ ಸಂಪನ್ಮೂಲ, ಅಧಿಕಾರ ಮತ್ತು ಗೌರವಕ್ಕಾಗಿ ನಡೆದ ಹೋರಾಟಗಳು ಕಾರಣವಾಗಿರಬಹುದು. ನಾನಾ ರೀತಿಯ ಇತಿಹಾಸ, ಹಿನ್ನೆಲೆ ಮತ್ತು ಸಾಮಾಜಿಕ ಪರಿಸ್ಥಿತಿಗಳು ಸಾಮಾಜಿಕ ಗುಂಪುಗಳು ಮತ್ತು ಸಮುದಾಯಗಳ ನಡುವೆ ದ್ವೇಷಮಯ ವಾತಾವರಣ ನಿರ್ಮಾಣಗೊಳ್ಳಲು ದಾರಿ ಮಾಡಿಕೊಟ್ಟಿರಬಹುದು. ಹೆಚ್ಚಿನ ವೈರತ್ವ ಮತ್ತು ಭಯವನ್ನು ಹುಟ್ಟುಹಾಕಿ ತಮ್ಮ ಬೇಳೆ ಬೇಯಿಸಿಕೊಳ್ಳುವ ಸಂಘಟನೆಗಳು ಮತ್ತು ನಾಯಕರು ಇಂತಹ ಘಟನೆಗಳಗೆ ಕುಮ್ಮಕ್ಕು ನೀಡಿರುವ ಸಾಧ್ಯತೆ ಕೂಡ ಇರುತ್ತದೆ. ಹೆಚ್ಚುಹೆಚ್ಚು ಸಂಪನ್ಮೂಲಗಳ ಸಮಾನ ವಿತರಣೆಯೊಂದಿಗೆ ಸಾಮಾಜಿಕ ವ್ಯವಸ್ಥೆಯನ್ನು ಸೃಷ್ಟಿಸುವ ಮೂಲಕ ಇದಕ್ಕೊಂದು ಸಂಭವನೀಯ ಪರಿಹಾರವನ್ನು ಕಂಡುಕೊಳ್ಳಬಹುದು. ಈ ಮಧ್ಯೆ ಪ್ರೀತಿ, ಗೌರವ ಮತ್ತು ಮಾತುಕತೆಯ ಸಂಸ್ಕೃತಿ ಮತ್ತು ಆ ಮೂಲಕ ಸಮಾನತೆಯ ಪ್ರಜ್ಞೆಯನ್ನು ಬೆಳೆಸುವಲ್ಲಿ ಶಾಲೆಗಳು ಮತ್ತು ಯುವ ಸಂಘಟನೆಗಳು ಮಹತ್ವದ ಪಾತ್ರವನ್ನು ನಿರ್ವಹಿಸಬಲ್ಲವು.

## ಸಹಕಾರಕ್ಕೆ ಬೇಕಾದ ಪರಿಸ್ಥಿತಿಯ ನಿರ್ಮಾಣ

ಸಾಮಾನ್ಯವಾಗಿ ಕೆಲವು ಗುಂಪುಗಳು ಪರಸ್ಪರ ಪೈಪೋಟಿಗೆ ಇಳದಾಗ ಭಯ ಮತ್ತು ಅಪನಂಬಿಕೆ ಹೆಚ್ಚುತ್ತ ಹೋಗುತ್ತದೆ. ಆದರೆ, ನಾನಾ ಗುಂಪುಗಳು ಮತ್ತು ಸಮುದಾಯಗಳಗೆ ಸೇರಿದ ಸದಸ್ಯರು ತಮ್ಮ ಗುರಿಗಳ ಸಾಧನೆಗಾಗಿ ಪರಸ್ಪರ ಸಹಕರಿಸಲು ಒಂದಾದರೆ ಅವರು ಒಬ್ಬರಿಗೊಬ್ಬರು ನಂಬಿಕೆಯನ್ನು ಹುಟ್ಟಿಸುವ ಮತ್ತು ಭಯವನ್ನು ಕಳೆಯುವ ಕೆಲಸವನ್ನು ಮಾಡಲು ಸಾಧ್ಯವಾಗುತ್ತದೆ ಎಂದು ಅಧ್ಯಯನಗಳು ತೋರಿಸಿವೆ.

ಉದಾಹರಣೆಗೆ ಕೆನಡಾದ ಆರ್ಥಶಾಸ್ತ್ರಜ್ಞ ಮ್ಯಾಟ್ ಲೋವೆ ಅವರು ಉತ್ತರಪ್ರದೇಶದಲ್ಲಿ ನಡೆಸಿದ ಪ್ರಯೋಗವೇ ಇದಕ್ಕೆ ಸಾಕ್ಷಿ. ಜೊತೆಯಲ್ಲಿ ಕ್ರಿಕೆಟ್ ಆಡುವ ಸಲುವಾಗಿ ಅವರು ನಾನಾ ಜಾತಿಗಳ ಯುವಕರನ್ನು ಒಟ್ಟುಗೂಡಿಸಿದರು. ಅವರು ನಾನಾ ಜಾತಿಗೆ ಸೇರಿದ ಕೆಲವು ತಂಡಗಳು ಹಾಗೂ ಒಂದೇ ಜಾತಿಗೆ ಸೇರಿದ ಕೆಲವು ತಂಡಗಳನ್ನು ರಚಿಸಿದರು. ವಿಭಿನ್ನ ಜಾತಿಗಳಿಗೆ ಸೇರಿದ ಆಟಗಾರರು ಮಿಶ್ರ ಟೀಮ್‌ಗಳಲ್ಲಿದ್ದಾಗ ಅವರು ಹೆಚ್ಚು ನಂಬಿಕೆ ಮತ್ತು ಇಷ್ಟದಿಂದ ಆಟವಾಡಲು ಶುರುಮಾಡುತ್ತಾರೆ ಎಂಬುದು ಲೋವೆ ಅವರು ಕಂಡುಕೊಂಡ ಸತ್ಯ. ಇನ್ನೂ ಅನೇಕ ಅಧ್ಯಯನಗಳು ಈ ಪ್ರವೃತ್ತಿಯನ್ನು ದೃಢಪಡಿಸಿವೆ. ಪೈಪೋಟಿಯ ಉದ್ದೇಶದಿಂದ ನಾನಾ ಸಮುದಾಯಗಳು ಒಂದಾದರೆ ಆಗ ಅವರ ಸಂಬಂಧಗಳು ಹದಗೆಡಬಹುದು. ಆದರೆ ಸಹಭಾಗಿತ್ವದ ದೃಷ್ಟಿಯಿಂದ ಅಥವಾ ಒಂದೇ ಗುರಿಗಾಗಿ ಪರಸ್ಪರ ಸಹಕಾರದ ದೃಷ್ಟಿಯಿಂದ ಕೆಲಸ ಶುರು ಮಾಡಿದರೆ ಅವರ ನಡುವಿನ ಪ್ರೀತಿ ಮತ್ತು ಗೌರವ ಹೆಚ್ಚಾಗುತ್ತದೆ. 1954ರಲ್ಲಿಯೇ ಇಂತಹ ಸಂಗತಿಯ ಕಡೆಗೆ ಬೊಟ್ಟು ಮಾಡಿದ ಮೊದಲ ಮನಃಶಾಸ್ತ್ರಜ್ಞ ಎಂದರೆ ಅಮೆರಿಕದ ಗಾರ್ಡನ್ ಆಲ್ಪೋರ್ಟ್ (Gordon Allport). ಇವೆಲ್ಲವೂ ಸ್ವಯಂಚಾಲಿತವಾಗಿ ಸಂಭವಿಸುವುದಿಲ್ಲ, ಅದಕ್ಕೆ ಅಧಿಕಾರಿಗಳಿಂದ ಬೆಂಬಲ ಬೇಕಾಗುತ್ತದೆ. ಇಲ್ಲದೇ ಹೋದರೆ ಅದು ಕಾರ್ಯಗತವಾಗುವುದಿಲ್ಲ ಎಂದು ಅವರು ಪ್ರತಿಪಾದಿಸಿದ್ದರು. ನಾನಾ ಸಮುದಾಯಗಳ ಜನ ನಾವೆಲ್ಲ ಸಮಾನರು ಮತ್ತು ಅಂತಸ್ತು ಅಥವಾ ಅಧಿಕಾರದಲ್ಲಿ ಭಿನ್ನತೆಯಿಲ್ಲ ಎಂಬ ದೃಷ್ಟಿಯಿಂದ ಒಂದುಗೂಡಿದರೆ ಇನ್ನಷ್ಟು ಸಹಾಯವಾಗುತ್ತದೆ. ಇವೆಲ್ಲವನ್ನೂ ಒಂದು ಸಮುದಾಯದ ವಿಶಾಲ ದೃಷ್ಟಿಯಿಂದ ಮಾಡುವುದು ಕಷ್ಟ. ಉದಾಹರಣೆಗೆ, ದೂರ ದೂರದಲ್ಲಿರುವ ನೆರೆಹೊರೆಯಲ್ಲಿರುವವರನ್ನು ಒಂದುಗೂಡಿಸುವುದಾದರೂ ಹೇಗೆ? ಒಬ್ಬರು ಇನ್ನೊಬ್ಬರಿಗೆ ಸೇವಕರಾಗಿ ಕೆಲಸ ಮಾಡಬೇಕಾದ ಒಂದು ಸಾಮಾಜಿಕ ವ್ಯವಸ್ಥೆಯ ಭಾಗವಾಗಿರುವ ಅವರನ್ನು ಸಮಾನರು ಎಂದು ಹೇಗೆ ಒಂದುಗೂಡಿಸಲು ಸಾಧ್ಯ? ಅಥವಾ ಬುದ್ಧಿವಂತಿಕೆ ಮತ್ತು ಮನೋಧರ್ಮದಲ್ಲಿ ಮಹಿಳೆಯು ಪುರುಷನಿಗಿಂತ ಕೀಳು ಎನ್ನುವ ಬಹಳ ಕಾಲದ ನಂಬಿಕೆ ಇರುವುದರಿಂದ ಇದು ಹೇಗೆ ಸಾಧ್ಯ? ವಿಭಿನ್ನ ಸಮುದಾಯಗಳು ಮತ್ತು ಲಿಂಗಗಳಿಗೆ ಸೇರಿದ ಮಕ್ಕಳು ಶಾಲೆಗಳಲ್ಲಿ ಆಶ್ರಯ ಪಡೆಯಲು, ಕಲಿಯಲು ಮತ್ತು ಆಟವಾಡಲು ಒಂದಾದಾಗ ಅನೇಕ ಸಾಧ್ಯತೆಗಳು ತೆರೆದುಕೊಳ್ಳುತ್ತಾ ಹೋಗುತ್ತವೆ. ಮಕ್ಕಳು ಒಬ್ಬರಿಗೊಬ್ಬರು ಸಹಕರಿಸುವ ಅನೇಕ ರೀತಿಯ ಆಟಗಳನ್ನು ಆಡಿಸಲು ಸಾಕಷ್ಟು ಮಂದಿ ಶಿಕ್ಷಕರು ಪ್ರಯತ್ನ ನಡೆಸುತ್ತ ಬಂದಿದ್ದಾರೆ. ಉದಾಹರಣೆಗೆ ಸಮಾನ ಸಾಮರ್ಥ್ಯಗಳನ್ನು ಹೊಂದಿರುವ (ವಿಭಿನ್ನ ಕೌಶಲಗಳಿರುವವರನ್ನು ಸಮ್ಮಿಶ್ರ–ಗೊಳಿಸಿದರೆ ತಿರುಗುಬಾಣವಾಗಬಹುದು!) ಹುಡುಗಿಯರು ಮತ್ತು ಹುಡುಗರನ್ನು ಸೇರಿಸಿ ಟೀಮ್‌ಗಳನ್ನು ಮಾಡಬಹುದು. ಅದರಿಂದ ಅವರ ನಡುವಿನ ದ್ವೇಷ ತಗ್ಗಬಹುದು. ಇನ್ನು ಅನೇಕ ಶಿಕ್ಷಕರು 'ಸಹಕಾರಿ ಕಲಿಕೆ'ಯ (cooperative learning) ಪ್ರಯತ್ನವನ್ನು ಕೂಡ ಮಾಡಿದ್ದಾರೆ. ಇದರಲ್ಲಿ ಸಮಾನ ಉದ್ದೇಶಗಳನ್ನು ಹೊಂದಿರುವ ಮಕ್ಕಳ ಸಣ್ಣ ಗುಂಪು ಕೆಲಸ ಮಾಡುತ್ತದೆ. ಉದ್ಯಾನದಲ್ಲಿರುವ ನಾನಾ ಗಿಡಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸುವುದು ಅಥವಾ ಎಲ್ಲರೂ ಸೇರಿಕೊಂಡು ಪೋಸ್ಟರ್‌ಗಳ ನಾನಾ ಭಾಗಗಳನ್ನು ರಚಿಸುವುದು ಮುಂತಾದ ಚಟುವಟಿಕೆಗಳಲ್ಲಿ ಮಕ್ಕಳು ಪರಸ್ಪರ ಸಹಕರಿಸುವುದು ಇದರ ಉದ್ದೇಶ. ಇದರಿಂದ ಅವರು ಸ್ನೇಹಿತರಾಗುತ್ತಾರೆ ಮತ್ತು ಒಬ್ಬರಿಗೊಬ್ಬರು ಗೌರವವನ್ನು ಗಳಿಸುತ್ತಾರೆ. ಇಂತಹ ಕಾರ್ಯತಂತ್ರಗಳಿಂದ ನಾನಾ ಅಸ್ತಿತ್ವಗಳನ್ನು ಹೊಂದಿರುವ ಮಕ್ಕಳ ನಡುವೆ ಪ್ರೀತಿ ಮತ್ತು ನಂಬಿಕೆ ಹೆಚ್ಚಾಗಲು ದಾರಿ ಮಾಡಿಕೊಡುತ್ತದೆ.

## ಜಗತ್ತನ್ನು ವರ್ಗೀಕರಿಸುವ ನಮ್ಮ ಧೋರಣೆಯಲ್ಲಿ ಬದಲಾವಣೆ

ಪೈಪೋಟಿಗೆ ಇಳಿಯುವುದಕ್ಕೆ ಬದಲಾಗಿ ಪರಸ್ಪರ ಸಹಕಾರ ಮನೋಭಾವನೆಯಿಂದ ಜನರು ಸಂಪರ್ಕಕ್ಕೆ ಬಂದಾಗ ಜಗತ್ತನ್ನು ಕಾಣುವ ಅವರ ಧೋರಣೆಯೇ ಬದಲಾಗುತ್ತದೆ. ನಾವು ಬೆಳೆದುಬಂದ ಸಾಂಪ್ರದಾಯಿಕವಾದ ವಿಭಾಗಗಳ ಮೂಲಕವೇ ಜಗತ್ತನ್ನು ಕಾಣುತ್ತಿರುತ್ತೇವೆ ಮತ್ತು ಅದರಂತೆ ವರ್ತಿಸುತ್ತಿರುತ್ತೇವೆ. 'ಇದು ಕೆಂಪಗಿದೆ ಮತ್ತು ಕಂಪಿಸುತ್ತಿದೆ. ಹಾಗಾಗಿ ಇದು ಬಿಸಿಯಾಗಿದೆ ಮತ್ತು ನನ್ನನ್ನು ಸುಡುತ್ತದೆ. ನಾನು ಅದರಿಂದ ದೂರವಿರುತ್ತೇನೆ' ಎಂದು ಒಂದು ಮಗು ಯೋಚಿಸಲು ಆರಂಭಿಸುತ್ತದೆ. ಕೆಲಕಾಲದ ಬಳಿಕ, ಬೆಂಕಿಯಂತೆ ಕಾಣುವ ಎಲ್ಲದರಿಂದ ದೂರವಿರಬೇಕು ಎಂಬ ನಿರ್ಧಾರಕ್ಕೆ ಬಂದುಬಿಡುತ್ತೇವೆ. ಇಂತಹ ವಿಚಾರದಲ್ಲಿ ಎರಡನೇ ಯೋಚನೆಯನ್ನೇ ಮಾಡಲು ಹೋಗುವುದಿಲ್ಲ. ನಾವು ಮಾಡುವ ವರ್ಗೀಕರಣಗಳು ನಮ್ಮ ಭಾವನೆ ಮತ್ತು ನಡವಳಿಕೆಗಳ ಜೊತೆಗೆ ತಳುಕು ಹಾಕಿಕೊಂಡಿರುತ್ತವೆ. ಬೆಂಕಿಯ ನೋಟವೇ ಭಯ ಮತ್ತು ಆತಂಕವನ್ನು ಉಂಟುಮಾಡಿ ಮಗು ಅದರಿಂದ ದೂರವಿರುವಂತೆ ಮಾಡುತ್ತದೆ. ಅದೇ ರೀತಿ ಮನುಷ್ಯರ ವಿಚಾರದಲ್ಲಿಯೂ ಯೋಚನೆ ಮಾಡುತ್ತೇವೆ. ಬಂದೂಕುಗಳನ್ನು ಹಿಡಿದ ಗಡ್ಡಧಾರಿ ಮತ್ತು ಶಿರೋವಸ್ತ್ರವನ್ನು ಧರಿಸಿದ ಪುರುಷರ ಚಿತ್ರವನ್ನು ನಾವು ಸುದ್ದಿಮಾಧ್ಯಮಗಳಲ್ಲಿ ಪ್ರತಿ ದಿನ ನೋಡುತ್ತೇವೆ ಮತ್ತು ಹಾಗೆ ಕಾಣಿಸುವವರೆಲ್ಲ ಅಪಾಯಕಾರಿ, ಅವರಿಂದ ದೂರವಿರಬೇಕು ಎಂಬ ತೀರ್ಮಾನಕ್ಕೆ ಬಂದುಬಿಡುತ್ತೇವೆ. ಅಲ್ಲಿ ಜನರ ಬಗ್ಗೆ ದ್ವೇಷ ಮತ್ತು ಅನುಮಾನ ಹುಟ್ಟಿಕೊಳ್ಳುತ್ತದೆ. ಹಾಗೆ ಕಾಣಿಸುವವರಿಂದ ಯಾವತ್ತೂ ದೂರವಿರಬೇಕೆಂದು ನಿರ್ಧರಿಸುತ್ತೇವೆ. ಈ ಹಿನ್ನೆಲೆಯಲ್ಲಿ ಇನ್ನೂ ಒಂದು ಉದಾಹರಣೆಯನ್ನು ಪರಿಗಣಿಸುವುದಾದರೆ, ಎಲ್ಲರೂ ಶ್ವೇತವರ್ಣೀಯರೇ ಇರುವ ಬ್ರಿಟನ್ ಮತ್ತು ಅಮೆರಿಕದ ಶಾಲೆಗಳಲ್ಲಿ ಮಕ್ಕಳಿಗೆ ಕಪ್ಪು ಮತ್ತು ಬಿಳಿಯ ವರ್ಣದ ಜನರ ಚಿತ್ರಗಳನ್ನು ತೋರಿಸಿ ಯಾರನ್ನು ನೀವು ಇಷ್ಟಪಡುತ್ತೀರಿ ಮತ್ತು ಯಾರು ಒಳ್ಳೆಯವರು ಹಾಗೂ ಯಾರೊಂದಿಗೆ ಗೆಳೆಯರಾಗಲು ಬಯಸುತ್ತೀರಿ ಎಂದು ಕೇಳಲಾಯಿತು. ಬಹುತೇಕ ಶ್ವೇತವರ್ಣೀಯ ಮಕ್ಕಳು ಬಿಳಿಯರ ಚಿತ್ರಗಳನ್ನೇ ಆಯ್ಕೆ ಮಾಡಿಕೊಂಡರು. ಆದರೆ ಇದೇ

ಪ್ರಯೋಗವನ್ನು ಬಹುವರ್ಣೀಯರಿರುವ ಶಾಲೆಗಳಲ್ಲಿ ಮಾಡಿದಾಗ ಬಿಳಿ ಬಣ್ಣದ ಬಹುತೇಕ ಮಕ್ಕಳು ಬಿಳಿಯರಲ್ಲದ ಜನರ ಫೋಟೊ ಆಯ್ಕೆ ಮಾಡಿಕೊಂಡು ಅವರ ಜೊತೆ ಗೆಳೆತನ ಬೆಳೆಸಲು ಇಷ್ಟಪಟ್ಟರು. ಅವರು ಬಿಳಿಯರ ಬಗ್ಗೆ ವಿಶೇಷ ಆದ್ಯತೆಯನ್ನು ತೋರಿಸಲಿಲ್ಲ. ಈ ಮಕ್ಕಳ ವಿಷಯದಲ್ಲಿ ಅವರಿಗೆ ಲಭ್ಯವಾದ ಸಂಪರ್ಕಗಳು ನಾನಾ ಜನಾಂಗಗಳಿಂದ ಬಂದ ಜನರ ಬಗೆಗಿನ ಅವರ ಅಭಿಪ್ರಾಯಗಳು ಬದಲಾಗುವಂತೆ ಮಾಡಿದವು. ವರ್ಗೀಕರಣ ಮತ್ತು ನಡವಳಿಕೆಗಳಲ್ಲಿ ಬದಲಾವಣೆಗಳನ್ನು ತರಲು ಇನ್ನೂ ಅನೇಕ ಮಾರ್ಗಗಳಿವೆ ಎಂಬುದನ್ನೂ ಮರೆಯಬಾರದು. ನಿಮ್ಮ ತರಗತಿಯಲ್ಲಿ ಇತರ ಸಮುದಾಯಗಳಿಗೆ ಸೇರಿದ ಅನೇಕ ಮಂದಿ ಸದಸ್ಯರು ಇಲ್ಲದೆ ಹೋದಾಗ ಸಂಪರ್ಕಗಳನ್ನು ಹೊಂದುವುದು ಅತ್ಯಂತ ಕಷ್ಟ. ಭಾರತದ ಶಿಕ್ಷಣ ವ್ಯವಸ್ಥೆಯು ಒಂದು ನಿರ್ದಿಷ್ಟ ಪ್ರದೇಶದ ಸರ್ಕಾರಿ ಶಾಲೆಗಳ ಬಡವರಿಗಾಗಿ ಪ್ರತ್ಯೇಕಗೊಂಡಂತಾಗಿದೆ. ಉಳಿದದ್ದು ಬಡವರಿಂದ ಅತ್ಯಂತ ಶ್ರೀಮಂತರಿಗಾಗಿರುವ ಶುಲ್ಕಗಳನ್ನು ಪಾವತಿಸುವ ಖಾಸಗಿ ಶಾಲೆಗಳ ಕ್ಷೇತ್ರವಾಗಿದೆ. ಇದರ ಜೊತೆಗೆ ನಾನಾ ನೆರೆಹೊರೆಗಳು ಅಥವಾ ಗ್ರಾಮಗಳಲ್ಲಿ ವಾಸಿಸುವ ವಿಭಿನ್ನ ಸಮುದಾಯಗಳಿಗಾಗಿರುವ ವಸತಿ ಶಾಲೆಗಳ ವಿಭಾಗವೂ ಇದೆ. ಇಷ್ಟಾಗಿಯೂ ಜಗತ್ತನ್ನು ವರ್ಗೀಕರಿಸುವ ರೀತಿಯಲ್ಲಿ ಯುವಜನತೆಯನ್ನು ಬದಲಿಸಲು ಸಾಧ್ಯವಿದೆ.

## ಕೆಲವು ವಿಧಾನಗಳು

ವ್ಯಾಪಕವಾಗಿ ಬಳಸಲಾದ ಕಾರ್ಯತಂತ್ರವೇನೆಂದರೆ ನಿಯಮಿತವಾಗಿ ಕೆಲವು ವಿಡಿಯೋಗಳನ್ನು ಪ್ರದರ್ಶಿಸುವುದು ಮತ್ತು ಕಥೆಗಳನ್ನು ಓದಿ ಹೇಳುವುದು. ಇದರಿಂದ ಇತರ ಸಮುದಾಯಗಳು ಮತ್ತು ಲಿಂಗಗಳ ಸದಸ್ಯರಿಗೆ ಧನಾತ್ಮಕ ಅಂಶಗಳು ದೊರೆತಂತಾಗುತ್ತದೆ. ಇದಕ್ಕೆ ಒಂದು ಉದಾಹರಣೆ ಎಂದರೆ ಇಂಗ್ಲೆಂಡ್ ನಲ್ಲಿ ನಡೆಸಲಾದ ಒಂದು ಅಧ್ಯಯನ. ಅಲ್ಲಿನ ಪ್ರಾಥಮಿಕ ಶಾಲಾ ಮಕ್ಕಳು ಓದುವ ಕಥೆ ಪುಸ್ತಕಗಳಲ್ಲಿ ಮುಖ್ಯ ಪಾತ್ರ ಒಬ್ಬ ವಲಸಿಗನದ್ದು. ಇದರಿಂದ ಕಂಡುಬಂದ ಅಂಶವೇನೆಂದರೆ ಮಕ್ಕಳು ತಮ್ಮ ರಾಷ್ಟ್ರಕ್ಕೆ ಇತ್ತೀಚೆಗೆ ವಲಸೆ ಬಂದ ಜನರನ್ನು ಹೆಚ್ಚು ಇಷ್ಟಪಡಲು ಶುರುಮಾಡಿರುವುದು. ಭಾರತದಲ್ಲಿ ನನ್ನ ಸಂಶೋಧನಾ ಸಹೋದ್ಯೋಗಿ ಧ್ರುವ ದೇಸಾಯಿ, ಮುಸ್ಲಿಮರೇ ಇಲ್ಲದ ಮತ್ತು ಕೇವಲ ಕೆಲವೇ ದಲಿತರಿರುವ ಕಡಿಮೆ ಶುಲ್ಕದ ಖಾಸಗಿ ಶಾಲೆಯಲ್ಲಿ ಮಕ್ಕಳ ಕಥೆಗಳನ್ನು ಓದುತ್ತಾರೆ. ಅವರು ಅತ್ಯಂತ ಪ್ರಜ್ಞಾಪೂರ್ವಕವಾಗಿ ಹುಡುಗಿಯೊಬ್ಬಳು ಮುಖ್ಯ ಪಾತ್ರವಾಗಿರುವ ಕಥೆಗಳನ್ನೇ ಆಯ್ಕೆ ಮಾಡಿಕೊಂಡು ಓದುತ್ತಾರೆ. ಹುಡುಗಿಯು ರೂಢ ಮಾದರಿಯ ಸಂಗತಿಗಳನ್ನು ಮುರಿಯಲು ಪ್ರಯತ್ನಿಸುವ ಅಥವಾ ಜಾತೀಯತೆಯು ಮಕ್ಕಳು ಮತ್ತು ದೊಡ್ಡವರ ಮೇಲೆ ಬೀರುವ ನೋವನ್ನು ಚಿತ್ರಿಸುವ ಕಥೆಗಳಾಗಿರುತ್ತವೆ. ಮಕ್ಕಳ ಅರಿವಿನ ಪರಿಧಿ ಮತ್ತು ಜಗತ್ತಿನ ಭಾವನಾತ್ಮಕ ವರ್ಗೀಕರಣದ ಬಗೆಗೆ ಬದಲಾವಣೆಯನ್ನು ತರಲು ಇತರೆಲ್ಲ ವಿಷಯಗಳ ಜೊತೆಗೆ ಮಕ್ಕಳು ಯಾವ ವಯಸ್ಸಿನಲ್ಲಿದ್ದಾರೆ ಎಂಬುದು ಕೂಡ ಮುಖ್ಯವಾಗಿರುತ್ತದೆ. ಅನೇಕ ಸಂಶೋಧಕರು ಹೇಳುವ ಮಾತೇನೆಂದರೆ ಮಕ್ಕಳು ತಮ್ಮ ಐದನೇ ವಯಸ್ಸಿನಲ್ಲಿಯೇ ಸಮುದಾಯಗಳು ಮತ್ತು ಜನರ ವಿರುದ್ಧ ಪೂರ್ವಾಗ್ರಹವನ್ನು ಬೆಳೆಸಿಕೊಂಡಿರುತ್ತಾರೆ. ಅಂತಹ ವಯಸ್ಸಿನಲ್ಲಿ ಅವರು ಎಲ್ಲವನ್ನೂ ಸಾಮಾನ್ಯೀಕರಿಸುತ್ತ ಹೋಗುತ್ತಾರೆ ಹಾಗೂ ಎಲ್ಲರೂ ಸಮಾನರು ಎಂಬ ಸತ್ಯವನ್ನು ಕಂಡುಕೊಳ್ಳಲು ಕಷ್ಟಪಡುತ್ತಾರೆ. ತಾನು ಪೂರ್ವಾಗ್ರಹಪೀಡಿತ ಅಭಿಪ್ರಾಯವನ್ನು ಹೊಂದಿರುವ ಸಮುದಾಯದಲ್ಲಿಯೇ ಒಳ್ಳೆಯ ಜನರು ಇದ್ದಾರೆ ಎಂಬುದನ್ನು ಅರ್ಥ ಮಾಡಿಕೊಳ್ಳುವುದು ಅವರಿಗೆ ಸಾಧ್ಯವಾಗುವುದಿಲ್ಲ. ಆದರೆ ಎಂಟು–ಹತ್ತು ವರ್ಷ ವಯಸ್ಸಿನ ಮಕ್ಕಳು ಇದನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳುತ್ತಾರೆ. ಯಾವ ರೀತಿಯ ಕಥೆಗಳನ್ನು ಆಯ್ಕೆ ಮಾಡಿಕೊಳ್ಳುತ್ತೀರಿ ಎನ್ನುವುದು ಕೂಡ ಮುಖ್ಯವಾಗುತ್ತದೆ. ಕೇವಲ ಗುರುತುಗಳ ಸಮ್ಮಿಶ್ರಣವನ್ನು ಹೊಂದಿದ ಕಥೆಗಳಿಂದ ಯಾವುದೇ ಪ್ರಯೋಜನವಾಗುವುದಿಲ್ಲ. ಉದಾಹರಣೆಗೆ. ಉತ್ತರ ಭಾರತದ ಕೆಲವು ಮಕ್ಕಳು ದಕ್ಷಿಣ ಭಾರತದವರನ್ನು ಇಷ್ಟಪಡದೇ ಅಣಕಿಸುತ್ತಿದ್ದರೆ ಆಗ ವಿನೋದದ, ಸಾಹಸಮಯ ಕಥೆಯಲ್ಲಿರುವ ಮುಖ್ಯಪಾತ್ರದ ಹೆಸರು ಸುಬ್ರಹ್ಮಣ್ಯಂ ಎಂದಿದ್ದರೆ ಅದರಿಂದ ಅವರ ಪೂರ್ವಾಗ್ರಹವನ್ನು ಬದಲಿಸಲು ಸಾಧ್ಯವಿಲ್ಲ. ಅವರು ಈ ಕಥೆಯಲ್ಲಿರುವ ಸುಬ್ರಹ್ಮಣ್ಯಂನ ಪಾತ್ರವನ್ನು ಮಾತ್ರ ಇಷ್ಟಪಟ್ಟು ಇತರ ದಕ್ಷಿಣ ಭಾರತದವರ ಬಗ್ಗೆ ಅದೇ ನಂಬಿಕೆ ಮತ್ತು ನಡವಳಿಕೆಯನ್ನು ಹಾಗೇ ಮುಂದುವರಿಸಿದರೆ ಯಾವ ಪರಿಣಾಮವೂ ಬೀರಿದಂತಾಗುವುದಿಲ್ಲ. ಸುಬ್ರಹ್ಮಣ್ಯಂನ ದಕ್ಷಿಣ ಭಾರತದ ಅಸ್ತಿತ್ವಕ್ಕೆ ಮತ್ತೆ ಮತ್ತೆ ಒತ್ತು ನೀಡುತ್ತ ದಕ್ಷಿಣ ಭಾರತದವರ ಉತ್ತಮ ಗುಣಗಳಿಗೆ ಅವರು ಪ್ರತೀಕದಂತೆ ಇದ್ದಾರೆ ಎಂದು ಪ್ರತಿಪಾದಿಸಿದರೆ ಮಾತ್ರ ಹೆಚ್ಚಿನ ಬದಲಾವಣೆ ಸಾಧ್ಯ. ಅತ್ಯಂತ ಚಿಕ್ಕ ವಯಸ್ಸಿನ ಮಕ್ಕಳು ತಮ್ಮ ಪೂರ್ವಾಗ್ರಹಕ್ಕೆ ವಿರುದ್ಧವಾದ ಈ ಉದಾಹರಣೆಯನ್ನು ನಿರ್ಲಕ್ಷಿಸಬಹುದು. ಅವರ ನಿಲುವಿನಲ್ಲಿ ಯಾವುದೇ ಬದಲಾವಣೆ ಆಗದೇ ಇರಬಹುದು. ಆದರೆ ದೊಡ್ಡ ವಯಸ್ಸಿನ ಮಕ್ಕಳು ತಾವು ಕೇಳಿದ ಕಥೆಯಲ್ಲಿನ ನಿಜಾಂಶವನ್ನು ಗಮನಿಸಿ ಅದನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನ ಮಾಡಬಹುದು. ವ್ಯಕ್ತಿಯ ಅಸ್ತಿತ್ವಗಳಿಗೆ ಹೆಚ್ಚಿನ ಒತ್ತು ನೀಡುವುದರಿಂದ ಜನರು ಮಾಡಿದ ವರ್ಗೀಕರಣಗಳನ್ನು ಬದಲಿಸುವಲ್ಲಿ ಸಹಾಯವಾಗುತ್ತದೆ. ಇಷ್ಟು ಮಾತ್ರವಲ್ಲದೆ ಇನ್ನೂ ಅನೇಕ ಸಾಮಾಜಿಕ ಗುಂಪುಗಳ ವಿಚಾರದಲ್ಲಿ ಹೊಂದಿರುವ ಭಾವನೆಗಳು ಮತ್ತು ನಡವಳಿಕೆಗಳನ್ನು ಬದಲಿಸಿಕೊಳ್ಳಲೂ ಸಹಾಯವಾಗುತ್ತದೆ.

## ಪೂರ್ವಾಗ್ರಹಗಳನ್ನು ಮೀರಲು ವಿಷಯಗಳ ಬಳಕೆ

ಸಾಮಾನ್ಯ ಶಾಲಾ ತರಗತಿಗಳಲ್ಲಿಯೂ ಕೂಡ ಭ್ರಾತೃತ್ವವನ್ನು ಮೂಡಿಸುವ ಅನೇಕ ಸಿದ್ಧಾಂತಗಳನ್ನು ಸುಲಭವಾಗಿ ಕಾರ್ಯರೂಪಕ್ಕೆ ತರಬಹುದು. ಭಾಷಾ ತರಗತಿಗಳಲ್ಲಿ ಕಥೆಗಳು ಮತ್ತು ನಾಟಕಗಳನ್ನು ಆಯ್ಕೆ ಮಾಡಿಕೊಳ್ಳುವುದರಿಂದ ಸಿದ್ಧಮಾದರಿಗಳಿಂದ ವಿಮುಖರಾಗಿ ಹೊಸ ವಿಧಾನಗಳಿಗೆ ಮುಖ ಮಾಡಿದಂತಾಗುತ್ತದೆ. ತರಗತಿಗಳಲ್ಲಿ ಅವುಗಳ ಬಗ್ಗೆ ಚರ್ಚೆ ಮಾಡುವುದರಿಂದ ವಿದ್ಯಾರ್ಥಿಗಳು ಹೊಂದಿದ್ದ ಭಾವನೆಗಳು

ಮತ್ತು ನಡವಳಿಕೆಯಲ್ಲಿ ಬದಲಾವಣೆ ಸಾಧ್ಯ. ಶಿಕ್ಷಕರು ತಮ್ಮ ದೈನಂದಿನ ಚಟುವಟಿಕೆಗಳಲ್ಲಿ ಸಹಕಾರಿ ಕಲಿಕೆಯನ್ನು ಅಳವಡಿಸಿಕೊಳ್ಳಲು ಪ್ರಯತ್ನ ಮಾಡಬಹುದು. ಇದರಿಂದ ಕೇವಲ ಭ್ರಾತೃತ್ವವನ್ನು ಪ್ರೋತ್ಸಾಹಿಸುವುದು ಮಾತ್ರವಲ್ಲದೆ ವಿದ್ಯಾರ್ಥಿಗಳ ಕಲಿಕಾ ಮಟ್ಟ ಹೆಚ್ಚುತ್ತದೆ ಮತ್ತು ಅವರು ಅಧ್ಯಯನ ಮಾಡುವ ವಿಷಯದಲ್ಲಿ ತೊಡಗಿಕೊಳ್ಳಲು ಅನುಕೂಲವಾಗುತ್ತದೆ. ನಾನಾ ಸಾಮಾಜಿಕ ಗುಂಪುಗಳಿಗೆ ಸೇರಿದ ಮಕ್ಕಳ ಗುಂಪುಗಳ ನಡುವೆ ಪೈಪೋಟಿಗೆ ಬದಲಾಗಿ ಸಹಕಾರ ಮನೋಭಾವವನ್ನು ಉತ್ತೇಜಿಸುವಂತಹ ಆಟಗಳನ್ನು ಏರ್ಪಡಿಸಬಹುದು. ಜಗತ್ತಿನಲ್ಲಿ ನಾವು ಇಂದು ಕಾಣುತ್ತಿರುವ ದ್ವೇಷ ಮತ್ತು ಭೀತಿಯನ್ನು ಪ್ರತಿರೋಧಿಸುವ ನಿಟ್ಟಿನಲ್ಲಿ ನಮ್ಮ ಶಾಲಾ ಪಠ್ಯಕ್ರಮಗಳು ಗಂಭೀರವಾಗಿ ಗಮನಹರಿಸಬೇಕಾಗಿದೆ ಎಂಬುದು ಅನೇಕ ಶಿಕ್ಷಣ ತಜ್ಞರ ಅಭಿಮತವಾಗಿದೆ. ಉದಾಹರಣೆಗೆ, ನಾನಾ ಸಾಮಾಜಿಕ ಗುಂಪುಗಳನ್ನು ಹೇಗೆ ಚಿತ್ರಿಸಲಾಗಿದೆ ಎಂಬುದರ ಕಡೆಗೆ ಹೆಚ್ಚು ಆದ್ಯತೆ ನೀಡಿದರೆ ಸಹಾಯವಾಗಬಹುದು. ಇಲ್ಲಿ ಮನುಷ್ಯ ಜೀವಿಯ ಬಗೆಗೆ ನಡೆಸುವ ಶೈಕ್ಷಣಿಕ ಅಧ್ಯಯನ ಪ್ರಮುಖ ಪಾತ್ರವನ್ನು ವಹಿಸುತ್ತದೆ ಮತ್ತು ನಾವು ಜಗತ್ತನ್ನು ವರ್ಗೀಕರಿಸುವ ವಿಧಾನದಲ್ಲಿ ಬದಲಾವಣೆಯನ್ನು ತರಲು ಕೂಡ ಇದು ಸಹಾಯವಾಗುತ್ತದೆ. ಸಮಾಜ ವಿಜ್ಞಾನದಲ್ಲಿ ನಡೆಸಿದ ನಿಖರವಾದ ಅಧ್ಯಯನದಿಂದಾಗಿ ಪೂರ್ವಕಲ್ಪಿತ ಅಭಿಪ್ರಾಯಗಳು ಮಹತ್ವವನ್ನು ಕಳೆದುಕೊಂಡಿವೆ ಮತ್ತು ವಾಸ್ತವಕ್ಕೆ ಅವು ಸಂವಾದಿಯಾಗಲು ಸಾಧ್ಯವಿಲ್ಲ. ಉದಾಹರಣೆಗೆ ಜಾತಿ ಹೇಗೆ ಹುಟ್ಟಿಕೊಂಡಿತು ಮತ್ತು ಅದು ಇಂದು ಪಡೆದುಕೊಂಡಿರುವ ಸ್ಥಿತಿಯ ಬಗ್ಗೆ ಬೋಧನೆ ಮಾಡುತ್ತ ಹೋದರೆ ಇಂದು ಜನರು ಹೊಂದಿರುವ ಅನೇಕ ಪೂರ್ವಾಗ್ರಹಗಳನ್ನು ತೊಡೆದುಹಾಕುವುದು ನಿಶ್ಚಿತ. ವಾಸ್ತವವಾಗಿ ಜನರ ಅದೃಷ್ಟದ ಏರಿಳಿತಕ್ಕೆ ತಕ್ಕಂತೆ ಅವರು ನಾನಾ ವರ್ಣಗಳ ನಡುವೆ ಎಡತಾಕುತ್ತಿರುತ್ತಾರೆ ಎಂಬುದನ್ನು ಇದು ತೋರಿಸುತ್ತದೆ. ನಾವು ನಂಬಬೇಕೆಂಬ ಕಾರಣದಿಂದ ತಮ್ಮ ಜಾತಿಯ ಪಾರಮ್ಯವನ್ನು ಗಟ್ಟಿಗೊಳಿಸಲು ಬಯಸುವವರಿಗೆ ಜಾತಿಗಳೇನು ಸಂಪೂರ್ಣವಾಗಿ ಬೆಸುಗೆ ಹಾಕಿ ಮುಚ್ಚಲ್ಪಟ್ಟ ರಚನೆಯಲ್ಲ. ದ್ವೇಷದ ಯೋಚನೆಗಳನ್ನು ಹರಿಯಬಿಡುವ ನಾಯಕರಿಗಿಂತ ನಮ್ಮ ಮೇಲೆಯೇ ಹೆಚ್ಚಿನ ಜವಾಬ್ದಾರಿಯಿದೆ. ಎಲ್ಲ ಜಾತಿಗಳ ಮೇಲೆ ಹಾಗೂ ಜಗತ್ತಿನ ಎಲ್ಲ ಜನರ ಮೇಲೆ ಆನುವಂಶೀಯ ಸಂಗತಿಗಳು ಆಕ್ರಮಿಸಿಕೊಂಡಿವೆ ಎಂಬುದನ್ನು ಜೀವಶಾಸ್ತ್ರದ ಮೂಲಕ ಸುಲಭವಾಗಿ ಕಂಡುಕೊಳ್ಳಬಹುದು. ಪುರುಷರು ಮತ್ತು ಮಹಿಳೆಯರ ನಡುವಿನ ವ್ಯತ್ಯಾಸಗಳು ಸಾಮಾಜಿಕ ಪರಿಸ್ಥಿತಿಗಳು ಮತ್ತು ಸಂಸ್ಕೃತಿಯಿಂದ ಬಂದಿರುವುದೇ ಹೊರತು ಜೀವಶಾಸ್ತ್ರದ ಮೂಲಕ ಅಲ್ಲ ಎಂಬುದು ಶೈಕ್ಷಣಿಕ ಸಂಶೋಧನೆಯಿಂದ ನಾವು ಅರ್ಥ ಮಾಡಿಕೊಂಡಿದ್ದೇವೆ. ಧರ್ಮದ ಹೆಸರಿನಲ್ಲಿ ನಡೆಯುವ ಹಿಂಸಾಚಾರದ ಕೃತ್ಯಗಳು ಅಧಿಕಾರದ ಆಕಾಂಕ್ಷೆ ಅಥವಾ ಪ್ರತೀಕಾರದ ಕಾರಣಕ್ಕಾಗಿ ಬಂದಿರುವುದೇ ಹೊರತಾಗಿ ಧರ್ಮದ ಮೇಲಿನ ನಂಬಿಕೆಯಿಂದ ಅಲ್ಲ ಎಂಬುದು ನಿರಂತರ ನಡೆಸಿದ ಅಧ್ಯಯನದಿಂದ ಸಾಬೀತಾಗಿದೆ. ಶಾಲಾ ಪಠ್ಯಕ್ರಮದಲ್ಲಿ ಈ ವಿಚಾರಗಳ ಮೇಲೆ ಹೆಚ್ಚಿನ ಒತ್ತು ನೀಡುವುದರಿಂದ ಜನರನ್ನು ಪರಸ್ಪರ ಪ್ರತ್ಯೇಕಿಸುವ ಉದ್ದೇಶದ ವರ್ಗೀಕರಣವನ್ನು ವಿರೋಧಿಸಲು ಸಹಾಯವಾಗುತ್ತದೆ. ನಮ್ಮ ದೇಶದಲ್ಲಿ ಮತ್ತು ಜಗತ್ತಿನಲ್ಲಿ ಭ್ರಾತೃತ್ವವನ್ನು ಪ್ರೋತ್ಸಾಹಿಸುವುದು ಹೇಗೆ ಎಂಬ ಬಗ್ಗೆ ನಾವು ಕಲಿಯುವುದು ಸಾಕಷ್ಟಿದೆ. ಶಾಲೆಗಳು ಮತ್ತು ವಿಶ್ವವಿದ್ಯಾಲಯಗಳಲ್ಲಿ ಭಿನ್ನ–ವಿಭಿನ್ನ ಹಿನ್ನೆಲೆಗಳಿಂದ ಬಂದ ಜನರು ಒಂದುಗೂಡುತ್ತಿರುವುದು ಮತ್ತು ಮಿತ್ರರಾಗುತ್ತಿರುವ ಬೆಳವಣಿಗೆಗಳನ್ನು ಕಂಡಾಗ ನನಗೆ ನಿಜಕ್ಕೂ ಭವಿಷ್ಯದ ಬಗ್ಗೆ ಭರವಸೆ ಮೂಡುತ್ತಿದೆ. ಸಾಮಾಜಿಕ ಗುಂಪುಗಳ ನಡುವೆ ನಂಬಿಕೆ, ಗೆಳೆತನ ಮತ್ತು ಸಮಾನತೆಯನ್ನು ರೂಪಿಸುವಲ್ಲಿ ಶಿಕ್ಷಣ ಸಂಸ್ಥೆಗಳು ಮತ್ತು ಯುವ ಸಂಘಟನೆಗಳು ಸಾಕಷ್ಟು ಕೊಡುಗೆಗಳನ್ನು ನೀಡಬಹುದು. ಇದಕ್ಕಾಗಿ ಅವರು ಮಾನವ–ಶಾಸ್ತ್ರ, ಮನೋವಿಜ್ಞಾನ, ಸಾಮಾಜಿಕ ಮನೋವಿಜ್ಞಾನ ಸೇರಿದಂತೆ ಅನೇಕ ಕ್ಷೇತ್ರಗಳಲ್ಲಿ ನಡೆಸಿದ ಸಂಶೋಧನೆಗಳು ಮತ್ತು ತಮ್ಮದೇ ಆದ ಅನುಭವಗಳನ್ನು ಧಾರೆ ಎರೆಯಬಹುದು. ದ್ವೇಷ, ನಿಂದನೆ ಮತ್ತು ಭಯ ಅನಿವಾರ್ಯವೇನೂ ಅಲ್ಲ. ನಾವು ಅವುಗಳನ್ನೆಲ್ಲ ಮೀರಲು ಇರುವ ದಾರಿಗಳನ್ನು ಹುಡುಕಬೇಕು. ಇದನ್ನು ಕಿಂಡರ್‌ಗಾರ್ಟನ್ ಹಂತದಿಂದಲೇ ಆರಂಭಿಸುವ ಅಗತ್ಯವಿದೆ.



**ಅಮ್ಮನ್ ಮದನ್** ಅವರು ಬೆಂಗಳೂರಿನ ಅಜೀಂ ಪ್ರೇಮ್ ಜಿ ವಿಶ್ವವಿದ್ಯಾಲಯದಲ್ಲಿ ಬೋಧಕರಾಗಿದ್ದಾರೆ. ಮಾತುಕತೆ, ಭ್ರಾತೃತ್ವ ಮತ್ತು ನ್ಯಾಯಕ್ಕಾಗಿರುವ ಆಸಕ್ತ ಗುಂಪುಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಅವರನ್ನು amman.madan@apu.edu.in ಮೂಲಕ ಸಂಪರ್ಕಿಸಬಹುದು.

ಅನುವಾದ: **ಮಂಜುನಾಥ್ ಚಾಂದ್** | ಪರಿಶೀಲನೆ: **ಲತಾ ಕೆ.ಸಿ.**

# ಶಿಕ್ಷಕರ ಯೋಗಕ್ಷೇಮದ ಮರುಚಿಂತನೆ | ಒತ್ತಡ ಬಳಲಿಕೆಗಳನ್ನು ಮೀರಿ

ಜ್ವೈರಿಯಾ ಸಲೀಂ

ಶಿಕ್ಷಕರ ಯೋಗಕ್ಷೇಮದ ಕುರಿತು ಇತ್ತೀಚೆಗೆ ನಡೆಯುವ ಸಂವಾದಗಳು ಹಲವು ಬಾರಿ ಶಿಕ್ಷಕರಲ್ಲುಂಟಾಗುವ ಒತ್ತಡ ಹಾಗೂ ಬಳಲಿಕೆಯ ಕಾರಣಗಳು ಹಾಗೂ ಅವುಗಳ ನಿವಾರಣೋಪಾಯಗಳ ಸುತ್ತಲೇ ಇರುತ್ತವೆ. ಈ ಲೇಖನವು ಶಿಕ್ಷಕರ ಯೋಗಕ್ಷೇಮಕ್ಕೆ ಬೇಕಾದ ಅವಶ್ಯಕತೆಗಳ ಬಗ್ಗೆ, ಅವುಗಳ ಪ್ರಾಮುಖ್ಯತೆಯ ಬಗ್ಗೆ ಹಾಗೂ ಹೇಗೆ ಸಂಸ್ಥೆಗಳು ಭಾವನಾತ್ಮಕ ಬುದ್ಧಿಮತ್ತೆಯನ್ನು (emotional intelligence) ಬೆಳೆಸಿ ಪ್ರತಿಯೊಬ್ಬ ವ್ಯಕ್ತಿಯ ಸಾಧ್ಯತೆಗಳನ್ನು ಸಾಕಾರಪಡಿಸಲು ಅನುವು ಮಾಡಿಕೊಡುವ ಒಂದು ಸಂತೋಷಕರ ಶಾಲಾ ಸಂಸ್ಕೃತಿಯನ್ನು ಪೋಷಿಸಿ ಅದನ್ನು ಉಳಿಸಿಕೊಳ್ಳಬಹುದು ಎಂಬುದರ ಬಗ್ಗೆ ಆಳವಾಗಿ ಚರ್ಚಿಸುತ್ತದೆ. ನಂತರ ಇದು ಹೇಗೆ ಶಿಕ್ಷಕರು ಮತ್ತು ನಾಯಕತ್ವ ವಹಿಸುವವರು ತಮ್ಮ ಹಾಗೂ ತಮ್ಮ ವಿದ್ಯಾರ್ಥಿಗಳ ಯೋಗಕ್ಷೇಮವನ್ನು ನೋಡಿಕೊಳ್ಳಬಹುದು ಎಂಬ ಕೆಲವು ವಿಚಾರಗಳನ್ನು ಅನ್ವೇಷಿಸುತ್ತದೆ.

## ಶಿಕ್ಷಕರ ಯೋಗಕ್ಷೇಮದ ಪ್ರಾಮುಖ್ಯತೆ

ಆಧುನಿಕ ಜೀವನದಲ್ಲಿ ಹೆಚ್ಚುತ್ತಿರುವ ಒತ್ತಡಗಳು, ಸಂಬಂಧಿಕರು ಹಾಗೂ ನೆರೆಹೊರೆಯವರ ಆಧಾರವಿರದ ಚಿಕ್ಕ ಕುಟುಂಬಗಳು ಹಾಗೂ ಇಳಿಯುತ್ತಿರುವ ಭಾವನಾತ್ಮಕ ಸಮಚಿತ್ತ ಇವೆಲ್ಲವುಗಳ ನಡುವೆ ಶಿಕ್ಷಕರ ಯೋಗಕ್ಷೇಮವು ಬಹಳ ಮುಖ್ಯ ವಿಚಾರವಾಗಿ ಕಂಡುಬರುತ್ತಿದೆ. ಇದು ವಿಶೇಷವಾಗಿ ಕೋವಿಡ್–19ರ ನಂತರ ಹೆಚ್ಚು ನಿಚ್ಚಳವಾಗಿದೆ. ಈ ಅಂಶಗಳು ಬರಿಯ ಶಿಕ್ಷಕರ ಯೋಗಕ್ಷೇಮದ ಮೇಲೆ ಪರಿಣಾಮ ಬೀರುವುದಷ್ಟೇ ಅಲ್ಲ, ಇದೇ ಸವಾಲುಗಳನ್ನೆದುರಿಸುತ್ತಿರುವ ವಿದ್ಯಾರ್ಥಿಗಳ ಜೊತೆ ವ್ಯವಹರಿಸುವ ಹೆಚ್ಚುವರಿ ಜವಾಬ್ದಾರಿಯನ್ನು ಕೂಡ ಶಿಕ್ಷಕರ ಮೇಲೆಯೇ ಹೊರಿಸುತ್ತವೆ. ಒಬ್ಬ ಶಿಕ್ಷಕಿಯು ತನ್ನ ಯೋಗಕ್ಷೇಮವನ್ನು ಚೆನ್ನಾಗಿಟ್ಟುಕೊಂಡ ನಂತರವೇ ಆಕೆ ತನ್ನ ವಿದ್ಯಾರ್ಥಿಗಳ ವಿವಿಧ ಸಾಮಾಜಿಕ – ಭಾವನಾತ್ಮಕ ಹಾಗೂ ಶೈಕ್ಷಣಿಕ ಅಗತ್ಯಗಳನ್ನು ಪೂರೈಸುವ ನಿಟ್ಟಿನಲ್ಲಿ ಎದುರಾಗುವ ಸವಾಲುಗಳನ್ನು ಮೀರಲು ಸಾಧ್ಯವಾಗುತ್ತದೆ. ಶಿಕ್ಷಕರ ಯೋಗಕ್ಷೇಮದ ಅಗತ್ಯವನ್ನು ತಮ್ಮ "ಟೀಚಿಂಗ್ ಟು ಟ್ರಾನ್ಸ್ಗ್ರೆಸ್" (Bell Hooks, 1994) ಎಂಬ ಪುಸ್ತಕದಲ್ಲಿ ಟಿಕ್ ನ್ಯಾಟ್ ಹಾನ್ ಅವರು ಬಹಳ ಚೆನ್ನಾಗಿ ವಿವರಿಸಿದ್ದಾರೆ: 'ಒಬ್ಬ ವೈದ್ಯ, ಚಿಕಿತ್ಸಕ, ಶಿಕ್ಷಕ ಅಥವಾ ಯಾವುದೇ ನೆರವು ನೀಡುವ ವೃತ್ತಿಪರರು ಮೊದಲು ತಮ್ಮೆಡೆಗೆ ನೋಡಿಕೊಳ್ಳಬೇಕು, ಏಕೆಂದರೆ ನೆರವು ನೀಡುವವರು ಸಂತೋಷವಾಗಿಲ್ಲದಿದ್ದರೆ ಅವರು ಇತರರಿಗೆ ನೆರವು ನೀಡಲಾರರು'. ವಿದ್ಯಾರ್ಥಿಗಳ ಯೋಗಕ್ಷೇಮಕ್ಕೆ ಬೇಕಾದ ಸುರಕ್ಷಿತ ಹಾಗೂ ಪೋಷಕ ಪರಿಸರವನ್ನು ನಿರ್ಮಾಣ ಮಾಡುವಲ್ಲಿ ಶಿಕ್ಷಕರು ಬಹಳ ನಿರ್ಣಾಯಕ ಪಾತ್ರ ವಹಿಸುತ್ತಾರೆ. ವಿದ್ಯಾರ್ಥಿಗಳ ಕಲಿಕೆಯ ಮೇಲೆ ಮತ್ತು ಒಂದು ಧನಾತ್ಮಕವಾದ ಹಾಗೂ ಏಳಿಗೆ ಹೊಂದುತ್ತಿರುವ ಶಾಲಾ ಸಂಸ್ಕೃತಿಯ ಮೇಲೆ ಶಿಕ್ಷಕರ ಯೋಗಕ್ಷೇಮದಿಂದ ಉಂಟಾಗುವ ಪ್ರತ್ಯಕ್ಷ ಹಾಗೂ ಪರೋಕ್ಷವಾದ ಧನಾತ್ಮಕ ಪರಿಣಾಮಗಳ ಬಗ್ಗೆ ಸಂಶೋಧನೆಗಳು ಸಾಕಷ್ಟು ಪುರಾವೆಗಳನ್ನು ಒದಗಿಸಿವೆ. ಒಳ್ಳೆಯ ಯೋಗಕ್ಷೇಮವುಳ್ಳ ಶಿಕ್ಷಕರು ತಮ್ಮ ವಿದ್ಯಾರ್ಥಿಗಳೊಡನೆ ಉತ್ತಮವಾದ ಬಾಂಧವ್ಯವನ್ನು ಹೊಂದಿದ್ದು, ತರಗತಿಯ ಸಂವಹನಗಳನ್ನು ಉತ್ತಮವಾಗಿ ನಿರ್ವಹಿಸಬಲ್ಲರು. ಅವರು ತರಗತಿಯಲ್ಲಿ ಒಂದು ಸುರಕ್ಷಿತ ಹಾಗೂ ಧನಾತ್ಮಕ ವಾತಾವರಣವನ್ನು ಸೃಷ್ಟಿಸಬಲ್ಲರು ಹಾಗೂ ಭಿನ್ನ ಹಿನ್ನೆಲೆಯ ವಿದ್ಯಾರ್ಥಿಗಳ ಅಗತ್ಯಗಳಿಗೆ ಸ್ಪಂದಿಸಿ, ಅವರು ಪ್ರಗತಿ ಹೊಂದಲು ಬೇಕಾದ ಬೆಂಬಲವನ್ನು ಒದಗಿಸಿಕೊಡಬಲ್ಲರು. ಶಾಲೆಯು ಒದಗಿಸುವಂತಹ ಸಾಮಾಜಿಕ ಬಂಡವಾಳವನ್ನು ಕೂಡ ಅವರು ಚೆನ್ನಾಗಿ ಬಳಸಿಕೊಂಡು ವೃತ್ತಿಪರ ಸಮುದಾಯದ ಒಂದು ಸಂಪರ್ಕ ಜಾಲವನ್ನು ನಿರ್ಮಿಸಿಕೊಂಡು ಅದರ ಮೂಲಕ ತಮಗೆ ಬೇಕಾದ ವೈಯಕ್ತಿಕ ಹಾಗೂ ವೃತ್ತಿಪರ ಗುರಿಗಳಿಗೆ ಬೇಕಾಗುವ ಬೆಂಬಲವನ್ನು ಕೂಡ ಪಡೆದುಕೊಳ್ಳಬಲ್ಲರು.

ಶಿಕ್ಷಕರ ಯೋಗಕ್ಷೇಮವನ್ನು ಖಾತರಿಪಡಿಸಿಕೊಳ್ಳುವುದು ಆಡಳಿತಾತ್ಮಕವಾಗಿ ಮತ್ತು ಆರ್ಥಿಕ ದೃಷ್ಟಿಯಿಂದಲೂ ಮುಖ್ಯವಾಗುತ್ತದೆ ಮತ್ತು ಅದು ಉತ್ತಮ ಉತ್ಪಾದನಾ ಸಾಮರ್ಥ್ಯ, ಕೆಲಸದಲ್ಲಿ ಹೆಚ್ಚಿನ ಸಂತೃಪ್ತಿಯು ಕೆಲಸವನ್ನು ಬಿಡುವ ಪ್ರಮಾಣವನ್ನು ಕಡಿಮೆಗೊಳಿಸುತ್ತದೆ. ಶಿಕ್ಷಕರ ಯೋಗಕ್ಷೇಮದ ಕಾಳಜಿಯು ಅವರ ಯೋಗಕ್ಷೇಮಕ್ಕೆ ಅಡ್ಡಿಪಡಿಸುವಂತಹ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಶಿಕ್ಷಕರು ತಮ್ಮ ವಿದ್ಯಾರ್ಥಿಗಳು ಹಾಗೂ ಸಹೋದ್ಯೋಗಿಗಳ ಜೊತೆ ಧನಾತ್ಮಕವಾಗಿ ತೊಡಗಿಸಿಕೊಂಡು ತಮ್ಮ ವೃತ್ತಿಯಲ್ಲಿ ಯಶಸ್ಸನ್ನು ಸಾಧಿಸಿ, ಸಂತೃಪ್ತಿಯನ್ನು ಹೊಂದಲು ಬೇಕಾದ ವೃತ್ತಿಪರ ವಾತಾವರಣವನ್ನು ಸೃಷ್ಟಿಸಲು ಸಹಾಯಕವಾಗುತ್ತದೆ.

## ಶಿಕ್ಷಕರ ಯೋಗಕ್ಷೇಮದ ಆಯಾಮಗಳು

ಒಳ್ಳೆಯ ಯೋಗಕ್ಷೇಮದ ಸ್ಥಿತಿ ಎಂದರೆ ಬದುಕಿನಲ್ಲಿ ಸಂತೃಪ್ತಿಯನ್ನು ಅನುಭವಿಸುವುದರ ಜೊತೆಗೆ ಅದರಲ್ಲಿ ಸಂತೋಷದ, ತೃಪ್ತಿಯ ಹಾಗೂ ಉದ್ದೇಶವನ್ನು ಗುರುತಿಸಿ–ಕೊಳ್ಳುವುದು. ಒಳ್ಳೆಯ ಯೋಗಕ್ಷೇಮವನ್ನು ಬಹಳಷ್ಟು ಬಾರಿ ಬದುಕಿನ ಒತ್ತಡಗಳನ್ನು ತಾಳಿಕೊಳ್ಳುವ, ಸಂಬಂಧಗಳನ್ನು ಬೆಳೆಸಿ

ಉಳಿಸಿಕೊಳ್ಳುವ, ಆರೋಗ್ಯಕರವಾಗಿಯೂ ಸದೃಢವಾಗಿಯೂ ಇದ್ದು, ತಮ್ಮ ಗುರಿಗಳನ್ನು ಸಾಧಿಸುವಲ್ಲಿ ಉದ್ದೇಶಪೂರ್ವಕವಾಗಿ ಉತ್ಪಾದನಾಶೀಲತೆಯನ್ನು ತೋರಿಸುವ ಒಬ್ಬ ವ್ಯಕ್ತಿಯ ಸಾಮರ್ಥ್ಯವೆಂದು ಪರಿಗಣಿಸಲಾಗುತ್ತದೆ. ಆದಾಗ್ಯೂ, ಕಾರ್ಯಕ್ಷೇತ್ರದಲ್ಲಿ ಒಳ್ಳೆಯ ಯೋಗಕ್ಷೇಮವು ಸಾಮಾಜಿಕ–ವ್ಯಾವಹಾರಿಕ (socioecological) ಆಯಾಮವನ್ನೂ ಹೊಂದಿದೆ. ಶಿಕ್ಷಕರ ಯೋಗಕ್ಷೇಮವು ತಮ್ಮ ಭಾವನೆಗಳನ್ನು ನಿಭಾಯಿಸುವ ಸಾಮರ್ಥ್ಯ, ಸಂಬಂಧಗಳನ್ನು ನಿರ್ವಹಿಸುವ ರೀತಿ ಮತ್ತು ವೈಯಕ್ತಿಕ ಹಾಗೂ ವೃತ್ತಿಪರ ಗುರಿಗಳನ್ನು ಸಾಧಿಸುವುದರ ಮೇಲೆ ಬಹುಪಾಲು ನಿಂತಿದೆ. ಅದು ಬಹುಮುಖ್ಯವಾಗಿ ಅವರ ವೃತ್ತಿ ಜೀವನಕ್ಕೆ ಸಂಬಂಧಿಸಿದ ಎಲ್ಲಾ ಆಯಾಮಗಳಿಂದ ಪ್ರಭಾವಿಸಲ್ಪಟ್ಟಿರುತ್ತದೆ. ಆ ಆಯಾಮ–ಗಳೆಂದರೆ, ಅವರ ಕಾರ್ಯಕ್ಷೇತ್ರದ ಭೌತಿಕ ವಾತಾವರಣದಲ್ಲಿ ಸಿಕ್ಕುವ ಮನ್ನಣೆ, ಮೆಚ್ಚುಗೆ ಹಾಗೂ ಪರಿಗಣನೆಗಳಿಂದ ಮೂಡುವ ಸುರಕ್ಷತೆ ಹಾಗೂ ಭದ್ರತೆಗಳನ್ನೊಳಗೊಂಡು; ತಮ್ಮ ಸಹೋದ್ಯೋಗಿಗಳು, ವಿದ್ಯಾರ್ಥಿಗಳು ಹಾಗೂ ಶಾಲಾ ಸಮುದಾಯದೊಡನೆ ಒಂದು ನೈಜ ಹಾಗೂ ನಂಬಿಕಸ್ಥ ಸಂಬಂಧವನ್ನು ಹೊಂದುವುದರವರೆಗೆ. ಅವರ ಕೆಲಸದ ಗುಣಮಟ್ಟ, ಅವರ ಬೋಧನೆಯ ಪರಿಣಾಮಕಾರಿತ್ವ ಹಾಗೂ ಕಲಿಕೆಯ ವಾತಾವರಣ ಮತ್ತು ಕಲಿಯುವವರ ಸಾಧನೆಗಳಿಗೆ ಅವರು ನೀಡಬಲ್ಲ 'ಮೌಲ್ಯವರ್ಧನೆ'ಗಳ (value addition) ಬಗ್ಗೆ ಶಿಕ್ಷಕರಿಗೆ ಇರುವ ದೃಷ್ಟಿಕೋನ ಕೂಡ ಅವರ ಕೆಲಸದಲ್ಲಿನ ಸಂತೃಪ್ತಿ ಹಾಗೂ ಯೋಗಕ್ಷೇಮದ ಭಾವನೆಗಳಿಗೆ ಸ್ಪಷ್ಟವಾದ ನೆರವನ್ನೀಯುತ್ತವೆ.




ದೈಹಿಕ ದಾರ್ಢ್ಯತೆ ಹಾಗೂ ಪ್ರಜ್ಞಾಶೀಲತೆ

ಕೆಲಸದಲ್ಲಿ ಉತ್ಪಾದನಾಶೀಲತೆ ಹಾಗೂ ಕ್ಷಮತೆ

ಆರೋಗ್ಯಕರ ಸಂಬಂಧಗಳನ್ನು ಆನಂದಿಸುವುದು, ಸುರಕ್ಷಿತ ಭಾವನೆಯನ್ನು ಅನುಭವಿಸುವುದು, ಸಮುದಾಯದಲ್ಲಿ ಒಂದಾಗುವುದು

ವೈಯಕ್ತಿಕ ಹಾಗೂ ವೃತ್ತಿಪರ ಗುರಿಗಳನ್ನು ಸಾಧಿಸುವುದು

ವೃತ್ತಿ ಬದುಕಿನಲ್ಲಿ ಸಮತೋಲನ

**ಚಿತ್ರ 1. ಶಿಕ್ಷಕರ ಯೋಗಕ್ಷೇಮದ ವೈಯಕ್ತಿಕ, ಸಾಮಾಜಿಕ ಮತ್ತು ಪರಿಸರದ ಆಯಾಮಗಳು**

## ಯೋಗಕ್ಷೇಮಕ್ಕೆ ಬಲ ತುಂಬುವ ಸಮಾಜೋ-ಭಾವನಾತ್ಮಕ ಸಾಮರ್ಥ್ಯಗಳು

- ಶಿಕ್ಷಕರ ಸಮಾಜೋ–ಭಾವನಾತ್ಮಕ ಕಲಿಕಾ ಒಕ್ಕೂಟವು (The Consortium for Socio-Emotional Learning CASEL, 2013) ಶಿಕ್ಷಕರು ಯೋಗಕ್ಷೇಮ ಹೊಂದಲು ಸಹಾಯಕವಾಗುವ ಹಾಗೂ ವಿದ್ಯಾರ್ಥಿಗಳ ಕಲಿಕಾ ಫಲಿತಾಂಶಗಳ ಮೇಲೆ ಪ್ರಭಾವ ಬೀರುವ ಐದು ಸಮಾಜೋ–ಭಾವನಾತ್ಮಕ ಸಾಮರ್ಥ್ಯಗಳನ್ನು ಪಟ್ಟಿಮಾಡುತ್ತದೆ.

- ಸ್ವ–ಪ್ರಜ್ಞೆ: ಸ್ವ–ಪ್ರಜ್ಞೆ ಹೊಂದುವುದು ಎಂದರೆ ತಮ್ಮ ಭಾವನೆಗಳು, ಗುರಿಗಳು, ಮೌಲ್ಯಗಳು, ಶಕ್ತಿ ಹಾಗೂ ಮಿತಿಗಳನ್ನು ಅರ್ಥಮಾಡಿಕೊಳ್ಳುವುದು. ಇದು ಮನಸ್ಸಿನಲ್ಲಿ ಒಂದು ಧನಾತ್ಮಕ ಸ್ಥಿತಿಯನ್ನು ಬೆಳೆಸಿಕೊಳ್ಳಲು ಸಹಾಯ ಮಾಡುತ್ತದೆ.

- ಸ್ವ–ನಿರ್ವಹಣೆ: ತಮ್ಮ ಯೋಚನೆಗಳು, ಭಾವನೆಗಳು ಮತ್ತು ವರ್ತನೆಗಳನ್ನು ನಿರ್ವಹಿಸುವ ಸಾಮರ್ಥ್ಯ; ಇದು ಒತ್ತಡವನ್ನು ನಿರ್ವಹಿಸಲು, ವಾಸ್ತವಿಕ ಗುರಿಗಳನ್ನಿಟ್ಟು–ಕೊಳ್ಳಲು ಮತ್ತು ಅಗತ್ಯ ಬಿದ್ದಾಗ ಅವುಗಳಿಗೆ ಹೊಂದಿಕೊಳ್ಳಲು ಅನುಕೂಲ ಮಾಡಿಕೊಡುತ್ತದೆ.

- ಸಾಮಾಜಿಕ–ಪ್ರಜ್ಞೆ: ಸಾಮಾಜಿಕ ಪ್ರಜ್ಞೆಯನ್ನು ಹೊಂದುವುದು ಎಂದರೆ ಸಾಮಾಜಿಕ ರೀತಿನೀತಿಗಳನ್ನು ಮತ್ತು ನಿರೀಕ್ಷೆಗಳನ್ನು ಅರಿತುಕೊಳ್ಳುವುದು. ಈ ಅರಿವು ಒಬ್ಬ ವ್ಯಕ್ತಿಗೆ ಇತರರ ಸಮಾಜೋ–ಭಾವನಾತ್ಮಕ ಅಗತ್ಯಗಳನ್ನು ಗ್ರಹಿಸಲು ಮತ್ತು ಅವರನ್ನು ಪರಾನುಭೂತಿಯಿಂದ, ಕರುಣೆಯಿಂದ ಕಾಣಲು ಸಹಕರಿಸುತ್ತದೆ. ಬೇರೆಲ್ಲರಿಗಿಂತ ತಮ್ಮ ವಿದ್ಯಾರ್ಥಿಗಳ ವೈವಿಧ್ಯಮಯ ಅಗತ್ಯಗಳನ್ನು ಅರ್ಥಮಾಡಿಕೊಂಡು, ಸಂಪನ್ಮೂಲಗಳನ್ನು ಗುರುತಿಸಿ, ಅವರು ವ್ಯಾಪಕ ಶಾಲಾ ಸಮುದಾಯದ ಬೆಂಬಲವನ್ನು ಗಳಿಸಿಕೊಳ್ಳುವಂತೆ ನೋಡಿಕೊಳ್ಳಲು ಬೇರೆಲ್ಲರಿಗಿಂತ ಶಿಕ್ಷಕರಿಗೆ ಹೆಚ್ಚು ಸಾಧ್ಯತೆ ಇದೆ.

- ಸಂಬಂಧಗಳನ್ನು ಬೆಳೆಸಿಕೊಳ್ಳುವುದು: ಒಂದು ಸೌಹಾರ್ದಯುತವಾದ, ಪ್ರೋತ್ಸಾಹದಾಯಕ ವೃತ್ತಿ

ಸಂಸ್ಕೃತಿಯನ್ನು ನಿರ್ಮಿಸಲು ವಿದ್ಯಾರ್ಥಿಗಳು ಮತ್ತು ಸಹೋದ್ಯೋಗಿಗಳ ಜೊತೆ ಗಟ್ಟಿಯಾದ ಹಾಗೂ ವಿಶ್ವಾಸಪೂರ್ವಕ ಸಂಬಂಧವನ್ನು ಬೆಳೆಸಿಕೊಳ್ಳುವುದು ಅವಶ್ಯಕವಾಗಿದೆ. ಸಕ್ರಿಯವಾಗಿ ಕೇಳಸಿಕೊಳ್ಳುವ, ಸ್ಪಷ್ಟವಾಗಿ ಸಂವಹನ ಮಾಡುವ ಹಾಗೂ ಬಂಧುತ್ವವನ್ನು ಅನುಭವಿಸುವ ಸಾಮರ್ಥ್ಯವು ಒಂದು ಸಮುದಾಯಕ್ಕೆ ಸೇರಿದಂತಹ ಭಾವನೆಯನ್ನು ಅನುಭವಿಸಲು ಅನುವು ಮಾಡಿಕೊಡುತ್ತದೆ. ಅದು ಪರಸ್ಪರ ಸಹಕಾರ ಮತ್ತು ಭಿನ್ನಾಭಿಪ್ರಾಯಗಳನ್ನು ಸೌಹಾರ್ದಯುತವಾಗಿ ಬಗೆಹರಿಸಿ–ಕೊಳ್ಳುವುದರೊಂದಿಗೆ ಎಲ್ಲರೂ ಸುರಕ್ಷತೆ, ಕಾಳಜಿಯನ್ನು ಪಡೆಯಲು ಕೂಡ ಸಹಕಾರಿಯಾಗಿದೆ.

- ಜವಾಬ್ದಾರಿಯುತ ನಿರ್ಣಯ ತೆಗೆದುಕೊಳ್ಳುವುದು: ತಮ್ಮನ್ನು ತಾವೇ ಅರಿತುಕೊಳ್ಳುವುದು ಅಗತ್ಯವಿದ್ದಾಗ ನಿರ್ಣಯಗಳನ್ನು ತೆಗೆದುಕೊಳ್ಳಲು ಆತ್ಮವಿಶ್ವಾಸ ಕೊಡುತ್ತದೆ. ಅದರಲ್ಲೂ ವಿಶೇಷವಾಗಿ ಶಿಕ್ಷಕರು, ತಮ್ಮ ವೃತ್ತಿ ದಿನವೊಂದರಲ್ಲಿ ಮಕ್ಕಳನ್ನು ಎಲ್ಲಿ ಕೂರಿಸಬೇಕು, ಹೇಗೆ ಗುಂಪು ಮಾಡಬೇಕು ಎಂಬುದನ್ನು ನಿರ್ಧರಿಸುವುದು, ಸೂಕ್ತ ಕಲಿಸುವ–ಕಲಿಯುವ ಹಾಗೂ ಮೌಲ್ಯಮಾಪನದ ಕಾರ್ಯತಂತ್ರಗಳನ್ನು ಆರಿಸಿಕೊಳ್ಳುವುದರಿಂದ ಹಿಡಿದು ವಿದ್ಯಾರ್ಥಿಗಳು ಪ್ರಗತಿ ಹೊಂದಲು ಸಾಧ್ಯವಾಗುವಂತೆ ನಿರ್ದಿಷ್ಟವಾದ ಹಿಮ್ಮಾಹಿತಿ ನೀಡಿ ಬೆಂಬಲ ಒದಗಿಸುವುದರವರೆಗೆ ಚೆನ್ನಾಗಿ ತಿಳಿದು ನಿರ್ಣಯ ಮಾಡಬೇಕಾಗಿ ಬರುತ್ತದೆ.

ತಮ್ಮ ಆರೈಕೆಯೊಳಗೆ ಬರುವವರ ಯೋಗಕ್ಷೇಮವನ್ನು ಗಣನೆಗೆ ತೆಗೆದುಕೊಂಡು, ನ್ಯಾಯಯುತವಾದ, ನಿಷ್ಪಕ್ಷಪಾತವಾದ ಆಯ್ಕೆಗಳನ್ನು ಜಾಗರೂಕವಾಗಿ ಮಾಡಬೇಕಾಗುತ್ತದೆ.




**ಚಿತ್ರ 2. ಯೋಗಕ್ಷೇಮಕ್ಕೆ ಬಲ ತುಂಬುವ ಸಮಾಜೋ-ಭಾವನಾತ್ಮಕ ಸಾಮರ್ಥ್ಯಗಳು** (CASEL, 2013)

ಆದರೂ, ಸಾಕಷ್ಟು ಸಮಾಜೋ–ಭಾವನಾತ್ಮಕ ಸಾಮರ್ಥ್ಯ–ಗಳನ್ನು ಹೊಂದಿರುವಂತಹ ಶಿಕ್ಷಕರು ಕೂಡ ತಮ್ಮ ನಿಯಂತ್ರಣ ಮೀರಿದ ಮತ್ತು ಬಾಹ್ಯ ಪರಿಸರದ ಹಲವು ಕಾರಣಗಳಿಂದ ಒತ್ತಡ ಬಳಲಿಕೆಗೆ ಒಳಗಾಗುವ ಅಪಾಯ ಇರಬಹುದು. ಅತಿ ಉತ್ಸಾಹ ಹಾಗೂ ಸ್ವಯಂ–ಪ್ರೇರಣೆಯುಳ್ಳ ಶಿಕ್ಷಕರಿಗಂತೂ, ಬಾಹ್ಯ ಕಾರಣಗಳಿಂದಾಗಿ ತಮ್ಮ ಗುರಿಯನ್ನು ಸಾಧಿಲಾಗದೆ ಹೋದ ಸಂದರ್ಭಗಳಲ್ಲಿ ಹತಾಶೆ ಹಾಗೂ ಒತ್ತಡಕ್ಕೆ ಒಳಗಾಗುವ ಅಪಾಯ ಸ್ವಲ್ಪ ಹೆಚ್ಚೇ ಎನ್ನಬಹುದು. ಉದಾಹರಣೆಗೆ, ವರ್ತನೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಪರಿಹರಿಸಲು ಸಹೋದ್ಯೋಗಿಗಳು ಮತ್ತು ಶಾಲಾ ಮುಖ್ಯಸ್ಥರ ಸಹಕಾರ ಬೇಕಾಗುತ್ತದೆ. ಅದರೊಂದಿಗೆ, ಭಿನ್ನಾಭಿಪ್ರಾಯಗಳಿಗೆ ಸೌಹಾರ್ದಯುತವಾದ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಕ್ರಿಯೆಗಳ ಮತ್ತು ಪರಸ್ಪರ ಹಂಚಿಕೊಂಡು ಸಂಘರ್ಷಗಳನ್ನು ಪರಿಹರಿಸಲು ಧನಾತ್ಮಕ ಶಿಸ್ತುಪಾಲನಾ ಕ್ರಮಗಳ ಸಾಮೂಹಿಕವಾದ ಒಂದು ಪರಿಸರ ವ್ಯವಸ್ಥೆಯ ಅಗತ್ಯವಿರುತ್ತದೆ. ಇವುಗಳ ಅನುಪಸ್ಥಿತಿಯಲ್ಲಿ ಶಿಕ್ಷಕರಿಗೆ ಭಾವನಾತ್ಮಕ ಬಳಲಿಕೆ (emotional exhaustion) ಹಾಗೂ ಹತಾಶರಾಗುವಂತಹ ಸಾಧ್ಯತೆಗಳು ಹೆಚ್ಚಿರುತ್ತವೆ. ಅವರ ಯೋಗಕ್ಷೇಮಕ್ಕೆ ಬಂದೊದಗುವ ಮತ್ತೊಂದು ಅಪಾಯ ಎಂದರೆ ಮೇಲಿನವರಿಂದ ಪಠ್ಯಕ್ರಮವನ್ನು ಪೂರ್ಣಗೊಳಿಸಲು ಮತ್ತು ಇತರ ಆಡಳಿತಾತ್ಮಕ ಕೆಲಸಗಳನ್ನು ಮಾಡಲು ಬರುವಂತಹ ಆದೇಶಗಳದ್ದು. ಇವು ಶಿಕ್ಷಕರ ಸಮಯವನ್ನು ಹಾಳುಮಾಡುವುದಲ್ಲದೆ ಅವರ ವೃತ್ತಿಪರ ಗುರಿಗಳನ್ನು ಪೂರ್ಣಗೊಳಿಸಲು ಅಡ್ಡಿಪಡಿಸುತ್ತವೆ. ಇನ್ನು ಅವರ ಶಾಲೆಯಲ್ಲಿನ ವೃತ್ತಿಪರ ಸಂಸ್ಕೃತಿಯು ಶಾಲೆಯ ಒಳಗೆ ಅಥವಾ ಹೊರಗೆ ತಮಗೆ ಪೂರಕ ಬೆಂಬಲ ನೀಡುವಂತಹ ಯಾವುದೇ ರೀತಿಯ ಕಲಿಕಾ ಸಮುದಾಯಗಳನ್ನು ಸೃಷ್ಟಿಸಿಕೊಳ್ಳಲು ಅನುಕೂಲಕರವಾಗದೆ ಹೋದರಂತೂ ಈ ಸಮಸ್ಯೆ ದುಪ್ಪಟ್ಟಾಗಿಬಿಡುತ್ತದೆ.

## ಶಿಕ್ಷಕರ ಯೋಗಕ್ಷೇಮದ ಪೋಷಣೆ

ಯೋಗಕ್ಷೇಮದ ಪೋಷಣೆ ಎನ್ನುವುದು ಶಿಕ್ಷಕರು ಮತ್ತು ಶಾಲೆಯ ಮುಖ್ಯಸ್ಥರು ಇಬ್ಬರಿಗೂ ಸೇರಿದ ಜವಾಬ್ದಾರಿಯಾಗಿದೆ. ಶಿಕ್ಷಕರು ತಮ್ಮ ಯೋಗಕ್ಷೇಮಕ್ಕೆ ಎಡೆ ಮಾಡುವಂತೆ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳುವ ನಿಟ್ಟಿನಲ್ಲಿ ಕೆಲಸ ಮಾಡುವಾಗ ಶಾಲೆಯ ಮುಖ್ಯಸ್ಥರೂ, ಶಿಕ್ಷಕರಿಗೆ ಸ್ವಾಯತ್ತತೆ ಹೊಂದಲು, ಅವರ ವೃತ್ತಿಪರ ಬೆಳವಣಿಗೆಗೆ ಬೇಕಾಗುವ ಅವಕಾಶಗಳನ್ನು ಮತ್ತು ವಿದ್ಯಾರ್ಥಿಗಳು ಹಾಗೂ ಸಹೋದ್ಯೋಗಿಗಳ ನಡುವೆ ವಿಶ್ವಾಸಪೂರ್ವಕ ಸಂಬಂಧಗಳನ್ನು ಹೊಂದಲು ಸಾಧ್ಯತೆಯುಳ್ಳ ಶಾಲಾ ವಾತಾವರಣವನ್ನು ಸೃಷ್ಟಿಸಿಕೊಡಲು ಬದ್ಧರಾಗಿರಬೇಕು. ಅಂಥ ಒಂದು ಸಂಸ್ಕೃತಿಯು ಸಮಭಾಗಿತ್ವವುಳ್ಳ ಮುಂದಾಳತ್ವ, ಎರಡೂ ಬದಿಯಿಂದ ನಡೆಯುವ ಸ್ಪಷ್ಟವಾದ, ಪಾರದರ್ಶಕ ಸಂವಹನ ಮತ್ತು ಸಾಮೂಹಿಕ ನಿರ್ಣಯ ತೆಗೆದುಕೊಳ್ಳುವಲ್ಲಿ ಪ್ರತಿಬಿಂಬಿತ–ಗೊಳ್ಳುತ್ತದೆ. ಶಿಕ್ಷಕರು ತಮಗೋಸ್ಕರ ಏನು ಮಾಡಬಹುದು:

- ಸ್ವ-ಆರೈಕೆಗೋಸ್ಕರ ಒಂದು ಸ್ವಂತ ಸಮಯವನ್ನು ಮಾಡಿಕೊಳ್ಳುವುದು: ಶಿಕ್ಷಕರು ಇದನ್ನು ಪ್ರತಿ ದಿನ ತಪ್ಪದೆ ಮಾಡಬೇಕು. ಶಿಕ್ಷಕರಿಗೆ 'ಒಳ್ಳೆಯ-ಭಾವನೆ' ಕೊಡುವಂತಹ ಕೆಲವು ದಿನಚರಿಗಳೆಂದರೆ: ದೈಹಿಕ ವ್ಯಾಯಾಮಕ್ಕಾಗಿ ಸಮಯ ವಿನಿಯೋಗಿಸುವುದು, ಹವ್ಯಾಸವೊಂದನ್ನು ಬೆಳೆಸಿಕೊಳ್ಳುವುದು, ಧ್ಯಾನ, ಅಥವಾ ಅವರಿಗೆ ಆತ್ಮೀಯ-ವಾಗಿರುವವರೊಂದಿಗೆ ಮಾತನಾಡುವಂತಹ ಸರಳ ಕೆಲಸವಾದರೂ ಸರಿ.

- ವೃತ್ತಿಪರ ಬೆಳವಣಿಗೆಗಾಗಿ ಸ್ವಲ್ಪ ಸಮಯ ಮೀಸಲಿಡುವುದು: ಶಿಕ್ಷಣದ ಇತ್ತೀಚಿನ ಬೆಳವಣಿಗೆಗಳ ಬಗ್ಗೆ ಓದಿಕೊಂಡು ತಮ್ಮ ಸಹೋದ್ಯೋಗಿಗಳೊಂದಿಗೆ ಚರ್ಚಿಸುವ, ತಮ್ಮ ಶಿಕ್ಷಣ ಕ್ರಮದ ಬಗ್ಗೆ ಪರ್ಯಾಲೋಚನೆ ಮಾಡಿ ಅದರಲ್ಲಿ ಹೊಸ ವಿಚಾರಗಳನ್ನು ಅಳವಡಿಸಿಕೊಳ್ಳುವ ಶಿಕ್ಷಕರು ತಮ್ಮ ಆತ್ಮವಿಶ್ವಾಸ ಮತ್ತು ಸ್ವಾಭಿಮಾನದಲ್ಲಿ ಪ್ರಗತಿಯನ್ನು ದಾಖಲಿಸಿದ ಉದಾಹರಣೆಯಿದೆ. ಅಂಥ ಶಿಕ್ಷಕರು ತಮ್ಮ ವೃತ್ತಿಪರ ಆಚರಣೆಗಳು ಪರಿಣಾಮಕಾರಿ ಹಾಗೂ ಯಶಸ್ವಿಯಾಗಿವೆ ಎಂಬ ಭಾವನೆಯನ್ನು ಅನುಭವಿಸು-ವುದಲ್ಲದೆ ಹೆಚ್ಚಿನ ಮಟ್ಟದ ವೃತ್ತಿಪರತೆಯನ್ನು ಸಾಧನೆ ಮಾಡಿದ ತೃಪ್ತಿಯನ್ನೂ ಅನುಭವಿಸುತ್ತಾರೆ.

- ಶಾಲೆಯ ಹೊರಗೂ ವಿದ್ಯಾರ್ಥಿಗಳು, ಸಹೋದ್ಯೋಗಿಗಳು, ಇತರ ಸಿಬ್ಬಂದಿಗಳು ಮತ್ತು ವೃತ್ತಿಪರರೊಡನೆ ಸಂಪರ್ಕ-ವನ್ನಿಟ್ಟುಕೊಂಡು ಸಂಬಂಧಗಳನ್ನು ಬೆಳೆಸಿಕೊಳ್ಳುವುದು: ಶಿಕ್ಷಕರು ವಿದ್ಯಾರ್ಥಿಗಳೊಡನೆ ಏರ್ಪಡುವ ಆರೋಗ್ಯಕರ ಸಂಬಂಧ ತರಗತಿ ನಿರ್ವಹಣೆಯನ್ನು, ಬೋಧನೆಯ ಒತ್ತಡವನ್ನು ಹಗುರವಾಗಿಸುತ್ತದೆ ಎಂಬುದು ಶಿಕ್ಷಕರ ಖಚಿತ ಅಭಿಪ್ರಾಯವಾಗಿದೆ. ಇದೇ ರೀತಿ ಸಹೋದ್ಯೋಗಿಗಳ ಜೊತೆಗಿನ ಸ್ನೇಹಪರ ಸಂಬಂಧಗಳು ಅವರ ಸಹಭಾಗಿತ್ವದ ಕೆಲಸವನ್ನು ಹಗುರಗೊಳಿಸುವುದಲ್ಲದೆ ಅದನ್ನು ಹೆಚ್ಚು ಆನಂದದಾಯಕವೂ, ಮನೋರಂಜಕವಾಗಿಯೂ ಮಾಡುತ್ತವೆ.

- ಶಾಲಾ ಮುಖ್ಯಸ್ಥರು ಮಾಡಬಹುದನ್: ಎಲ್ಲರನ್ನೂ ಗೌರವದಿಂದ ಕಾಣುವುದು
- ಪ್ರತಿ ಶಿಕ್ಷಕರಿಗೂ ತಮ್ಮ ಅಭಿಪ್ರಾಯವನ್ನು ಧ್ವನಿಸಲು ಅನುವು ಮಾಡಿಕೊಡುವುದು ಮತ್ತು ನಿರ್ಣಯ ತೆಗೆದುಕೊಳ್ಳುವಲ್ಲಿ ಅವರನ್ನು ತೊಡಗಿಸಿಕೊಳ್ಳುವುದು
- ಸ್ವಾಯತ್ತತೆಯನ್ನು ಒದಗಿಸಿಕೊಡುವುದು
- ಶಿಕ್ಷಕರ ಸಮಸ್ಯೆಗಳನ್ನು ಚರ್ಚಿಸಲು ಒಂದು ಸುರಕ್ಷಿತ ಅವಕಾಶವನ್ನು ಸೃಷ್ಟಿಸಿ ಪರಿಹಾರ ಕಂಡುಹಿಡಿಯುವುದು ಆಗ ಅವರು ಸಮಸ್ಯೆಗಳನ್ನು ಹಂಚಿಕೊಳ್ಳಲು, ಕಲಿಯಲು ಮತ್ತು ಜೊತೆಯಾಗಿ ಬೆಳೆಯಲು ಸಾಧ್ಯವಾಗುತ್ತದೆ.
- ಶಿಕ್ಷರಲ್ಲಿರುವ ಬೋಧನೇತರ ಪ್ರತಿಭೆಗಳನ್ನು ಪ್ರದರ್ಶಿಸಲು ಅವಕಾಶಗಳನ್ನು ಯೋಜಿಸುವುದು. ಇಂಥ ಕಾರ್ಯಕ್ರಮಗಳು ಶಿಕ್ಷಕರು ಮನ್ನಣೆಯನ್ನು, ಮೆಚ್ಚುಗೆಯನ್ನು ಅನುಭವಿಸಲು ಮತ್ತು ಒಬ್ಬರು ಇನ್ನೊಬ್ಬರೊಡನೆ ಒಳ್ಳೆಯ ಬಾಂಧವ್ಯ ಹೊಂದಲು ಅಸಂಖ್ಯ ಅವಕಾಶಗಳನ್ನು ಸೃಷ್ಟಿಸುವುದಲ್ಲದೆ ಸಮುದಾಯದೊಡನೆ ಒಂದಾದ ಭಾವನೆಯನ್ನು ಹುಟ್ಟುಹಾಕುತ್ತವೆ.



ಸಾಮರಸ್ಯತೆ, ವಿಶ್ವಾಸಪೂರ್ಣ ಸಂಬಂಧಗಳು, ಒಳಗೊಂಡಿರುವ ಮತ್ತು ಸುರಕ್ಷತೆಯ ಪ್ರಜ್ಞೆ

ವೈಯಕ್ತಿಕ ಹಾಗೂ ವೃತ್ತಿಪರ ಬೆಳವಣಿಗೆಗಾಗಿ ಸಹಕಾರಯುಕ್ತ ವೃತ್ತಿ ಸಂಸ್ಕೃತಿ

ನಿರ್ಣಯ ತೆಗೆದುಕೊಳ್ಳಲು ಹಾಗೂ ಸ್ವಾಯತ್ತತೆಯನ್ನು ಅನುಭವಿಸಲು ಅವಕಾಶಗಳು

**ಚಿತ್ರ 3. ಶಿಕ್ಷಕರ ಯೋಗಕ್ಷೇಮವನ್ನು ಪೋಷಿಸುವುದು**

## 'ಸಂತೋಷಭರಿತ' ಶಾಲೆಯ ಮೂರು ಆಚರಣೆಗಳು

ಅದ್ವೈತ್ ಪ್ರತಿಷ್ಠಾನವು 2017ರಲ್ಲಿ ಹೈದ್ರಾಬಾದನ್ ಇಕ್ಬಾಲಿಯಾ ಇಂಟರ್‌ನ್ಯಾಷನಲ್ ಸ್ಕೂಲ್ ಅನ್ನು (Iqbalia International School- IIS) ಅದರ ಪರಿವರ್ತನ ಆಚರಣೆಗಳಿಗಾಗಿ ಗುರುತಿಸಿತು. ಶಿಕ್ಷಕರು ಹಾಗೂ ವಿದ್ಯಾರ್ಥಿಗಳ ಯೋಗಕ್ಷೇಮವನ್ನು ಪೋಷಿಸುವಂತಹ ಪರಿಸರವನ್ನು ಸೃಷ್ಟಿಸುವತ್ತ ಹಾಗೂ ಒಂದು ಸಂತೋಷಭರಿತ ಶಾಲಾ ಸಂಸ್ಕೃತಿಯನ್ನು (happy school culture) ನಿರ್ಮಿಸುವತ್ತ ಈ ಕೆಳಕಂಡ ಆಚರಣೆಗಳು ಮುಖ್ಯ ಪಾತ್ರ ವಹಿಸಿದ್ದವು.

1. ಶಿಕ್ಷಕರ ಮುಕ್ತ ಮಾತುಕತೆ (Teachers' circle time)

ಪ್ರತಿ ಶನಿವಾರದಂದು, ಬೆಳಗಿನ ಅವಧಿಯನ್ನು ವಿದ್ಯಾರ್ಥಿಗಳು ನಡೆಸಿಕೊಂಡು ಹೋಗುವ ಸಮಯದಲ್ಲಿ, ಶಿಕ್ಷಕರು ಒಂದು ಸಭಾಂಗಣದಲ್ಲಿ ಮುಕ್ತ ಮಾತುಕತೆಗೆಂದು ಸೇರುತ್ತಾರೆ. ಅಲ್ಲಿ ಪ್ರತಿಯೊಬ್ಬರೂ ತಮ್ಮನ್ನು ಧನಾತ್ಮಕವಾಗಿ ಪ್ರಭಾವಿಸಿದ ಒಂದು ಅನುಭವವನ್ನು ಹಂಚಿಕೊಳ್ಳುತ್ತಾರೆ. ಮೊದಮೊದಲಿಗೆ, ಈ ಆಚರಣೆಯನ್ನು ಶುರು ಮಾಡಿದ ಸಮಯದಲ್ಲಿ, ಶಿಕ್ಷಕರು ತಡಕಾಡುತ್ತಿದ್ದರು– ನಮ್ಮ ಮನಸ್ಸು ಅಹಿತಕರ ಘಟನೆಗಳ ಕಡೆಗೇ ವಾಲುವುದು ಸಹಜ. ಸ್ವಲ್ಪ ಸಮಯದ ನಂತರ, ಸಂಭಾಷಣೆಗಳು ಸರಾಗವಾಗಿ ಹರಿಯತೊಡಗಿದವು, ಹಾಗೂ ಶಿಕ್ಷಕರು ಹೇಗೆ ತಾವು ಕ್ರಮೇಣವಾಗಿ ತಮ್ಮ ಸುತ್ತ ನಡೆಯುವ ಧನಾತ್ಮಕ ಘಟನೆಗಳನ್ನು ಗಣನೆಗೆ ತೆಗೆದುಕೊಳ್ಳಲು ಶುರು ಮಾಡಿ, ಅದನ್ನು ಯೋಚಿಸಿ, ಪದೇಪದೇ ಸವಿದರು, ಮತ್ತು ಹೇಗೆ ಈ ಅಭ್ಯಾಸವು ಅವರಿಗೆ ತಮ್ಮ ಬಗ್ಗೆ ಹಾಗೂ ಸುತ್ತಮುತ್ತಲಿನವರ ಬಗ್ಗೆ ಒಳ್ಳೆಯ ಭಾವನೆ ಹೊಂದಲು ಸಹಾಯ ಮಾಡಿತು ಎಂಬುದನ್ನು ವ್ಯಕ್ತಪಡಿಸಿದರು. ಈ ಆಚರಣೆಯು ಶಿಕ್ಷಕರಿಗೆ ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥಮಾಡಿಕೊಳ್ಳಲು ಸಹಾಯ ಮಾಡಿತು, ಸಂಬಂಧಗಳನ್ನು ಬೆಳೆಸಿಕೊಳ್ಳಲು ಅವಕಾಶಗಳನ್ನು ಸೃಷ್ಟಿಸಿ ಸ್ನೇಹಭಾವ ಹಾಗೂ ಎಲ್ಲರೊಡನೆ ಒಂದಾದ ಭಾವನೆಯನ್ನು ಬೆಳೆಸಿತು.

2. 3–ಎಸ್ ಸಭೆ[1] (ವಿಷಯವಸ್ತು, ಸ್ವ–ಕಲಿಕೆ ಮತ್ತು ಸಾಮಾಜಿಕ ಕಲಿಕೆ)

3. ವಾರಕ್ಕೊಂದು ಸಲ, ಎಲ್ಲ ವಿಷಯಗಳ ಶಿಕ್ಷಕರು ತಮ್ಮ ಕ್ಯಾಲೆಂಡರಿನಲ್ಲಿ ಮೊದಲೇ ಯೋಜಿಸಿಕೊಂಡಂತೆ ೯೦ ನಿಮಿಷಗಳ (ಎರಡು ಅವಧಿಯ) ಕಾಲ ಒಂದೆಡೆ ಸೇರುತ್ತಿದ್ದರು. ಅದರ ಉದ್ದೇಶ ತಮಗೆ ಸಹಾಯ ಮಾಡಿದ ಯಾವುದೇ ತರಗತಿಯ ಕಾರ್ಯತಂತ್ರ ಅಥವಾ ತಾವು ಎದುರಿಸಬೇಕಾಗಿ ಬಂದ ಯಾವುದೇ ಸವಾಲುಗಳ ಬಗ್ಗೆ ಚರ್ಚಿಸುವುದು ಮತ್ತು ಇಡೀ ತಂಡ ಆ ಸಮಸ್ಯೆಗೆ ಸೂಕ್ತ ಪರಿಹಾರ ನೀಡಲು ಯತ್ನಿಸುವುದು. ಇದು ಶಿಕ್ಷಕರಿಗೆ ತಮ್ಮ ಸವಾಲುಗಳನ್ನು ಚರ್ಚಿಸಲು, ಸಹಾಯ ನಿರೀಕ್ಷಿಸಲು ಹಾಗೂ ತಮ್ಮ ದೈನಂದಿನ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಸಾಧ್ಯವಾಗುವಂತಹ ಒಂದು ಸುರಕ್ಷಿತ ವಲಯವನ್ನು ಸೃಷ್ಟಿಸಿಕೊಟ್ಟಿತು. ಇದು ಹಲವು ಶಿಕ್ಷಕರಿಗೆ ತಮ್ಮ ವೃತ್ತಿಪರ ಬೆಳವಣಿಗೆಗೆ ಬೇಕಾದ ವೇದಿಕೆಯೊಂದನ್ನು ಒದಗಿಸಿಕೊಟ್ಟು ಅವರಲ್ಲಿನ ಉತ್ತಮ ಅಂಶಗಳನ್ನು ಹೊರಗೆಳೆಯಲು ಪೂರಕವಾಯಿತು. ಇದು ಶಾಲೆಯಲ್ಲಿ ಬೋಧನೆಯ ಪರಿಣಾಮಕಾರಿತ್ವವನ್ನು ಹೆಚ್ಚಿಸಿತಲ್ಲದೇ ಶಿಕ್ಷಕರು ಈ ಅವಕಾಶವನ್ನು ಬಳಸಿಕೊಂಡು ಪಾಠಗಳನ್ನು ಯೋಜಿಸಲು, ಸಂಪನ್ಮೂಲಗಳನ್ನು ಹಂಚಿಕೊಳ್ಳಲು, ತರಗತಿ ಕೋಣೆಯೊಳಗಿನ ರೂಢಿಗಳನ್ನು ಪರಿಶೀಲಿಸಿ ಅರ್ಥಪೂರ್ಣ ಹಿಮ್ಮಾಹಿತಿ ನೀಡಲು, ಕಲಿಯಲು ಸಾಧ್ಯವಾಗುವಂತಹ ಒಂದು ಸಹಕಾರಯುತ ಸಂಪ್ರದಾಯವನ್ನು ಸ್ಥಾಪಿಸುವಲ್ಲಿ ಕೂಡ ಮುಖ್ಯ ಪಾತ್ರ ವಹಿಸಿತು. ಈ ವ್ಯವಸ್ಥೆಯು ಶಾಲೆಯಲ್ಲಿ ಚಾಲ್ತಿಯಲ್ಲಿರುವ ವೃತ್ತಿಪರ ಬೆಳವಣಿಗೆಗೆ ಕಾರಣವಾಗುವಂತಹ ಶಕ್ತಿಶಾಲಿ ಸಾಧನವಾಗುವುದರ ಜೊತೆಗೆ ಶಿಕ್ಷಕರಿಗೆ ಆದಷ್ಟೇ ಪ್ರಮಾಣದಲ್ಲಿ ವಿದ್ಯಾರ್ಥಿಗಳಿಗೂ ಅನುಕೂಲವಾಗುವಂತಹ ಕಲಿಕೆಯ ಪರಿಸರವನ್ನು ಸೃಷ್ಟಿಸಿತು.

4. ಶಿಕ್ಷಕರ ಮುಂದಾಳತ್ವ

ಶಿಕ್ಷಕ ಸಮುದಾಯವು ಬಹಳ ವೈವಿಧ್ಯಮಯವಾಗಿರುತ್ತದೆ. ಪ್ರತಿಯೊಬ್ಬ ಶಿಕ್ಷಕರಲ್ಲೂ ವಿಭಿನ್ನ ಕೌಶಲಗಳ ಸಂಗ್ರಹವಿರುತ್ತದೆ, ಇವುಗಳಲ್ಲಿ ಕೆಲವು ಕೌಶಲಗಳು ಅವಕಾಶಗಳ ಕೊರತೆಯಿಂದಾಗಿ ಸಂಪೂರ್ಣವಾಗಿ ಬೆಳಕಿಗೆ ಬಂದಿರುವುದಿಲ್ಲ. 'ಶಿಕ್ಷಕರ ಮುಂದಾಳತ್ವ' ವಿಧಾನವು ('Teacher-Leader' approach) ಪ್ರತಿಯೊಬ್ಬರೂ ತಮ್ಮ ಕೌಶಲಗಳನ್ನು ಅತ್ಯುತ್ತಮವಾಗಿ ಹೊರತರಲು ದಾರಿ ಮಾಡಿಕೊಟ್ಟಿತು. ಹಾಗೂ ಬೆಂಬಲವುಳ್ಳ ಸಂಸ್ಕೃತಿಯಲ್ಲಿ, ಆತ್ಮವಿಶ್ವಾಸ ಕಡಿಮೆ ಇದ್ದವರು ಕೂಡ ಕ್ರಮೇಣ ತಮಗೆ ಇಷ್ಟವಾದ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಮುಂದೆ ಬಂದು ಅದನ್ನು ಚೆನ್ನಾಗಿ ನಿಭಾಯಿಸಿದರು ಕೂಡ. ವಾರ್ಷಿಕ ಕಾರ್ಯಕ್ರಮಗಳ ಕ್ಯಾಲೆಂಡರನ್ನು ಯೋಜಿಸುವಾಗ, ಶಿಕ್ಷಕರಿಗೆ ತಮಗೆ ಮುಂದಾಳತ್ವ ವಹಿಸಿಕೊಳ್ಳಲು ಸಾಧ್ಯವಾಗುವಂತಹ ಕಾರ್ಯಕ್ರಮಗಳನ್ನು ಆರಿಸಿಕೊಂಡು ತಮಗೆ ಬೇಕಾದ ಬೆಂಬಲದ ಗುಂಪನ್ನು ಕೂಡ ಆರಿಸಿಕೊಳ್ಳಲು ಸ್ವಾತಂತ್ರ್ಯವಿತ್ತು. ಲಭ್ಯವಿದ್ದ ಸಂಪನ್ಮೂಲಗಳನ್ನು ಬಳಸಿಕೊಂಡು, ಬರಬೇಕಾದ ಫಲಿತಾಂಶ ಬರುವಂತೆ ನೋಡಿಕೊಂಡು ಶಿಕ್ಷಕರಿಗೆ ಸರಿ ಕಂಡಂತೆ ಕಾರ್ಯಕ್ರಮವನ್ನು ಯೋಜಿಸಿ ನಡೆಸುವ ಸಂಪೂರ್ಣ ಸ್ವಾಯತ್ತತೆಯನ್ನು ಅವರಿಗೆ ಕೊಡಲಾಗಿತ್ತು. ಮೊದಲನೇ ವರ್ಷದ ಕೊನೆಯಲ್ಲಿ ಶಿಕ್ಷಕರು ಹೇಳಿದ ಮಾತುಗಳಿವು: 'ಇಂಥ ಸಾಮರ್ಥ್ಯ ನನ್ನಲ್ಲಿದೆ ಎಂದೇ ನನಗೆ ಗೊತ್ತಿರಲಿಲ್ಲ'; 'ಇದರಿಂದ ಕಾರ್ಯಕ್ರಮವನ್ನು ನನಗೆ ಬೇಕಾದ ರೀತಿಯಲ್ಲಿ ಯೋಜಿಸಿ ನಡೆಸಲಿಕ್ಕೆ ಬಹಳಷ್ಟು ಸಮಯ ಸಿಕ್ಕಂತಾಯಿತು. ಈ ರೀತಿಯೇ ಮಾಡಬೇಕೆಂದು ನನಗೆ ಯಾವಾಗಿಂದಲೂ ಅನಿಸುತ್ತಿತ್ತು. ಆದರೆ ಎಷ್ಟೆಲ್ಲ ಕಾರ್ಯಕ್ರಮಗಳ ಜವಾಬ್ದಾರಿಯ ನಡುವೆ ನನಗೆ ಸಮಯವೇ ಸಿಗುತ್ತಿರಲಿಲ್ಲ'; 'ನಾನು ಈ ಹಿಂದೆ ಎಂದೂ ಕಾರ್ಯಕ್ರಮವೊಂದರ ನಿರೂಪಣೆ ಮಾಡಿರಲಿಲ್ಲ; ವಿದ್ಯಾರ್ಥಿಗಳು

ಮತ್ತು ಪಾಲಕರು ನನ್ನ ಉಚ್ಚಾರಣೆಯ ಬಗ್ಗೆ ಹೊಗಳಿದಾಗ ಖುಷಿಯಾಯಿತು. ನನಗನ್ನಿಸುವ ಪ್ರಕಾರ ನಮ್ಮನ್ನು ನಾವು ಅತಿಯಾಗಿ ಮಿತಿಯೊಳಗೆ ಬಂಧಿಸಿಕೊಂಡು ಹೊಸದನ್ನು ಪ್ರಯತ್ನಿಸಲು ಹಿಂಜರಿಯುತ್ತೇವೆ. ನಾನೊಬ್ಬಳೇ ಆಗಿದ್ದಿದ್ದರೆ ಇದು ನನ್ನಿಂದ ಸಾಧ್ಯವಾಗುತ್ತಿರಲಿಲ್ಲ. ಬೆಂಬಲ ನೀಡುವ ಒಂದು ಗುಂಪು ನನ್ನ ಹಿಂದೆ ಇದ್ದುದರಿಂದ ಇದು ಸಾಧ್ಯವಾಯಿತು.'

ಶಾಲಾ ಸಂಸ್ಕೃತಿಯನ್ನು ಪರಿವರ್ತಿಸುವಂತಹ, ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಯೋಗಕ್ಷೇಮವನ್ನು ದೃಢಪಡಿಸುವಂತಹ ನಿರ್ಣಾಯಕ ಆಚರಣೆಗಳ ಕೇಂದ್ರಭಾಗದಲ್ಲಿ, ತನ್ನ ತಂಡದಿಂದ ಅತ್ಯುತ್ತಮ ಫಲಿತಾಂಶ ತೆಗೆಯಲು ತನ್ನ ನೈಪುಣ್ಯತೆ ಮತ್ತು ಅಧಿಕಾರವನ್ನು ಸಂತೋಷದಿಂದ ಹಂಚಿಕೊಂಡ, ಒಬ್ಬ ಕರುಣೆಯುಳ್ಳ ಪರಾನುಭೂತಿಯುಳ್ಳ ಮುಖ್ಯಸ್ಥೆ ಇರುತ್ತಾರೆ.

## 'ಸಂತೋಷಭರಿತ ಸಂಸ್ಕೃತಿಯನ್ನು' ಉಳಿಸಿಕೊಳ್ಳುವುದು

ಯೋಗಕ್ಷೇಮ ಎನ್ನುವುದು ಒಂದು ಸಲ ಸಾಧಿಸಿದ ಮೇಲೆ ಹಾಗೆಯೇ ಉಳಿದುಕೊಳ್ಳುವಂತಹ 'ಹಂತ'ವಲ್ಲ; ಅದು ವೈಯಕ್ತಿಕ ಅಥವಾ ವೃತ್ತಿಪರ ಬದುಕಿನಲ್ಲಿ ಮನಸ್ಸಿನ ಸಮಾಜೋ-ಭಾವನಾತ್ಮಕ ಸ್ಥಿತಿಯ ಮೇಲಾಗುವ ಆಘಾತದಿಂದ ಹದಗೆಡಬಹುದು. ಶಿಕ್ಷಕರು ತಮ್ಮ ವೈಯಕ್ತಿಕ ಹಾಗೂ ವೃತ್ತಿಪರ ಸಾಧನೆಗಳಿಂದ ತೃಪ್ತಿ ಹೊಂದಿ ಸಂತೋಷದಿಂದ ಇರಬೇಕೆಂದಾದರೆ, ಕಾಲಕಾಲಕ್ಕೆ ಅವರ ಯೋಗಕ್ಷೇಮವನ್ನು ಪರೀಕ್ಷಿಸುವುದು ಹಾಗೂ ಅದರ ಮೂಲಕ ಒಟ್ಟಾರೆ ವ್ಯವಸ್ಥೆಯಲ್ಲೇ ಸೂಕ್ತ ಬದಲಾವಣೆಗಳನ್ನು ಮಾಡಿಕೊಳ್ಳುವುದು ಅತ್ಯಗತ್ಯ.

ಶಾಲೆಯಲ್ಲಿ ಶಿಕ್ಷಕರ ಯೋಗಕ್ಷೇಮವನ್ನು ಕಾಪಾಡಿಕೊಳ್ಳಲು ಹಲವು ಮಾನ್ಯ ಹಾಗೂ ವಿಶ್ವಾಸಾರ್ಹ ವಿಧಾನಗಳು, ಸಾಧನಗಳು ಇವೆ; ಪ್ರಶ್ನಾವಳಿಗಳು, ಸಮೀಕ್ಷೆಗಳು, ಗುಂಪು ಚರ್ಚೆಗಳಿಂದ ಹಿಡಿದು ಅಗತ್ಯ ಬಿದ್ದರೆ ಮುಖಾಮುಖಿಯಾಗಿ ಕೂತು ಮಾಡುವ ಸಂದರ್ಶನಗಳವರೆಗೆ ಇವೆ. ಈ ದತ್ತಾಂಶ ಸಂಗ್ರಹಣಾ ವಿಧಾನ ಏನೇ ಇರಲಿ, ಲಕ್ಷ್ಯ ಮಾತ್ರ ಗಮನಿಸಬಲ್ಲ, ಯೋಗಕ್ಷೇಮದ ರಚನೆಗಳನ್ನು ನಿಜವಾಗಿ ಪ್ರತಿನಿಧಿಸಬಲ್ಲ ಮಾಹಿತಿಯ ಮೇಲೆಯೇ ಇರಬೇಕು.

ಮೂರು ಮುಖ್ಯವಾದ ಪರಸ್ಪರ ಸಂಪರ್ಕವಿರುವ ಅಂಶಗಳನ್ನು ವೃತ್ತಿ-ಸಂಬಂಧಿತ ಯೋಗಕ್ಷೇಮದ ಮಾನ್ಯವಾದ ಕ್ರಮಗಳು ಎಂದು ಪರಿಗಣಿಸಲಾಗುತ್ತದೆ:

- ವೃತ್ತಿಪರ ಪರಿಣಾಮಕಾರಿತ್ವ: ಒಳ್ಳೆಯ ಗುಣಮಟ್ಟದ ಯಶಸ್ವೀ ಬೋಧನೆ, ವೃತ್ತಿಪರ ಬಾಧ್ಯತೆಗಳನ್ನು ಪೂರೈಸುವುದು, ವೃತ್ತಿಪರ ಬೆಳವಣಿಗೆ.
- ವೃತ್ತಿ-ಸಂಬಂಧಿತ ಒತ್ತಡ: ಬೋಧನಾ ಭಾರದ ಒತ್ತಡ, ಆಡಳಿತಾತ್ಮಕ ಹಾಗೂ ಇತರ ಕರ್ತವ್ಯಗಳು, ಶಾಲೆ ತಲುಪಲು ಪ್ರಯಾಣದ ಸಮಸ್ಯೆಗಳು, ವಿದ್ಯಾರ್ಥಿಗಳು ಅಥವಾ ಸಹೋದ್ಯೋಗಿಗಳ ಜೊತೆ ಹದಗೆಟ್ಟ ಸಂಬಂಧಗಳು.
- ವಿದ್ಯಾರ್ಥಿಗಳು ಹಾಗೂ ಸಹೋದ್ಯೋಗಿಗಳ ಜೊತೆಗೆ ಇರುವ ಬಲವಾದ ಸಂಬಂಧಗಳಿಂದ ಹೊರಹೊಮ್ಮುವ ಎಲ್ಲರೊಳಗೊಂದಾಗಿ ಬೆರೆತ ಬಾಂಧವ್ಯದ ಭಾವನೆ.

ಈ ಮೂರು ನಿಯತಾಂಕಗಳ ಮೇಲೆ ಶಿಕ್ಷಕರಿಗೆ ಇರುವ ದೃಷ್ಟಿಕೋನ ಮತ್ತು ಅಭಿಪ್ರಾಯಗಳಿಂದ ಮುಖ್ಯಸ್ಥರಿಗೆ ಶಿಕ್ಷಕರ ಒಳ್ಳೆಯ ಯೋಗಕ್ಷೇಮದ ಸ್ಥಿತಿಯನ್ನು ಕಾಪಾಡಿಕೊಳ್ಳಲು ಬಹುಪಾಲು ವಿಶ್ವಾಸಾರ್ಹವಾದ ಕ್ರಮಗಳನ್ನು ರೂಪಿಸಲು ಸಹಾಯವಾಗುತ್ತದೆ. ಆದಾಗ್ಯೂ, ದತ್ತಾಂಶ ಸಂಗ್ರಹಣೆಗೆ ಶಿಕ್ಷಕರಿಂದ ಬರುವ ಪ್ರತಿಕ್ರಿಯೆಗಳು ಯಾವುದೇ ಅಡೆತಡೆಯಿಲ್ಲದೆ ಸಹಜವಾಗಿ ಬರಬೇಕಾದರೆ ಸುರಕ್ಷಿತ ವಾತಾವರಣ ಹಾಗೂ ಸ್ಪಷ್ಟ ಸಂವಹನವನ್ನು ಸೃಷ್ಟಿಸುವುದು ಪೂರ್ವಾಪೇಕ್ಷಿತ ಸಂಗತಿ ಎಂಬುದು ವಿದಿತ. ಹೀಗೆ ಪಡೆದುಕೊಂಡ ದತ್ತಾಂಶವನ್ನು ಅರ್ಥಪೂರ್ಣ ತೀರ್ಮಾನಗಳನ್ನು ತೆಗೆದುಕೊಳ್ಳುವುದರ ಜೊತೆಗೆ ನಿರ್ಣಯ ತೆಗೆದುಕೊಳ್ಳಲು ಆಧಾರವನ್ನಾಗಿ ಬಳಸಿ-ಕೊಳ್ಳಬಹುದು. ಇದಕ್ಕೆ ನಿರ್ದಿಷ್ಟವಾಗಿ ಉಪಯುಕ್ತವಾದ ಸಾಧನವೆಂದರೆ ನಿರ್ವಹಣಾ ವಿಜ್ಞಾನದಿಂದ (management science) ಎರವಲು ತೆಗೆದುಕೊಂಡ ಪುನರಾವರ್ತಿತ ಪಿಡಿಸಿಎ (ಯೋಜಿಸುವುದು – ಮಾಡುವುದು – ಪರಿಶೀಲಿಸುವುದು – ಕಾರ್ಯಗತಗೊಳಿಸುವುದು / Plan-Do-Check-Act = PDCA) ಆವರ್ತ ಚಕ್ರ. ಈ ಆವರ್ತ ಚಕ್ರವು ಸಂಸ್ಥೆಗಳಿಗೆ ಗುಣಮಟ್ಟವನ್ನು ಕಾಪಾಡಿಕೊಳ್ಳುವುದರ ಜೊತೆಗೆ ಸತತವಾಗಿ ಸುಧಾರಣೆಗಳನ್ನು ತರಲು ಸಹಾಯ ಮಾಡುತ್ತದೆ. ಶಾಲಾ ಮುಖ್ಯಸ್ಥರು ಪುರಾವೆ ಆಧಾರಿತ ಕಾರ್ಯಯೋಜನೆಗಳಿಗೋಸ್ಕರ ವಿಶ್ವಾಸಾರ್ಹ ದತ್ತಾಂಶವನ್ನು ಒಟ್ಟುಗೂಡಿಸಲು, ತಮ್ಮ ಕ್ರಮಗಳಿಂದಾದ ಪರಿಣಾಮವೇನು ಎಂದು ಸತತವಾಗಿ ಪರಿಶೀಲಿಸಲು ಮತ್ತು ಅಂದುಕೊಂಡ ಫಲಿತಾಂಶಗಳು ಬರದೇ ಹೋದಾಗ ಯೋಜನೆಗಳನ್ನು ಸರಿಹೊಂದಿಸುವುದು ಇವನ್ನೆಲ್ಲ ಮಾಡಬಲ್ಲರು. ಇದು ಅವರಿಗೆ ಶಿಕ್ಷಕರ ಯೋಗಕ್ಷೇಮಕ್ಕೆ ಅಪಾಯ ತಂದೊಡ್ಡುವಂತಹ ಅಂಶಗಳನ್ನು ಗುರುತಿಸಲು ಮತ್ತು ಎಲ್ಲರ ಯೋಗಕ್ಷೇಮವನ್ನು ಕಾಪಾಡುವ ಒಂದು ಸಂತೋಷಭರಿತ ವೃತ್ತಿ ಸಂಸ್ಕೃತಿಯನ್ನು ಬಲಪಡಿಸಲು ಬೇಕಾಗುವಂತಹ ಮುಂಜಾಗ್ರತಾ ಕ್ರಮಗಳನ್ನು ತೆಗೆದು-ಕೊಳ್ಳಲು ಸಹ ಸಹಾಯ ಮಾಡುತ್ತದೆ.




**ಚಿತ್ರ 4. ಸಂತೋಷಭರಿತ ಕೆಲಸದ ಸಂಸ್ಕೃತಿಯನ್ನು ಸ್ಥಿರಗೊಳಿಸುವುದು**

**ಅಡಿಟಿಪ್ಪಣಿ**

i A triangular curriculum structure consisting of Subject Matter, Self-learning and Social Learning.

**ಪರಾಮರ್ಶನ**


Acton, R., & Glasgow, P. (2015). Teacher Wellbeing in Neoliberal Contexts: A Review of the Literature. *Australian Journal of Teacher Education*, 40(8). http://dx.doi.org/10.14221/ajte.2015v40n8.6

Collie, R. J., Martin, A. J., & Frydenberg, E. (2017). Social and Emotional Learning: A Brief Overview and Issues Relevant to Australia and the Asia-Pacific. *Social and Emotional Learning in Australia and the Asia-Pacific*, 1–13. https://doi.org/10.1007/978-981-10-3394-0_1

Collie, R. J., Shapka, J. D., Perry, N. E., & Martin, A. J. (2015). Teacher well-being: Exploring its components and a practice-oriented scale. Journal of Psychoeducational Assessment, 33(8), 744–756. Retrieved from https://journals.sagepub.com/doi/full/10.1177/0734282915587990.

How to grow teacher wellbeing in your schools - Google Search. (n.d.). *In how to grow teacher wellbeing in your schools - Google Search*. https://www.google.com/search?q=how+to+grow+teacher+wellbeing+in+your+schools&rlz=1C1SQJL_enIN987IN987&oq=Grow+teacher+wellbeing+&aqs=chrome.1.69i57j0i22i30i625j0i390l5.7622j1j7&sourceid=chrome&ie=UTF-8

Jennings, P. A. (2011). Promoting teachers' social and emotional competencies to support performance and reduce burnout. In A. Cohen & A. Honigsfeld (Eds.), Breaking the mold of pre-service and in-service teacher education: Innovative and successful practices for the 21st century (pp. 133–143). Lanham, MD: Rowman & Littlefield.



**ಜ್ವೈರಿಯ ಸಲೀಂ** ಅವರು ಬೆಂಗಳೂರಿನ ಅಜೀಂ ಪ್ರೇಮ್ಜಿ ವಿಶ್ವವಿದ್ಯಾಲಯದ ಮುಂದುವರಿದ ಶಿಕ್ಷಣ ವಿಭಾಗದಲ್ಲಿ (School of Continuing Education) ಸಹಾಯಕ ಪ್ರಾಧ್ಯಾಪಕರಾಗಿದ್ದಾರೆ. ೨೦೦೯ರಿಂದ ಅವರು ಶಾಲಾ ಗುಣಮಟ್ಟ ಪರಿಶೀಲಕರಾಗಿದ್ದು, ISO 21001-2018 ಪ್ರಮಾಣೀಕೃತ ಶಾಲಾ ಲೆಕ್ಕ ಪರಿಶೋಧಕರಾಗಿ ಕೂಡ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರು ಭಾರತ ಹಾಗೂ ಮಧ್ಯಪ್ರಾಚ್ಯ ದೇಶಗಳಲ್ಲಿನ ಶಾಲೆಗಳಲ್ಲಿ ಉತ್ತಮ ಕಲಿಕೆ ಹಾಗೂ ಉತ್ತಮ ಕಲಿಕಾರ್ಥಿಗಳಿಗೋಸ್ಕರ ಶಾಲಾ ಸಂಸ್ಕೃತಿಯನ್ನು ಸುಧಾರಿಸುವ ನಿಟ್ಟಿನಲ್ಲಿ ವ್ಯಾಪಕವಾದ ಕೆಲಸ ಮಾಡಿದ್ದಾರೆ. ಇವರು ಶಿಕ್ಷಣ ವಿಭಾಗದಲ್ಲಿ ಶಿಕ್ಷಕರು ಮತ್ತು ಇತರ ಸಿಬ್ಬಂದಿಗಳ ತೀವ್ರತರ ತರಬೇತಿ ಹಾಗೂ ಮಾರ್ಗದರ್ಶನದ ಮೂಲಕ ಶಿಕ್ಷಣದಲ್ಲಿ ವ್ಯವಸ್ಥಿತ ಮಾರ್ಪಾಡು ತರುವ ಬಗ್ಗೆ ತೀವ್ರ ಆಶಯವನ್ನು ಹೊಂದಿದ್ದು, ಅದಕ್ಕೆ ಬದ್ಧರಾಗಿದ್ದಾರೆ. ಅವರನ್ನು jwairia.saleem@apu.edu.in ಮೂಲಕ ಸಂಪರ್ಕಿಸಬಹುದು?

ಅನುವಾದ: **ಸ್ವಯಂಪ್ರಭಾ ಹೆಗಡೆ** | ಪರಿಶೀಲನೆ: **ನಾಗಮಣಿ ಎಸ್. ಎನ್.**

ಅಂಗವೈಕಲ್ಯ ಹೊಂದಿರುವ ಮಗುವಿನ ಆರೈಕೆಯ ಅತ್ಯಂತ ನಿರ್ಣಾಯಕ ಭಾಗವೆಂದರೆ ಆರಂಭಿಕ ಹಂತದಲ್ಲಿಯೇ ಅದನ್ನು ಗುರುತಿಸುವುದು ಮತ್ತು ಅದನ್ನು ಸರಿಪಡಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗುವುದು. ಆರಂಭಿಕ ವರ್ಷಗಳಲ್ಲಿ ಬೆಳವಣಿಗೆಯ ವಿಳಂಬಗಳನ್ನು ಪೋಷಕರು ಮತ್ತು ಶಿಕ್ಷಕರು ಗಮನಿಸಬೇಕು. ಯಾವುದೇ ಬೆಳವಣಿಗೆಯ ಮೈಲಿಗಲ್ಲು ತಪ್ಪಿಹೋದರೆ ಅಥವಾ ವಿಳಂಬವಾದರೆ ಮೊದಲು, ಮಕ್ಕಳ ವೈದ್ಯರನ್ನು ಸಂಪರ್ಕಿಸಬೇಕು ಮತ್ತು ಅವರ ಸಲಹೆಯ ಮೇರೆಗೆ ಮಗುವನ್ನು ಅದರ ಅಗತ್ಯತೆಗಳನ್ನು ಪೂರೈಸುವ ಸಂಸ್ಥೆ ಮತ್ತು ಶಾಲೆಗೆ ದಾಖಲಿಸಬೇಕು. ಅಂತಹ ಸ್ಥಳದಲ್ಲಿ, ಸಲಹೆಗಾರರು ಮತ್ತು ಮನಶಾಸ್ತ್ರಜ್ಞರು ಮಗು ಎದುರಿಸುತ್ತಿರುವ ತೊಂದರೆಯನ್ನು ಅರ್ಥಮಾಡಿಕೊಳ್ಳಲು ರೋಗನಿರ್ಣಯ ಪರೀಕ್ಷೆಗಳಂತಹ ವಿಧಾನಗಳನ್ನು ಬಳಸುತ್ತಾರೆ ಮತ್ತು ಅಗತ್ಯವಿರುವ ಮಧ್ಯಪ್ರವೇಶಕ್ಕೆ ಯೋಜನೆಯನ್ನು ರೂಪಿಸುತ್ತಾರೆ. ತಮ್ಮ ಮಗು ವಿಶೇಷಚೇತನ ಎಂಬುದಕ್ಕಾಗಿ ಅದನ್ನು ಅತಿಯಾಗಿ ರಕ್ಷಿಸುವ ಅಥವಾ ಮಗುವಿನ ವಿಕಲತೆಯನ್ನು ನಿರಾಕರಿಸುವ ಮನೋಭಾವವುಳ್ಳ ಆರೈಕೆದಾರರು ಮಗುವಿಗೆ ಸೂಕ್ತವಾದ ಚಿಕಿತ್ಸೆ ಮತ್ತು ಬೆಂಬಲವನ್ನು ಪಡೆಯುವ ಪ್ರಕ್ರಿಯೆಯನ್ನು ತಡೆಯುತ್ತಾರೆ. ಹಾಗಾದಾಗ ವಿಶೇಷ ಚೇತನರು ತಮ್ಮ ಜೀವನದ ಮೇಲೆ ಸ್ವಾತಂತ್ರ್ಯ ಮತ್ತು ನಿಯಂತ್ರಣವನ್ನು ಪಡೆದುಕೊಳ್ಳುವ ಅವಕಾಶದಿಂದ ವಂಚಿತರಾಗುತ್ತಾರೆ.

# ಬಾಲ್ಯದ ಗಾಯಗಳು ಮತ್ತು ಶೈಕ್ಷಣಿಕ ರಂಗದಲ್ಲಿ ಅದರ ಉಪಶಮನ

ಶಿವಾನಿ ತನೇಜಾ ಮತ್ತು ಸವಿತಾ ಸೋಹಿತ್

ಗುಣಮಟ್ಟದ ಔಪಚಾರಿಕ ಶಿಕ್ಷಣದ ಬಗ್ಗೆ ಪ್ರಮುಖವಾದ ಚರ್ಚೆ ನಡೆದಾಗಲೆಲ್ಲ ಅದು ಬೋಧನಾ ವಿಧಾನ, ವಿಷಯ, ಭಾಷೆ ಮತ್ತು ಶೈಕ್ಷಣಿಕ ವಿಷಯಗಳ ಸುತ್ತ ಸುತ್ತುತ್ತಿರುತ್ತದೆ. ಆದರೆ, ಎಲ್ಲ ಹಿನ್ನೆಲೆಗಳಿಂದ ಬಂದ ಹೆಚ್ಚುಹೆಚ್ಚು ಮಕ್ಕಳು ನಮ್ಮ ಶಾಲಾ ಶಿಕ್ಷಣ ರಂಗವನ್ನು ಪ್ರವೇಶಿಸುತ್ತಿದ್ದ ಹಾಗೆ ಇವೆಲ್ಲ ವಿಷಯಗಳ ಜೊತೆಗೇ ಮಕ್ಕಳ ಬದುಕಿನ ಬಗ್ಗೆ ಇನ್ನಷ್ಟು ಪರಿಶೀಲನೆ ನಡೆಸಲು ಸಹಕಾರಿಯಾಗುತ್ತದೆ ಮತ್ತು ಅವರ ಯೋಗಕ್ಷೇಮದಂತಹ ವಿಷಯಗಳ ಬಗ್ಗೆಯೂ ಯೋಚಿಸಲು ಸಾಧ್ಯವಾಗುತ್ತದೆ.

ದುರ್ಬಲ ವರ್ಗದ ಹಿನ್ನೆಲೆಯಿಂದ ಬಂದ ಮಕ್ಕಳಿಗಾಗಿ ನಡೆಸುತ್ತಿರುವ ಮುಸ್ಕಾನ್[i] ಹೆಸರಿನ ನಮ್ಮ ಶಾಲೆಯ ಕೆಲವು ಅನುಭವಗಳನ್ನು ನಾವಿಲ್ಲಿ ಹಂಚಿಕೊಳ್ಳುತ್ತಿದ್ದೇವೆ. ನಮ್ಮ ಎಲ್ಲ ಮಕ್ಕಳು ನಗರದ ಬಡತನದ ವ್ಯಾಪ್ತಿಯೊಳಗೆ ಬರುವವರು ಮತ್ತು ಅವರೆಲ್ಲರೂ ತಮ್ಮ ಬಾಲ್ಯದ ದಿನಗಳಿಂದಲೇ ಗಳಿಕೆಗಾಗಿ ದುಡಿಯಲು ಆರಂಭಿಸಿದವರು. ಇವರಲ್ಲಿ ಬಹುತೇಕ ಮಕ್ಕಳು ಭೋಪಾಲ ನಗರ ಮತ್ತು ಸುತ್ತಮುತ್ತ ವಾಸಿಸುವ ಅಧಿಸೂಚಿತ ಬುಡಕಟ್ಟು ಸಮುದಾಯ (Denotified tribal-DNT)[ii] ಗಳಿಗೆ ಸೇರಿದವರಾಗಿದ್ದಾರೆ.

## ಬಾಲ್ಯದ ವಾಸ್ತವಗಳು

ನಮ್ಮ ಶಾಲೆಗೆ ಬಂದಾಗ ಸೋಹಿನಿಗೆ ಸುಮಾರು ಹನ್ನೊಂದು ವರ್ಷ ವಯಸ್ಸಾಗಿತ್ತು. ತನ್ನ ಕುಟುಂಬವನ್ನೇ ತೊರೆದು ಹೋದ ತಾಯಿಯ ಬಗ್ಗೆ ಆಕೆಗೆ ಸಿಟ್ಟಿತ್ತು ಮತ್ತು ಯಾವತ್ತಿಗೂ ಆಕೆಯ ಜೊತೆ ಮಾತನಾಡುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ್ದಳು. ಮನೆಯನ್ನು ರಿಪೇರಿ ಕೂಡ ಮಾಡದೇ ದಿನವೂ ಮದ್ಯ ಸೇವನೆ ಮಾಡುತ್ತಿರುವ ಅಪ್ಪನ ಬಗ್ಗೆಯೂ ಆಕೆ ಸಿಟ್ಟಿನಿಂದ ಮಾತನಾಡುತ್ತಿದ್ದಳು. ತನ್ನ ಅಕ್ಕ ಅತ್ಯಂತ ಚಿಕ್ಕ ವಯಸ್ಸಿನಲ್ಲಿಯೇ ಮದುವೆಯಾದಾಗಲಂತೂ ಸೋಹಿನಿ ಇನ್ನಷ್ಟು ಕುಸಿದು ಹೋಗಿದ್ದಳು. ಆಕೆ ತುಂಬಾ ಬುದ್ಧಿವಂತೆ. ಶೈಕ್ಷಣಿಕವಾಗಿ ಆಕೆಯ ನಿರ್ವಹಣೆ ಉತ್ತಮವಾಗಿತ್ತು. ಆದರೆ ಸಾಮಾಜಿಕ ಸಂಬಂಧಗಳು (social relationships) ಕಳಪೆಯಾಗಿತ್ತು. ಅವಳ ಮನಸ್ಸಿಗೇನಾದರೂ ಬೇಸರವಾದರೆ ಅವಳನ್ನು ಸಮಾಧಾನಪಡಿಸುವುದೇ ಅಸಾಧ್ಯದ ಮಾತಾಗಿತ್ತು.

ಅಮರ್ ಒಂದು ವರ್ಷದಿಂದ ಹಾಸ್ಟೆಲ್‌ನಲ್ಲಿ ಆಶ್ರಯ ಪಡೆದಿದ್ದನು. ಅಲ್ಲಿ ವಾರ್ಡನ್ ಹುಡುಗರ ಅಶ್ಲೀಲ, ಕಾಮಪ್ರಚೋದಕ ವಿಡಿಯೋಗಳನ್ನು ಚಿತ್ರೀಕರಿಸುತ್ತಿದ್ದ. ಒಂದು ದಿನ ಅಮರ್ ಹಾಸ್ಟೆಲ್‌ನಿಂದ ತಪ್ಪಿಸಿಕೊಂಡು ಓಡಿ ಬಂದ. ದಿನಗೂಲಿ ಕಾರ್ಮಿಕರಾದ ಅಮರ್ ನ ಪಾಲಕರು ಆತನನ್ನು ನಮ್ಮ ಶಾಲೆಗೆ ಸೇರಿಸಿದರು. ಇಲ್ಲಿ ಆತ ಇತರ ಮಕ್ಕಳೊಂದಿಗೆ ಜಗಳಕ್ಕೆ ಇಳಿಯುತ್ತಿದ್ದ. ಶಿಕ್ಷಕರು ಮಧ್ಯಪ್ರವೇಶ ಮಾಡಿದರೆ ಅವರಿಗೂ ಹೊಡೆಯುತ್ತಿದ್ದ.

ರೋಹಿತ್‌ನ ಕತೆ ಇನ್ನೂ ಭಿನ್ನವಾದುದು. ಆತನ ಅಮ್ಮ ಚಿಂದಿ ಆಯಲು ಹೊರಗೆ ಹೋದಾಗ ಅಪ್ಪ ಮಕ್ಕಳನ್ನು ನೋಡಿ–ಕೊಳ್ಳುತ್ತಿದ್ದ. ಆದರೆ ತೀರಾ ಮದ್ಯ ವ್ಯಸನಿಯಾಗಿದ್ದ. ಕೊನೆಗೊಂದು ದಿನ ಕುಡಿತದ ಚಟದಿಂದಲೇ ಮೃತಪಟ್ಟ. ಇದರಿಂದಾಗಿ ಒಂದರಿಂದ ಹತ್ತು ವರ್ಷ ವಯಸ್ಸಿನ ನಾಲ್ಕು ಮಂದಿ ಮಕ್ಕಳು ಅನಾಥರಾಗಿಬಿಟ್ಟರು. ರೋಹಿತ್‌ನ ಇಬ್ಬರು ಸಹೋದರಿಯರೂ ಆತ್ಮಹತ್ಯೆ ಮಾಡಿಕೊಂಡರು. ಆತನ ಚಿಕ್ಕ ವಯಸ್ಸಿನ ತಾಯಿ ತನ್ನ ಗಂಡನ ಮನೆಯವರ ಕಿರುಕುಳಕ್ಕೆ ಒಳಗಾದಳು. ರೋಹಿತ್ ಸರಿಯಾಗಿ ಮನೆಯಲ್ಲಿ ನಿದ್ದೆ ಮಾಡುತ್ತಿರಲಿಲ್ಲ, ಇದಕ್ಕಾಗಿ ಅವನು ತನ್ನ ಚಿಕ್ಕಪ್ಪನಿಂದ ಒದೆ ತಿನ್ನುತ್ತಿದ್ದನು. ಆತ ಶಾಲೆಯಲ್ಲಿ ಇದ್ದಾಗ ತನ್ನ ತಮ್ಮಂದಿರಿಗೂ ಪದೇಪದೇ ಹೊಡೆಯುತ್ತಿದ್ದನು.

## ಸಾಮಾಜಿಕವಾಗಿ ದುರ್ಬಲವಾದ ಗುಂಪುಗಳ ಯಾತನೆ

ಈ ಮಕ್ಕಳ ಜೀವನದ ಚಿತ್ರಗಳ ಬಗ್ಗೆ ಓದುತ್ತಿದ್ದರೆ ಇವರು ಉಳಿದವರಿಗಿಂತ ಹೆಚ್ಚು ಕಷ್ಟದ ಪರಿಸ್ಥಿತಿಯಿಂದ ಬಂದವರು ಅನಿಸುತ್ತದೆ. ಆದರೆ ಸತ್ಯದ ಸಂಗತಿ ಏನೆಂದರೆ ನಮ್ಮ ನಗರ ಪ್ರದೇಶದ ಬಹುಪಾಲು ಬಡವರು, ಅಧಿಸೂಚಿತ ಬುಡಕಟ್ಟುಗುಂಪು, ದಲಿತರು ಮತ್ತು ಆದಿವಾಸಿಗಳು ಅನೇಕ ತಲೆಮಾರುಗಳಿಂದ ಶೋಷಣೆ ಮತ್ತು ತಾರತಮ್ಯಕ್ಕೆ ಒಳಗಾಗುತ್ತ ಬಂದಿದ್ದಾರೆ. ಇದು ಅವರ ಮೇಲೆ ಮಾನಸಿಕವಾಗಿ ಮತ್ತು ವಾಸ್ತವ ಬದುಕಿನಲ್ಲಿ ಆಳವಾದ ಪರಿಣಾಮ ಬೀರಿದೆ. ಗ್ರಾಹಕೀಕರಣ (Consumerism), ಭೂ ಸ್ಥಳಾಂತರ, ಬಲವಂತದ ತೆರವು, ನಗರದ ಕಡು ಬಡತನ, ನಿರುದ್ಯೋಗ, ಹಿಂಸಾಚಾರ ಮತ್ತು ನಿಂದನೆ ದುರ್ಬಲ ವರ್ಗಗಳ ಮೇಲೆ ಹಿಂದೆಂದಿಗಿಂತಲೂ ಹೆಚ್ಚಿನ ಪರಿಣಾಮವನ್ನು ಬೀರಿದೆ. ಇದರಿಂದಾಗಿ ಅಧಿಕ ಮಂದಿ ಮಕ್ಕಳು ಯಾತನೆಗೆ ಒಳಗಾಗಿದ್ದಾರೆ. ಅದು ನಮ್ಮ ಊಹೆಗೂ ನಿಲುಕದಂತೆ ಅವರ ಜೀವನವನ್ನು ಜರ್ಝರಿತಗೊಳಿಸಿದೆ ಎಂಬುದು ಸತ್ಯ.

ಪರಂಪರೆ (ಮೆಥೋಟ್ - 2019)[iii] ಎಂದರೆ ವಸಾಹತೀಕರಣದ ಕಾರಣದಿಂದ ಅಮೆರಿಕದ ಸ್ಥಳೀಯ ಜನರ ಮೇಲೆ ಉಂಟಾದ ಸುದೀರ್ಘಾವಧಿ ಪರಿಣಾಮದ ಪುರಾವೆ. ಮೆಥೋಟ್ ಅವರು ತಲೆಮಾರುಗಳ ನಡುವಿನ ಯಾತನೆಯ (intergenerational

trauma) ಬಗ್ಗೆ ಮಾತನಾಡುತ್ತ ವಸಾಹತೀಕರಣ ಮತ್ತು ವಸತಿ ಶಾಲೆಗಳು ಜನರ ಮೇಲೆ ಹೇಗೆ ತಮ್ಮ ಮುದ್ರೆಗಳನ್ನು ಒತ್ತಿದವು ಎಂಬುದನ್ನು ವಿಶ್ಲೇಷಿಸುತ್ತಾರೆ. ಈ ಯಾತನೆಯ ಅವಧಿಯಲ್ಲಿ ಬದುಕಿರದೇ ಇದ್ದವರು ಕೂಡ ಹೇಗೆ ಇದರ ಪರಿಣಾಮಕ್ಕೆ ಒಳಗಾದರು ಎಂಬುದನ್ನು ಅವರು ತಿಳಿಸುತ್ತಾರೆ. ಇದೇ ರೀತಿ ಡಾ.ಕೋಲ್ಕ್[iv] ಅವರು ಬಾಲ್ಯದ ಪ್ರತಿಕೂಲ ಅನುಭವಗಳು ಮತ್ತು ತಾರುಣ್ಯದ ಮೇಲೆ ಅದರ ಸುದೀರ್ಘಾವಧಿ ಪರಿಣಾಮಗಳ ಬಗ್ಗೆ ಬರೆಯುತ್ತಾರೆ. 'ಈ ಯಾತನಾಮಯ ಅನುಭವಗಳು ಬದುಕಿನ ಮೊದಲ ದಶಕದ ಅವಧಿಯಲ್ಲಿ ಅನುಭವಿಸಿದರೆ ಅದು ವ್ಯಾಪಕವಾದ ಪರಿಣಾಮ ಬೀರುತ್ತದೆ' (ಸಾವು ಅಥವಾ ಹಿಂಸಾಚಾರ ಅಥವಾ ಪ್ರಾಣಾಪಾಯದ ಪರಿಸ್ಥಿತಿಯಂತಹ ಒಂದೇ ಘಟನೆಗೆ ಬದಲಾಗಿ). ಯಾಕೆಂದರೆ ಇದು ಮಗುವಿನ ಜಗತ್ತಿನ ಒಟ್ಟಾರೆ ಚೌಕಟ್ಟಿನ ಮೇಲೆ ಪರಿಣಾಮವನ್ನು ಬೀರಲಿದೆ.

ದೇಶೀಯ ಸಮುದಾಯಗಳು ಮತ್ತು ಕಪ್ಪು ವರ್ಣೀಯರ ಗುಂಪುಗಳ ಸುತ್ತಲಿನ ಸಂಶೋಧನೆ ಮತ್ತು ಲೇಖನಗಳು ನಮಗೆ ಮಕ್ಕಳ ಮಾನಸಿಕ ಸ್ಥಿತಿಯ ಬಗ್ಗೆ ಹೊಸ ಒಳನೋಟಗಳನ್ನು ನೀಡುತ್ತದೆ. ಇಲ್ಲಿಯ ತನಕ ಈ ಮಕ್ಕಳ ಹಕ್ಕಿನ ಜಗತ್ತನ್ನು ಕೇವಲ 'ಕಷ್ಟದಾಯಕ' ಎಂದು ಮಾತ್ರ ಉಲ್ಲೇಖಿಸಲಾಗಿದೆ ಮತ್ತು ಅವರ ಪಾಲಕರ ಪರವಾಗಿ 'ಬಡತನ, ಅನಕ್ಷರತೆ, ನಿರ್ಲಕ್ಷ್ಯ ಮತ್ತು ಕಾಳಜಿಯ ಕೊರತೆ'ಯ ಹೆಸರಿನಲ್ಲಿ ಋಣಾತ್ಮಕವಾಗಿ ಚಿತ್ರಿಸಲಾಗಿದೆ. 2013ರಲ್ಲಿ ಛತ್ತೀಸ್‌ಗಢದ 200 ಶಾಲೆಗಳಲ್ಲಿ ನಡೆಸಿದ ಅಧ್ಯಯನದ ಪ್ರಕಾರ ಮಕ್ಕಳ ಶೈಕ್ಷಣಿಕ ಸಾಮರ್ಥ್ಯದ ಬಗ್ಗೆ ಶೇ.40ರಷ್ಟು ಶಿಕ್ಷಕರಿಗೆ ಋಣಾತ್ಮಕ ಅಭಿಪ್ರಾಯ ಮತ್ತು ಕೇವಲ ಶೇ.13ರಷ್ಟು ಶಿಕ್ಷಕರಿಗೆ ಧನಾತ್ಮಕ ಅಭಿಪ್ರಾಯವಿರುವುದು ಕಂಡುಬಂದಿದೆ.

ಈ ಮಕ್ಕಳು ನಮ್ಮ ಶಾಲಾ ವಲಯವನ್ನು ಪ್ರವೇಶ ಮಾಡಿದಾಗ ನಾವು ಅವರನ್ನು 'ಆಘಾತದ ಹಿನ್ನೆಲೆಯ ದೃಷ್ಟಿಯಿಂದ' ನೋಡುವ ಅಗತ್ಯವಿತ್ತು ಮತ್ತು ದೂರುವ ಪ್ರವೃತ್ತಿಯನ್ನು ಅಳವಡಿಸಿಕೊಳ್ಳುವ ಅಗತ್ಯವಿರಲಿಲ್ಲ ಅಥವಾ ಅವರ ಅನೇಕ ಅಗತ್ಯಗಳನ್ನು 'ನಾಗರಿಕ'ಗೊಳಿಸುವ ವಸಾಹತು ಮನಸ್ಥಿತಿಯಿಂದ ನೋಡಬೇಕಾಗಿಯೂ ಇಲ್ಲ. ನಾವು ಅವರ ಬಾಲ್ಯದ ಜೀವನವನ್ನು ಗಮನಿಸಿದಾಗ ಮಕ್ಕಳು ಹುಟ್ಟಿನಿಂದಲೇ (ಅಥವಾ ಹುಟ್ಟಿಗೂ ಮೊದಲು) ಪಟ್ಟ ಶ್ರಮವನ್ನು ನೋಡಬೇಕಾಗುತ್ತದೆ. ಮೂಲಭೂತ ಅಗತ್ಯಗಳನ್ನು ಕೇವಲ ಆಹಾರ ಮತ್ತು ಆಶ್ರಯಕ್ಕೆ ಮಾತ್ರ ಸೀಮಿತಗೊಳಿಸಲು ಸಾಧ್ಯವಿಲ್ಲ. ಬದಲಾಗಿ ಪ್ರೀತಿ ಮತ್ತು ಗೌರವವನ್ನೂ ನೀಡಬೇಕಾಗುತ್ತದೆ. ಇಷ್ಟು ಮಾತ್ರವಲ್ಲದೆ ನಿಂದನೆ, ದುಡುಕುತನ ಮತ್ತು ಆತ್ಮಹತ್ಯೆ ಪ್ರಯತ್ನಗಳನ್ನೂ ನಿಭಾಯಿಸಬೇಕು. ಮಕ್ಕಳು ಬೆಳವಣಿಗೆ ಹೊಂದುತ್ತ ಹೋದ ಹಾಗೆ ಅವರ ಪಾಲಕರು ಜಗತ್ತಿನೊಂದಿಗೆ ವ್ಯವಹರಿಸುವ ರೀತಿಯಲ್ಲಿಯೇ ಮಕ್ಕಳು ಕೂಡ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಈ ವಾಸ್ತವಗಳಿಗೆ ಮುಖಾಮುಖಿಯಾಗುತ್ತಾ ಹೋಗುತ್ತಾರೆ. ನಮ್ಮ ದೇಶದಲ್ಲಿ ದಲಿತರು, ಅಧಿಸೂಚಿತ ಬುಡಕಟ್ಟು ಮಂದಿ ಅಥವಾ ಆದಿವಾಸಿಗಳ ಪಾಲಿಗೆ ತಾರತಮ್ಯ, ನಿಂದನೆ ಮತ್ತು ಜಗತ್ತಿನಿಂದ ಬೇರ್ಪಡಿಸುವ ಕ್ರಮಗಳು ರೂಢಿಯಾಗಿ ಹೋಗಿವೆ.

## ತಲೆಮಾರುಗಳ ನಡುವಿನ ಯಾತನೆ

ಈ ನಿರ್ಲಕ್ಷಕ್ಕೆ ಒಳಗಾದ ಬುಡಕಟ್ಟು ಜನಾಂಗದವರಿಗೆ ಕಳಂಕ ಹಚ್ಚುವ ಕೆಲಸ ವಸಾಹತು ಕಾಲದಿಂದಲೇ ಆರಂಭವಾಗಿತ್ತು. ಅವರನ್ನು 'ಠಕ್ಕರು' ಎಂದು ಕರೆಯಲಾಗುತ್ತಿತ್ತು. ಆದರೆ ದಲಿತ ಸಮುದಾಯಗಳಿಗೆ ಇದು ಹಿಂದೂ ವರ್ಣ ವ್ಯವಸ್ಥೆಯ ಶಾಪವಾಗಿದೆ. ಈ ಸಮುದಾಯಗಳು ಸಮಾಜದಲ್ಲಿ ಸಕಲ ಸವಲತ್ತುಗಳನ್ನು ಹೊಂದಿದ ವರ್ಗಗಳ ಜೊತೆ ಹೆಚ್ಚು ಹೆಚ್ಚು ತೆರೆದುಕೊಂಡಾಗ ಗದರಿಕೆ ಮತ್ತು ಪರಭಾರಿಕೆಯ ಒತ್ತಡಕ್ಕೆ (rebuke and alienation) ಅವರು ಒಳಗಾಗಿದ್ದಿದೆ. ಸುಧಾರಣೆಗಾಗಿ ಅಪರಾಧಿಕ ಬುಡಕಟ್ಟಿನಿಂದ (criminal tribes) ಮಕ್ಕಳನ್ನು ಪ್ರತ್ಯೇಕಗೊಳಿಸಲು 1871ರ ಕ್ರಿಮಿನಲ್ ಟ್ರೈಬ್ಸ್ ಕಾಯ್ದೆಯು (Criminal Tribes Act of 1871) ಸರ್ಕಾರಕ್ಕೆ ಅವಕಾಶವನ್ನು ನೀಡಿದೆ. ನಮ್ಮ ದೇಶದಲ್ಲಿ ಅಂತಹ ದುರ್ಬಲ ವರ್ಗದ ಕುಟುಂಬಗಳಿಂದ ಬಂದ ಹೆಚ್ಚು ಹೆಚ್ಚು ಮಕ್ಕಳು ಸುರಕ್ಷತಾ ವ್ಯವಸ್ಥೆಯ ಭಾಗವಾಗಿದ್ದಾರೆ. ಅನಾದಿಕಾಲದಿಂದಲೂ ಈ ಸಾಮಾಜಿಕ ಗುಂಪುಗಳಿಗೆ ಇದ್ದ ಪರಭಾರಿಕೆ ಮತ್ತು ಸಂಸ್ಥೆಗಳಿಂದ ಹೊರಗಿಡುವ ಪರಿಸ್ಥಿತಿಯನ್ನು ಸ್ವಾತಂತ್ರ್ಯಾನಂತರದ ಭಾರತದಲ್ಲಿಯೂ ಸರಿಪಡಿಸಲಾಗಿಲ್ಲ. ಅದು ಒಂದು ಅಂಗಡಿ, ಶಾಲೆ, ಪೋಲೀಸ್ ಠಾಣೆ, ಆಸ್ಪತ್ರೆ ಅಥವಾ ಇನ್ಯಾವುದೇ ಸರ್ಕಾರಿ ಕಚೇರಿ ಇರಲಿ ಅವರೇನು ಮನುಷ್ಯರೇ ಅಲ್ಲ ಅನ್ನುವಂತೆ ಹೊರಗಿಡಲಾಗುತ್ತಿದೆ.

ಒಬ್ಬ ವ್ಯಕ್ತಿಯನ್ನು ನಿರಂತರವಾಗಿ ಕಡೆಗಣಿಸುತ್ತ ಹೋದರೆ ಆಕೆ / ಆತನ ಮನಸ್ಸಿನ ಮೇಲೆ ಯಾವ ರೀತಿ ಪರಿಣಾಮ ಬೀರುತ್ತದೆ ಎಂಬುದನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಲ್ಲ. ಇವೆಲ್ಲವೂ ಬದುಕಿನಲ್ಲಿ ನಿಯಂತ್ರಣವಿಲ್ಲದೇ ಇರುವುದರಿಂದ ಆಗುವಂತಹುದು. ಹಾಗಿದ್ದಾಗ ಯಾರಾದರೂ ನಿಮಗೆ ಕಿರುಕುಳ ನೀಡಬಹುದು, ಬಂಧಿಸಬಹುದು ಅಥವಾ ನಿಮ್ಮನ್ನು ಮನೆಯಿಂದ ಆಚೆಗೆ ಕಳುಹಿಸಬಹುದು. ಬಾಹ್ಯ ಮೂಲದಿಂದ ಬರುವ ಈ ದಬ್ಬಾಳಿಕೆ ಅತ್ಯಂತ ಶಕ್ತಿಯುತವಾಗಿರುತ್ತದೆ. ಇದಕ್ಕೆ ಪ್ರತಿಕ್ರಿಯೆ ನೀಡುವುದು ಕಷ್ಟ. ಈ ನಿಗ್ರಹಿಸುವಿಕೆ ಮುಂದೆ ಬೆಳೆದು, ನೀವು ಪ್ರೀತಿಸುವ ಜನರ ಪ್ರತ್ಯೇಕ ಗುಂಪು ರಚನೆಯಾಗಿ ಅವರು ಮಾತ್ರ ನಿಮಗೆ ದುರ್ಬಲರು ಎಂದು ಪರಿಗಣಿತವಾಗಬಹುದು.

ಸ್ಥಿತಿಸ್ಥಾಪಕತ್ವ ಎಂದರೆ ಚೇತರಿಕೆ ಎಂದೇನೂ ಅಲ್ಲ. ಸಮುದಾಯಗಳು ಹಾಗಲ್ಲ, ಅವುಗಳಿಗೆ ಸ್ಥಿತಿಸ್ಥಾಪಕತ್ವ ಗುಣವಿದೆ. ಮಕ್ಕಳಿಗೆ ಸುರಕ್ಷತೆಯನ್ನು ಒದಗಿಸಲು ಮತ್ತು ಅದನ್ನು ಬೆಂಬಲಿಸಲು ಸಾಕಷ್ಟು ಪ್ರಯತ್ನ ಮಾಡಲಾಗುತ್ತಿದೆ. ಪಾಲಕರು ಇಲ್ಲದೇ ಇದ್ದ ಮಗುವಿಗೆ ಇತರರು ಆಹಾರ ಒದಗಿಸುತ್ತಾರೆ, ಮಳೆ ಬಂದು ಮನೆಯಲ್ಲಿ ಸೋರಿಕೆಯಾದಾಗ ಆ ಮಗು ನೆರೆಯವರ ಮನೆಯಲ್ಲಿ ಮಲಗುತ್ತದೆ. ಹಾಗಂತ ಜನರ ಗಾಯ

ವಾಸಿಯಾಗಿದೆ ಎಂದೇನೂ ಅಲ್ಲ. ಅವರು ತಮ್ಮ ಗಾಯಗಳೊಂದಿಗೇ ಸಾಗಿ ಬಂದಿದ್ದಾರೆ. ಇದು ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆಯಾಗುತ್ತಲೇ ಬಂದಿದೆ. ತಲೆಮಾರುಗಳ ನಡುವಿನ ಈ ಗಾಯ ಮಾಯಲು ಪ್ರಜ್ಞಾಪೂರ್ವಕವಾದ ಪ್ರಯತ್ನಗಳು ನಡೆಯದೇ ಹೋದರೆ ಇದು ಮುಂದು–ವರಿಯುತ್ತಲೇ ಇರುತ್ತದೆ.

## ಗಾಯ ಮಾಯುವ ಕುರಿತ ಪರ್ಯಾಲೋಚನೆ

ಹೀಗೆ ಮಾಯುವ ಪ್ರಕ್ರಿಯೆಯನ್ನು ಆರಂಭಿಸುವುದಕ್ಕೆ ಮುನ್ನ ಪ್ರತಿಯೊಂದು ಮಗುವನ್ನು ಕೂಡ ಅದಕ್ಕಿರುವ ಅನನ್ಯತೆಯ ದೃಷ್ಟಿಯಿಂದ ನೋಡುವುದನ್ನು ಕಲಿಯಬೇಕು. ಬದಲಾಗಿ ಸಮಾಜವು ಅವರನ್ನು ಪ್ರತ್ಯೇಕಿಸಿದ ರೀತಿಯಲ್ಲಿ ಅಲ್ಲ. ಅವರ ಹಿನ್ನೆಲೆಯನ್ನು ಅರ್ಥ ಮಾಡಿಕೊಳ್ಳಲು ವಿಶಾಲ ಚಿತ್ರದ ಅಗತ್ಯವಿರುತ್ತದೆ. ಆದರೆ ನಮ್ಮ ತರಗತಿ ಕೊಠಡಿಗಳಲ್ಲಿ ಪ್ರತಿಯೊಂದು ಮಗುವಿನ ಹಂತದಲ್ಲಿಯೂ ಗಾಯ ಮಾಯುವ ಪ್ರಕ್ರಿಯೆ ನಡೆಯಬೇಕಾಗುತ್ತದೆ. ನಮ್ಮ ಮಕ್ಕಳ ಬೆಂಬಲಕ್ಕೆ ನಾವು ಹೇಗೆ ನಿಂತೆವು ಎಂಬುದನ್ನು ಕ್ರೋಡೀಕರಿಸಿ ಪ್ರಸ್ತುತಪಡಿಸಿದ್ದೇವೆ. ಹಾಗಂತ ಇಲ್ಲಿ ಪ್ರಸ್ತಾಪ ಮಾಡಿರುವ ಅಂಶಗಳೇ ಅಂತಿಮ ಅಂತೇನೂ ಅಲ್ಲ.

ನಮ್ಮನ್ನು ಪ್ರೀತಿಸುತ್ತಿದ್ದಾರೆಂಬ ಭಾವನೆ ಮಕ್ಕಳಿಗೆ ಬರಲಿ

ಮಕ್ಕಳಿಗೆ ತಾವೂ ಮುಖ್ಯ ಎಂದು ಅರಿವಾಗುವಂತೆ ಮಾಡಬೇಕು. ಜನ ಅವರೊಂದಿಗೆ ಮಾತನಾಡುತ್ತಿದ್ದಾಗ ಅವರ ಮಾತುಗಳನ್ನೂ ಆಲಿಸಬೇಕು ಮತ್ತು ಅವರಲ್ಲಿ ಭರವಸೆಯನ್ನು ತುಂಬಬೇಕು. ಯಾರೋ ನಮ್ಮ ಬಗ್ಗೆ ಕಾಳಜಿ ವಹಿಸುತ್ತಿದ್ದಾರೆ ಎಂಬ ಸುರಕ್ಷತೆಯ ಭಾವನೆ ಅವರಲ್ಲಿ ಮೂಡಬೇಕು. ಇದರಿಂದ ಅವರನ್ನು ತರಗತಿಯಲ್ಲಿ, ಕಾರಿಡಾರ್‌ನಲ್ಲಿ ಅಥವಾ ಇನ್ನಿತರ ಯಾವುದೇ ಸ್ಥಳದಲ್ಲಿ ಮುಕ್ತವಾಗಿ ಭೇಟಿ ಮಾಡಲು ಸಾಧ್ಯವಾಗುತ್ತದೆ. ನಿಮ್ಮ ಊಟ ಮುಗಿಯಿತೇ ಅಥವಾ ನಿಮಗೆ ಶೀತವಾಗಿದೆಯೇ ಎಂಬ ಸಣ್ಣಪುಟ್ಟ ವಿಚಾರಣೆ ಮಾಡುವುದೇ ಮಕ್ಕಳ ಪಾಲಿಗೆ ದೊಡ್ಡ ಸಾಂತ್ವನವಾಗಿರುತ್ತದೆ. ಇಲ್ಲದೇ ಹೋದರೆ ಅವರಿಗೆ ತಮ್ಮ ಕುಟುಂಬದಿಂದ ಇಂತಹ ಕಾಳಜಿಯ ಮಾತುಗಳು ಸಿಗುವುದಿಲ್ಲ. ಅವರ ಕುಟುಂಬ ಸಾಮಾನ್ಯವಾಗಿ ದಿನನಿತ್ಯದ ಅಗತ್ಯಗಳನ್ನು ಪೂರೈಸುವುದರಲ್ಲಿಯೇ ಮುಳುಗಿರುತ್ತದೆ.

ನೋವಿನ ಭಾವನೆ ದೊಡ್ಡದಲ್ಲ

ಅನೇಕ ಸಂಗತಿಗಳನ್ನು ನಿಭಾಯಿಸುವ ಸಂದರ್ಭದಲ್ಲಿ ನಾವು ನಮ್ಮ ಭಾವನೆಗಳನ್ನು ಕೂಡ ನಿಯಂತ್ರಿಸಬೇಕಾಗುತ್ತದೆ. ಹಾಗಂತ ನಾವು ಭಾವನೆಗಳನ್ನು ವ್ಯಕ್ತಪಡಿಸಲೇಬಾರದು ಎಂದೇನೂ ಅಲ್ಲ. ಆದರೆ ಭಾವನೆಗಳನ್ನು ನಿರ್ಲಕ್ಷಿಸುವುದರಿಂದ ಮತ್ತು ಅವುಗಳನ್ನು ತಡೆಹಿಡಿಯವುದರಿಂದ ನಾವು ಅವರಿಗೆ ಪ್ರತಿಕ್ರಿಯಿಸುವುದನ್ನು ತಡೆದಂತಾಗುತ್ತದೆ. ಹಾಗಾಗಿ ಋಣಾತ್ಮಕ ಭಾವನೆಗಳು ಬಂದಾಗ ಅವು ತೀವ್ರ ಸ್ವರೂಪ ಪಡೆದುಕೊಳ್ಳದಂತೆ ನಿಗಾ ವಹಿಸಬೇಕು. ಆ ಪ್ರತಿಕ್ರಿಯೆಯನ್ನು ಇನ್ನೊಂದು ಬಾರಿ ವ್ಯಕ್ತಪಡಿಸಲು ಸಾಧ್ಯವಿರುತ್ತದೆ. ಉದಾಹರಣೆಗೆ ಶಾಲೆಯಲ್ಲಿ ಕೆಲವೊಮ್ಮೆ ಮೈ ಕೈ ತಾಕಿತು ಎಂಬಂತಹ ಕ್ಷುಲ್ಲಕ ವಿಚಾರಗಳಿಗೆ ಜಗಳ ನಡೆಯಬಹುದು. ಕೆಲವು ಮಕ್ಕಳು ಇಂತಹ ಪರಿಸ್ಥಿತಿಗಳನ್ನು ಸುರಕ್ಷಿತ ಮತ್ತು ನಂಬಿಕೆಗೆ ಅರ್ಹವಾದ ವಾತಾವರಣದಲ್ಲಿ ಪರಿಹರಿಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಆದರೆ ಕೆಲವು ಮಕ್ಕಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಬಲಪ್ರಯೋಗಕ್ಕೆ ಇಳಿಯುವ ಸಾಧ್ಯತೆ ಅಧಿಕವಾಗಿರುತ್ತದೆ. ಮಕ್ಕಳು ಬೆಳವಣಿಗೆ ಹೊಂದುತ್ತಲೇ ಅಥವಾ ಒಂದು ಅನುಭವದ ಬಳಿಕ ತಮ್ಮನ್ನು ಪ್ರಚೋದಿಸಲಾಗುತ್ತಿದೆ ಎಂಬುದನ್ನು ಗುರುತಿಸಲು ಸಮರ್ಥರಾಗುತ್ತಾರೆ. ಒಂದು ಸುರಕ್ಷಿತ ವಾತಾವರಣವನ್ನು ಸೃಷ್ಟಿ ಮಾಡಿದಾಗ ಹೆಚ್ಚಿನ ಮಕ್ಕಳು ತಮ್ಮ ಭಾವನೆಗಳನ್ನು ವ್ಯಕ್ತಪಡಿಸುವಲ್ಲಿ ಸಮರ್ಥರಾಗುತ್ತಾರೆ. ಇನ್ನು ಕೆಲವರಿಗೆ ಇದು ಗುಂಪಿನಲ್ಲಿ ಚರ್ಚೆ ಮಾಡುವ ವಿಷಯವಾಗಿರುತ್ತದೆ ಮತ್ತು ಇನ್ನುಳಿದವರಿಗೆ ಇದು ಒಬ್ಬರಿಗೊಬ್ಬರು ಮುಖಾಮುಖಿ ಚರ್ಚೆಯ ಸಂಗತಿ.

ಬರವಣಿಗೆಯ ಮೂಲಕ, ಕಲೆ ಮತ್ತು ದೇಹದ ಚಲನೆಯ ಮೂಲಕ ವ್ಯಕ್ತಪಡಿಸುವುದರಲ್ಲಿ ಚಿಕಿತ್ಸಕ ಉದ್ದೇಶ (therapeutic purposes) ವಿರುತ್ತದೆ. ನೋವನ್ನು ಸಹಿಸಿಕೊಳ್ಳುವ ಸಾಮರ್ಥ್ಯವಿರುವ ಮಕ್ಕಳು ಬಿಟ್ಟುಬಿಡುವ ಅಥವಾ ಮುಂದಕ್ಕೆ ಸಾಗುವ ಮನೋಭಾವವನ್ನು ಕಲಿತಿರುತ್ತಾರೆ. ಇದರಿಂದ ಭಾವನೆಗಳ ಸಂಕೋಲೆಯಲ್ಲಿ ಸಿಕ್ಕಿಕೊಳ್ಳುವುದರ ಬದಲಾಗಿ ಭವಿಷ್ಯದ ಆಯ್ಕೆಯನ್ನು ಮಾಡಿಕೊಳ್ಳಲು ಅನುಕೂಲವಾಗುತ್ತದೆ.

ನಾನೂ ಪ್ರಭಾವ ಬೀರಬಹುದು ಮತ್ತು ನಿಯಂತ್ರಿಸಬಹುದು

ಶಾಲೆಯಲ್ಲಿ ನಾವು ಮಕ್ಕಳ ಕತೃತ್ವ ಶಕ್ತಿಯನ್ನು (agency) ರೂಪಿಸಲು ಮತ್ತು ಅದನ್ನು ಗಟ್ಟಿಗೊಳಿಸಲು ಪ್ರಜ್ಞಾ–ಪೂರ್ವಕವಾಗಿ ಪ್ರಯತ್ನ ಮಾಡುತ್ತಿರುತ್ತೇವೆ. ಮಕ್ಕಳಿಗೆ ಅನೇಕ ವಿಷಯಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಅವಕಾಶ ನೀಡಲು ಬಯಸುತ್ತೇವೆ; ಏನನ್ನು ತಿನ್ನಬೇಕು, ಹೇಗೆ ಬಟ್ಟೆ ಧರಿಸಿಕೊಳ್ಳಬೇಕು, ಯಾವ ಭಾಷೆಯಲ್ಲಿ ಮಾತನಾಡಬೇಕು, ಏನನ್ನು ಬರೆಯಬೇಕು ಅಥವಾ ಚಿತ್ರಿಸಬೇಕು ಎಂಬುದನ್ನು ಆಯ್ಕೆ ಮಾಡಿಕೊಳ್ಳಲು ಅವರಿಗೆ ಪೂರ್ಣ ಸ್ವಾತಂತ್ರ್ಯವನ್ನು ನೀಡುತ್ತೇವೆ. ಜೊತೆಗೆ ನಮ್ಮ ಬಗ್ಗೆ ಅವರಲ್ಲಿ ಏನು ಅಭಿಪ್ರಾಯವಿದೆ ಎಂಬುದನ್ನೂ ತಿಳಿದುಕೊಳ್ಳಲು ಬಯಸುತ್ತೇವೆ.

ಮಕ್ಕಳು ಹೀಗೆ ತೊಡಗಿಕೊಳ್ಳುವುದರಿಂದ ಅವರಲ್ಲಿ ಆತ್ಮವಿಶ್ವಾಸ ಬೆಳೆಯುತ್ತದೆ ಮತ್ತು ಅವರ ಮೇಲೆ ನಿಯಂತ್ರಣ ಸಾಧ್ಯವಾಗುತ್ತದೆ. ಯಾವುದೇ ಭಯ ಇಲ್ಲದೆ ಬದುಕುವುದು ಹೇಗೆ ಮತ್ತು ಇದೇ ನಿಜವಾದ ಬದುಕುವ ರೀತಿ ಎಂಬುದನ್ನು ಅವರು ಅರ್ಥ ಮಾಡಿಕೊಳ್ಳುತ್ತಾರೆ. ಮನೆಯಲ್ಲಿರಲಿ ಅಥವಾ ಹೊರಗಡೆ ಇರಲಿ ಮಕ್ಕಳು ದುರ್ಬಲ ವಾತಾವರಣದಲ್ಲಿ ಬದುಕುತ್ತಿರುವಾಗ ಜಾತಿ ವಿಷಯದಲ್ಲಿ ಅವರನ್ನು

ಗುರಿಮಾಡಲಾಗುತ್ತದೆ. ಹಾಗಾಗಿ ಅವರ ದೇಹ ಮತ್ತು ಮನಸ್ಸು ಯಾವತ್ತೂ 'ರಕ್ಷಣೆ' ಮಾಡಿಕೊಳ್ಳಲು ಪ್ರಯತ್ನಿಸುತ್ತಿರುತ್ತದೆ. ಆದರೆ ನಾವು ಅವರ ಮಾಧ್ಯಮದೊಂದಿಗೇ (agency) ಕೆಲಸ ಮಾಡುವುದರಿಂದ ಅವರು ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ಅವಕಾಶ ನೀಡುತ್ತೇವೆ. ಇದರಿಂದ ಅವರು ತಮ್ಮ ಕಾರ್ಯಕ್ಷೇತ್ರವನ್ನು ಅರ್ಥ ಮಾಡಿಕೊಳ್ಳಲು ಸಹಾಯವಾಗುತ್ತದೆ. ಕಂಜಾರ್ ಸಮುದಾಯಕ್ಕೆ ಸೇರಿದ ಮಕ್ಕಳ ಗುಂಪು ಆರಂಭದಲ್ಲಿ ಬೆದರಿಕೆಗೆ ಒಳಗಾಯಿತು. ಯುವ ವಿದ್ಯಾರ್ಥಿಯೊಬ್ಬ ಅವರನ್ನು ತಡೆದು 'ಸಮುದಾಯದ ಹೆಸರು' ಹೇಳಿ ನಿಂದಿಸಿದ್ದರಿಂದ ಆ ಗುಂಪಿಗೆ ಸೇರಿದ ಮಕ್ಕಳು ಶಾಲೆಯನ್ನು ತೊರೆಯಲು ಬಯಸಿದರು. ಒಬ್ಬ ವ್ಯಕ್ತಿಯ ಪ್ರತಿಕ್ರಿಯೆ ಇನ್ನೊಬ್ಬರ ಮೇಲೆ ಯಾವ ರೀತಿ ಪರಿಣಾಮ ಬೀರುತ್ತದೆ ಎಂಬುದನ್ನು ನೋಡಲು ಮತ್ತು ಜಗತ್ತು ನಮ್ಮಲ್ಲಿ ಪ್ರತಿಯೊಬ್ಬರೂ ಇನ್ನೊಬ್ಬರ ವಿಚಾರದಲ್ಲಿ ಸ್ವಲ್ಪ ಕ್ರೂರವಾಗಿ ವರ್ತಿಸುವಂತೆ ಮಾಡಿದೆ ಎಂಬ ಸಮ್ಮತಿಯ ಜೊತೆಗೇ ಇಲ್ಲಿ ಕ್ಷಮೆಗೆ ಜಾಗವಿದೆಯೇ ಎಂಬುದನ್ನು ನೋಡಲು ಮಕ್ಕಳು ಮುಖಾಮುಖಿಯಾಗಿ ಪರಸ್ಪರ ಮಾತನಾಡಲು ಅವಕಾಶ ಕಲ್ಪಿಸಲಾಯಿತು.

ಇತರರೊಂದಿಗೆ ನನ್ನ ನಡವಳಿಕೆ ಹೇಗಿದೆ?

ಒಂದೊಂದು ಸಲ ನಿರ್ದಿಷ್ಟ ವಿಷಯದಲ್ಲಿ ಕೆಲಸ ಮಾಡಲು ತಮ್ಮ ನಡವಳಿಕೆಗಳು ಇನ್ನೊಬ್ಬರ ಮೇಲೆ ಪರಿಣಾಮ ಬೀರುತ್ತವೆ. ಎಷ್ಟೋ ಬಾರಿ ಇದನ್ನು ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ. ನಾನು ನನ್ನ ಸಹಪಾಠಿಯನ್ನು ಅವಮಾನಿಸುವ ಅಥವಾ ಮನಸ್ಸು ನೋಯಿಸುವ ಹೆಸರಿನಿಂದ ಕರೆದರೆ ಅವನಿಗೆ ಹೇಗಾಗುತ್ತದೆ? ನಿಮ್ಮ ಕಥೆಯನ್ನು ಹೇಳಿಕೊಳ್ಳುವಂತೆ ಯಾರಾದರೂ ನಿಮ್ಮನ್ನು ಕೇಳಿದರೆ ಹೇಗನಿಸುತ್ತದೆ? ನಾನು ಕಾಳಜಿ ಮಾಡುತ್ತಿದ್ದೇನೆಂದು ತೋರ್ಪಡಿಸುವುದು ಹೇಗೆ? ನನ್ನ ದನಿ ಹೇಗಿದೆ, ಅದು ಗೌರವಯುತವಾಗಿದೆಯೇ? ಇಂತಹ ಸಮಾಲೋಚನೆ ಮತ್ತು ಪರ್ಯಾಲೋಚನೆಯ ಮೂಲಕ ತಮ್ಮ ನಡವಳಿಕೆಗಳು ಹೇಗೆ ಪರಿಣಾಮ ಬೀರುತ್ತವೆ ಎಂಬುದನ್ನು ಮಕ್ಕಳು ಮತ್ತು ತರುಣರು ಅರ್ಥ ಮಾಡಿಕೊಳ್ಳುವಂತೆ ಮಾಡಬೇಕು. ನಮ್ಮ ಸಂಬಂಧಗಳನ್ನು ಕಾಯ್ದುಕೊಳ್ಳಲು ಹೇಳುವ ಮಾತುಗಳನ್ನು ಆಲಿಸುವುದು, ಅರ್ಥ ಮಾಡಿಕೊಳ್ಳುವುದು, ಕ್ಷಮೆ ಯಾಚಿಸುವುದು ಮತ್ತು ಮರೆತು ಮುಂದಕ್ಕೆ ಸಾಗುವುದು ಅತ್ಯಂತ ಮುಖ್ಯ. ಇವೆಲ್ಲವೂ ಸಂಘರ್ಷವನ್ನು ಪರಿಹರಿಸುವ ಮತ್ತು ನಮ್ಮ ಭಾವನೆಗಳನ್ನು ನಿಯಂತ್ರಿಸುವ ಕೌಶಲಗಳಾಗಿವೆ. ನಾವು ಮಾಡುವ ಹಾನಿಯಿಂದ ಪಲಾಯನ ಮಾಡುವುದು 'ಸ್ವಯಂಚಾಲಿತ' (auto mode) ಆಗಿರಬಾರದು.

ಹೊರಗಿನಿಂದ ಬರುವ ಋಣಾತ್ಮಕ ಯೋಚನೆಯನ್ನು ನಿಭಾಯಿಸಲು ಪ್ರತಿಯೊಬ್ಬ ಮನುಷ್ಯನಲ್ಲಿಯೂ ಒಂದು ಹಂತದ ಪ್ರತಿರಕ್ಷಣೆ ಇರುತ್ತದೆ. ಆದರೆ ಇದು ಯಾವತ್ತೂ ನಮ್ಮನ್ನು ನಾವು ರಕ್ಷಿಸಿಕೊಳ್ಳುವ ತಂತ್ರಗಾರಿಕೆ. ಸಿಟ್ಟನ್ನು ವ್ಯಕ್ತಪಡಿಸುವುದು ಮತ್ತು ಸಿಟ್ಟು ಅಥವಾ ಅಸಮಾಧಾನವನ್ನು ನಿಭಾಯಿಸುವುದು, ಈ ಭಾವನೆಗಳ ಹಿಂದಿನ ಕಾರಣಗಳು ಮತ್ತು ಇನ್ನೊಬ್ಬರಿಗೆ ಅಥವಾ ತನಗೇ ಅವಕಾಶವನ್ನು ನೀಡುವುದು ಪ್ರಜ್ಞಾಪೂರ್ವಕ ಸಮಾಲೋಚನೆಯ (conscious conversations) ಭಾಗವಾಗಿರಬೇಕು ಮತ್ತು ನಾವೇ ಆಂತರ್ಯದಲ್ಲಿ ಕೈಗೊಂಡ ಕ್ರಮವಾಗಿರಬೇಕು.

ಇತರರೊಂದಿಗೆ ಸಂವಹನ:

ಮಕ್ಕಳು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ನಾವು ಸಾಕಷ್ಟು ಅವಕಾಶಗಳನ್ನು ಸೃಷ್ಟಿಸುತ್ತೇವೆ. ಮಗುವೊಂದು ಮಾತನಾಡದೇ ಇರುವ ಸಾಧ್ಯತೆಗಳು ಬಹಳ ಕಡಿಮೆ. ಮಕ್ಕಳು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳುತ್ತ ಹೋದ ಹಾಗೆ ಜಗತ್ತಿನ ಮೇಲೆ ನಂಬಿಕೆ ಇಡುವುದನ್ನು ಕಲಿಯುತ್ತ ಹೋಗುತ್ತಾರೆ. ಹಸಿದವನೊಬ್ಬನ ಅನುಭವಗಳು ಇಡೀ ತರಗತಿಯಲ್ಲಿ ಎಲ್ಲರನ್ನೂ ನಿಬ್ಬೆರಗಾಗುವಂತೆ ಮಾಡುತ್ತದೆ. ಯಾಕೆಂದರೆ ತರಗತಿಯಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿ ಕೂಡ ಇಂತಹ ಅನುಭವಗಳನ್ನೇ ಹೊಂದಿರುತ್ತಾನೆ. ಸಾವಿಗೆ ಸಂಬಂಧಿಸಿದಂತೆ ಮಾತನಾಡುವುದರಿಂದ ಮಕ್ಕಳು ತಮ್ಮ ಪರಿಹಾರವಾಗದ ಭಾವನೆಗಳನ್ನು ಇತರರೊಂದಿಗೆ ಹಂಚಿಕೊಳ್ಳಲು ಸಾಧ್ಯವಾಗುತ್ತದೆ. ಮಗು ಸಾಮಾನ್ಯವಾಗಿ ಇಂತಹ ವಿಷಯಗಳ ಬಗ್ಗೆ ಮಾತನಾಡಲು ಹಾತೊರೆಯುತ್ತಿರುತ್ತದೆ. ಆದರೆ ಆ ಮಗುವಿಗೆ ಮಾತನಾಡಲು ದೊಡ್ಡವರಾರೂ ಸಿಕ್ಕಿರುವುದಿಲ್ಲ. ಹಾಗಾಗಿ ನಮ್ಮ ಅನೇಕ ಯೋಜನೆಗಳಲ್ಲಿ ಇಂತಹ ಸಮಾಲೋಚನೆಗಳನ್ನು ಸೇರಿಸಿರುತ್ತೇವೆ.

ನಿಮ್ಮ ತಪ್ಪುಗಳಿಗಿಂತ ನೀವೇ ಮುಖ್ಯ

ಮಕ್ಕಳ ನಿಯಂತ್ರಣದಲ್ಲಿಯೇ ಇಲ್ಲದ ಕೆಲಸಗಳಿಗೆ ಅವರನ್ನು ತರಾಟೆಗೆ ತೆಗೆದುಕೊಳ್ಳುತ್ತೇವೆ. ಅಥವಾ ಅವರಿಗೆ ಆ ಕೆಲಸವನ್ನು ಹೇಗೆ ಸರಿಪಡಿಸಿಕೊಳ್ಳಬೇಕು ಎಂಬುದು ತಿಳಿದಿರುವುದಿಲ್ಲ. ಮತ್ತೆಮತ್ತೆ ಈ ಅನುಭವಗಳು ಆದ ಬಳಿಕ ಮಕ್ಕಳು ಇಂತಹ ಪರಿಸ್ಥಿತಿಗಳಿಂದ ದೂರವಿರಲು ಪ್ರಯತ್ನ ಮಾಡುತ್ತಾರೆ. ಯಾಕೆಂದರೆ ಒಂದಲ್ಲ ಒಂದು ಕಾರಣದಿಂದ ತಾವು ವಿಚಾರಣೆಗೆ ಒಳಗಾಗುತ್ತೇವೆ ಎಂಬ ಭಾವನೆ ಅವರಲ್ಲಿ ಅಡಕವಾಗಿರುತ್ತದೆ.

ನಮ್ಮನ್ನು ಶಿಕ್ಷೆಗೆ ಗುರಿಪಡಿಸಲಾಗುವುದಿಲ್ಲ, ನಾವೇನೂ ಕೆಟ್ಟದನ್ನು ಮಾಡಿಲ್ಲ, ಎಡವುವುದು, ಹಿಂಜರಿಕೆ ತಪ್ಪೇನೂ ಅಲ್ಲ ಎಂಬುದು ನಮಗೆ ಅರಿವಿದ್ದಾಗ ನಾವು ಮಾಡಿದ ಕಾರ್ಯಗಳ ಹೊಣೆ ಹೊರಲು ಮುಂದಾಗುತ್ತೇವೆ. ಇದು ಇನ್ನೊಂದು ರೀತಿಯಲ್ಲಿ ಮಕ್ಕಳ ಅಗತ್ಯಗಳನ್ನು ಕಟ್ಟಿಹಾಕುವ ಬಗೆ. ಸಮಸ್ಯೆಯನ್ನು ಹಂಚಿಕೊಳ್ಳುವುದು ಮತ್ತು ಬೆಂಬಲವನ್ನು ಪಡೆಯುವುದು ಜೀವನದಲ್ಲಿ ಅತ್ಯವಶ್ಯಕವಾದ ಕೌಶಲ. ನಾವು ಬದುಕಿನಲ್ಲಿ ರಚನಾತ್ಮಕವಾಗಿ ನಿಭಾಯಿಸುವ ತಂತ್ರವನ್ನು ಕಲಿತು-ಕೊಳ್ಳುತ್ತಿದ್ದಂತೆ ಕಳಪೆ ಅಂಕಗಳಿಂದ ಮಕ್ಕಳು ಮತ್ತು ಯುವಕರು ಖುಷಿಗೊಳ್ಳುವ ಕಥೆಗಳು ಕಡಿಮೆಯಾಗುತ್ತವೆ.

ಮಿತ್ರರು ಮತ್ತು ತಂಡಕಾರ್ಯ

ಅನೇಕ ಮಂದಿಗೆ ಶಾಲೆಗಳು ತಮ್ಮ ಕುಟುಂಬಗಳಿಂದ ಆಚೆಗೆ ಇರುವ ಜನರ ಜೊತೆ ಸಂವಹನ ನಡೆಸಲು ಇರುವ ಅವಕಾಶ. ಆದರೆ ವಾಸ್ತವವಾಗಿ ಸಾಮಾಜಿಕ ಶ್ರೇಣಿಗಳು ಇಲ್ಲಿಯೂ ಕೆಲಸ ಮಾಡುತ್ತವೆ. ನಿರ್ಲಕ್ಷ್ಯಕ್ಕೆ ಒಳಗಾದ ಸಮುದಾಯಗಳಿಂದ ಬಂದಿರುವ ಈ ಮಕ್ಕಳಿಗೆ ಇತರ ಮಕ್ಕಳೊಂದಿಗೆ ಬೆರೆಯಲು ಇರುವ ಹಿಂಜರಿಕೆ ತೀವ್ರ ಸ್ವರೂಪದ್ದಾಗಿರುತ್ತದೆ. ಜೊತೆಗೆ ಇನ್ನೊಬ್ಬರ ಸಿಟ್ಟಿನ ಸನ್ನಿವೇಶದಿಂದ ತಪ್ಪಿಸಿಕೊಳ್ಳಲು ಅದೃಶ್ಯವಾಗುವುದು ಬುದ್ಧಿವಂತಿಕೆಯ ನಡವಳಿಕೆ ಕೂಡ.

ದೊಡ್ಡವರಾಗಿ ನಾವು ಅತ್ಯಂತ ಪ್ರಜ್ಞಾಪೂರ್ವಕವಾಗಿ ಗೆಳೆತನ ಮತ್ತು ಸಮನ್ವಯದ ಕೆಲಸವನ್ನು ಉತ್ತೇಜಿಸಬೇಕಾದ ಅಗತ್ಯವಿದೆ. ಆ ಮೂಲಕ ಅಧಿಕಾರದ ಸೂತ್ರವಿಲ್ಲದೆ ಇತರರೊಂದಿಗೆ ಕೆಲಸ ಮಾಡುವುದು ಹೇಗೆ ಎಂಬುದನ್ನು ತಿಳಿದುಕೊಳ್ಳಲು ಸಹಾಯವಾಗುತ್ತದೆ. ಇದರ ಜೊತೆಗೆ ದೊಡ್ಡ ಜಿಗ್ಸಾ ಆಟದ ಒಗಟನ್ನು (jigsaw) ರಚಿಸುವುದು, ಬೇಸಾಯದ ಚಟುವಟಿಕೆಗಳನ್ನು ಕೈಗೊಳ್ಳುವುದು ಮತ್ತು ಸಮಾನವಾದ ಚಾರ್ಟ್ ಸಿದ್ಧಪಡಿಸುವುದು ಮುಂತಾದ ಚಟುವಟಿಕೆಗಳನ್ನು ನಡೆಸಬಹುದು.

ಮನೆಯಲ್ಲಿ ಎಲ್ಲವೂ ಸರಿಯಾಗಿಲ್ಲದೇ ಇದ್ದ ಸಂದರ್ಭದಲ್ಲಿ ಗೆಳೆತನ ದೊಡ್ಡ ಆಧಾರಸ್ತಂಭವಾಗಿ ಕೆಲಸ ಮಾಡುತ್ತದೆ. ಮಕ್ಕಳು ಶಾಲಾ ವಾತಾವರಣಕ್ಕೆ ಹೊಂದಿಕೊಳ್ಳುತ್ತ ಹೋದ ಹಾಗೆ ಅವರು ಕೆಲವೊಮ್ಮೆ ಅಪ್ರಜ್ಞಾಪೂರ್ವಕವಾಗಿ ತಾವು ಮಾಡುವ ಆಯ್ಕೆಗಳಲ್ಲಿ ಸಹಪಾಠಿಗಳಿಂದ ಬೆಂಬಲ ಮತ್ತು ಒಮ್ಮತವನ್ನು ಬಯಸುತ್ತಾರೆ. ಉದಾಹರಣೆಗೆ ಪ್ರತಿ ದಿನ ತಾನು ಶಾಲೆಗೆ ಬರಲು ನಿರ್ಧಾರ ಕೈಗೊಳ್ಳುವುದು ಕೂಡ ಸಹಪಾಠಿಗಳ ಪ್ರಭಾವದಿಂದ ಎಂಬ ಭಾವನೆ. ಮಕ್ಕಳು ತಮ್ಮದೇ ಆದ ಸೀಮಿತ ಪ್ರದೇಶದಲ್ಲಿ ತಮ್ಮ ಕನಸುಗಳು ಮತ್ತು ಆಕಾಂಕ್ಷೆಗಳಲ್ಲಿ ನಂಬಿಕೆ ಇರುವಂತೆ ಪ್ರೋತ್ಸಾಹ ನೀಡುವ ರೋಲ್ ಮಾಡೆಲ್‌ಗಳು ಅಥವಾ ಜನರನ್ನು ಕಂಡುಕೊಳ್ಳುವುದು ಅಪರೂಪ.

ದೈಹಿಕ ಸ್ಪರ್ಶ ಅತಿ ಮುಖ್ಯ

ಎಲ್ಲಿಯವರೆಗೆ ಮಕ್ಕಳು ಪರಸ್ಪರ ಕಾಳಜಿ ತೋರಿಸುತ್ತಿದ್ದಾರೆ ಎಂದು ದೊಡ್ಡವರು ಭಾವಿಸುತ್ತಾರೋ (ಕುಟುಂಬದ ಸದಸ್ಯರಿಗೆ ಅವಕಾಶವಿದ್ದಂತೆ) ಅಲ್ಲಿಯ ತನಕ ಒಂದು ಆಲಿಂಗನ ಅಥವಾ ನಡೆಯುವಾಗ ಕೈಗಳನ್ನು ಹಿಡಿದು ಸಾಗುವುದು ಅನುಚಿತವೇನೂ ಅಲ್ಲ ಮತ್ತು ಮಿತಿ ಮೀರಿದ್ದಾರೆ ಎಂದು ಭಾವಿಸಬೇಕಾಗಿಲ್ಲ. ಇಲ್ಲಿ ಮಕ್ಕಳಿಗೆ ಹಿಂದೆ ಸರಿಯಲು ಅವಕಾಶವಿರುತ್ತದೆ. ಇದು ನಮ್ಮ ಶಾಲೆಗಳಲ್ಲಿರುವ ನಿಯಮವಾಗಿದೆ. ಮಕ್ಕಳ ಖಾಸಗಿತನ ಮತ್ತು ಸುರಕ್ಷತೆಯ ಬಗೆಗೆ ಕಳಕಳಿಯನ್ನು ಹೊಂದಿರುತ್ತಲೇ ಮನುಷ್ಯನ ಈ ರೀತಿಯ ಸ್ಪರ್ಶಗಳು ಅನೇಕ ರೀತಿಯಲ್ಲಿ ಸಾಂತ್ವನ ಹೇಳುವ ಕೆಲಸ ಮಾಡುತ್ತವೆ. ಅದರಲ್ಲೂ ಮುಖ್ಯವಾಗಿ ಕೌಟುಂಬಿಕ ವಾತಾವರಣದಲ್ಲಿ ತರುಣ/ಮಗು ನಿರ್ಲಕ್ಷ್ಯಕ್ಕೆ ಒಳಗಾದಾಗ ಇದು ಸಂತೈಕೆಯ ಕೆಲಸ ಮಾಡುತ್ತದೆ. 'ಇಂದು ನಾನು ತರಗತಿಯಲ್ಲಿ ಮಾತನಾಡುತ್ತಿದ್ದಾಗ ಟೀಚರ್ ನನ್ನ ತಲೆಗೆ ಮೊಟಕಿದರು' ಎಂದು ಲೇಖಕರ ಮಗಳು ಶಾಲೆಯಿಂದ ಮರಳಿದಾಗ ಖುಷಿಯಿಂದ ಹೇಳಿಕೊಂಡಿದ್ದು ಅಚ್ಚರಿ ಎನಿಸಿತು.

ಸ್ಪರ್ಶದ ಸಂತೈಕೆ ಇಡೀ ತರಗತಿಗೆ ವಿಸ್ತರಿಸಲಾಗಿದೆ. ತರಗತಿಯಲ್ಲಿ ಚರ್ಚೆ ಮಾಡುವಾಗ ಮತ್ತು ಅಭಿಪ್ರಾಯಗಳನ್ನು ಹಂಚಿಕೊಳ್ಳುವಾಗ ಒಬ್ಬರಿಗೊಬ್ಬರು ಕೈ ಹಿಡಿದುಕೊಳ್ಳುವುದನ್ನು ಉತ್ತೇಜಿಸಲಾಗುತ್ತದೆ. ಇದರಿಂದ ಅವರು ಒಬ್ಬರಿಗೊಬ್ಬರು ಹೊಂದಾಣಿಕೆ ಮಾಡಿಕೊಂಡ ಭಾವ ಮೂಡುತ್ತದೆ. ಇತರರೊಂದಿಗೆ ಪರಾನುಭೂತಿಯನ್ನು ಹೊಂದುವ, ಬೆಂಬಲವನ್ನು ನೀಡುವ ಹಾಗೂ ಇನ್ನೊಬ್ಬರ ಕಷ್ಟದ ಸಂದರ್ಭದಲ್ಲಿ ನಗದೇ ಇರುವುದನ್ನು ಅವರು ಅರ್ಥ ಮಾಡಿಕೊಳ್ಳುತ್ತಾರೆ.

ತನ್ನೊಂದಿಗೇ ಸಂವಹನ

ಧ್ಯಾನಸ್ಥ ವ್ಯಾಯಾಮದ (Meditative exercises) ಮೂಲಕ ಮಕ್ಕಳು ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡು ದೇಹದ ನಾನಾ ಭಾಗಗಳ ಸಂವೇದನೆಯನ್ನು ಅನುಭವಿಸುವಂತೆ ಮತ್ತು ಹೃದಯದ ಮೇಲೆ ಕೈಗಳನ್ನು ಇರಿಸಿಕೊಂಡು ಅದರ ಬಡಿತವನ್ನು ಆಲಿಸುವಂತೆ ತಿಳಿಸಲಾಗುತ್ತದೆ. ಇಂತಹ ವ್ಯಾಯಾಮದ ಮೂಲಕ ತಮ್ಮ ಅಂತರಂಗದೊಂದಿಗೆ ಸಂವಹನ ನಡೆಸಲು ಸಹಾಯ ಮಾಡಲಾಗುತ್ತದೆ. ಕೆಲವು ಮಕ್ಕಳು ಕಣ್ಣು ಮುಚ್ಚಿಕೊಂಡು ಇರಲು ಅಥವಾ ಆಂತರ್ಯದ ಜೊತೆಗಿರಲು ಕಷ್ಟಪಟ್ಟರು. ಒಂದು ಮಗು ತಾನು ಚಿಂದಿ ಆಯುವಾಗ ಕೊಳೆತುಹೋದ ಪ್ರಾಣಿಯ ದೇಹವಿದ್ದ ಪೈಪ್ ಮೇಲೆ ಕೈಯಿಟ್ಟಿದ್ದು, ಅದರ ಕೆಟ್ಟ ವಾಸನೆ ಬಹಳ ಕಾಲ ಹೋಗದೇ ಇದ್ದುದನ್ನು ಹೇಳಿಕೊಂಡಿತು. ಇದನ್ನು ವಿವರಿಸುವಾಗ ತನ್ನ ಕೈಯನ್ನು ದೂರವಿಟ್ಟುಕೊಂಡು ಆ ಕೊಳೆತ ವಾಸನೆ ಮೂಗಿಗೆ ಬಡಿದ ರೀತಿಯನ್ನು ಆಕೆ ಅನುಭವಿಸಿದಳು. ಈ ಅನುಭವವನ್ನು ಆಕೆ ಇಲ್ಲಿಯ ತನಕ ಯಾರೊಂದಿಗೂ ಹಂಚಿಕೊಂಡಿರುವ ಸಾಧ್ಯತೆಯಿರಲಿಲ್ಲ.

## ಒಟ್ಟು ಸಾರಾಂಶ

ಮಕ್ಕಳ ಯೋಗಕ್ಷೇಮದ ಮೇಲೆ ಯಾವುದು ಪರಿಣಾಮ ಬೀರುತ್ತಿದೆ; ಮಗುವಿನ ದಿನನಿತ್ಯದ ಚಟುವಟಿಕೆಗಳು ಹೇಗಿವೆ; ಅಲ್ಲಿ ಹಿಂಸೆ–ಕಿರಿಕಿರಿಯಿದೆಯೇ; ಆಕೆಗೆ ಹಸಿವಾದಾಗ ಏನು ಮಾಡುತ್ತಾಳೆ, ಮಗು ಏನನ್ನು ನೋಡುತ್ತದೆ ಮತ್ತು ಆಲಿಸುತ್ತದೆ? ಎಂಬುದರ ಮೇಲೆ ಶಿಕ್ಷಕಿ ನಿಗಾ ಇಡಬೇಕು. ಮಗುವಿನ ಮನಸ್ಸಿನ ಮೇಲೆ ಆಗಿರುವ ಘಾಸಿ ಹಂತಹಂತವಾಗಿ ನಡೆದಿರುವುದು, ಅದು ತಕ್ಷಣ ಉಪಶಮನವಾಗುವುದಿಲ್ಲ; ಮಗು ತನ್ನ ಆಂತರ್ಯವನ್ನು ಅರಿಯುವ ತನಕ ನಾವು ಅದರೊಂದಿಗೆ ಇರಬೇಕಾಗುತ್ತದೆ. ಏಕಾಂಗಿಯಾಗಿ ಕೆಲಸ ಮಾಡುವುದು ('Alone work') ತಂಡಕಾರ್ಯ (teamwork)ದಷ್ಟೇ ಮುಖ್ಯ. ಲಭ್ಯವಿರುವ

ಕೌಶಲಗಳಿಗೆ ಅನುಗುಣವಾಗಿ ಕಲೆ, ಚಲನೆ, ನೃತ್ಯ, ಸಂಗೀತ ಮತ್ತು ಆಟಗಳಂತಹ ಅನೇಕ ಚಟುವಟಿಕೆಗಳಲ್ಲಿ ಭಾಗಿಯಾಗುವಂತೆ ಮಗುವಿಗೆ ನಾವು ಪ್ರೋತ್ಸಾಹ ನೀಡಬೇಕಾದ ಅಗತ್ಯವಿರುತ್ತದೆ. ಪರಿಪೂರ್ಣವಾದ ಜೀವನವನ್ನು ಅನುಭವಿಸಿದರೆ ಆಂತರಿಕ ಸಮತೋಲನವನ್ನು ಕಂಡುಕೊಳ್ಳುವ ಸಾಧ್ಯತೆಗಳು ಅಧಿಕವಾಗಿರುತ್ತದೆ.

ಒಂದು ದೇಶವಾಗಿ ನಾವು ನಮ್ಮ ಅತ್ಯಂತ ನಿರ್ಲಕ್ಷ್ಯಕ್ಕೆ ಒಳಗಾದ ಸಮುದಾಯವಾದ ಮಕ್ಕಳ ವಿಚಾರದಲ್ಲಿ ಸೋತಿದ್ದೇವೆ. ನಮ್ಮ ತರಗತಿಗಳಲ್ಲಿ ಆಗಿರುವ ಈ ಹಾನಿಯನ್ನು ಸರಿಪಡಿಸುವ ಅಗತ್ಯದ ಜೊತೆಗೆ ಸರ್ಕಾರವು ಕೂಡ ಈ ತಾರತಮ್ಯವನ್ನು ಗುರುತಿಸುವ ಮೂಲಕ ಅಸಮಾನತೆಯನ್ನು ಕೊನೆಗೊಳಿಸ-ಬೇಕಾಗಿದೆ ಮತ್ತು ಆಗಿರುವ ನಷ್ಟವನ್ನು ಭರ್ತಿ ಮಾಡಿ ನ್ಯಾಯ ಒದಗಿಸುವ ಕಡೆಗೆ ಹೆಜ್ಜೆ ಇಡಬೇಕಿದೆ.

## ಕೊನೆ ಟಿಪ್ಪಣಿ

i. ಮಧ್ಯ ಪ್ರದೇಶದ ಭೋಪಾಲ್ ನ ಬಸ್ತಿಗಳಲ್ಲಿ ವಾಸಿಸುವ, ನಿರ್ಲಕ್ಷ್ಯಕ್ಕೆ ಒಳಗಾದ ಸಮುದಾಯಗಳ ಜೊತೆಗೆ ಕೆಲಸ ಮಾಡುವ ಮುಸ್ಕಾನ್ ಲಾಭ- ರಹಿತ, ಸರ್ಕಾರೇತರ ಸಂಸ್ಥೆಯಾಗಿದೆ.

ii. ಕ್ರಿಮಿನಲ್ ಕಾಯ್ದೆ ಅಡಿಯಲ್ಲಿ 150ಕ್ಕೂ ಅಧಿಕ ಸಮುದಾಯಗಳನ್ನು ಬ್ರಿಟಿಷ್ ಸರ್ಕಾರ ಪಟ್ಟಿ ಮಾಡಿದೆ. ಈ ಕಾಯ್ದೆಯ ಪ್ರಕಾರ ಆಡಳಿತವು ಈ ಸಮುದಾಯಗಳಿಗೆ ಸೇರಿದ ಸದಸ್ಯರನ್ನು ಬಲವಂತವಾಗಿ ಶಿಬಿರಗಳಲ್ಲಿ ನೆಲೆಗೊಳ್ಳುವಂತೆ ಮಾಡಲು ಅವಕಾಶ ನೀಡುತ್ತದೆ. ಈ ಶಿಬಿರಗಳಲ್ಲಿ ಇವರನ್ನು ಜೀತದಾಳುಗಳಾಗಿ ಪರಿಗಣಿಸಲಾಗುತ್ತದೆ. ಅವರ ಪಾಲಕರಿಂದ ಮಕ್ಕಳನ್ನು ಪ್ರತ್ಯೇಕಗೊಳಿಸಲು ಈ ಕಾಯ್ದೆಯನ್ನು ಪರಿಗಣಿಸಲಾಗಿದೆ.

* ಮಕ್ಕಳ ಸುರಕ್ಷತೆಯ ಹಿನ್ನೆಲೆಯಲ್ಲಿ ಅವರ ಹೆಸರುಗಳನ್ನು ಬದಲಿಸಲಾಗಿದೆ.

**ಪರಾಮರ್ಶನ**


i Muskaan is a non-profit, non-governmental organisation working with marginalised communities living in the bastis in Bhopal, Madhya Pradesh.

ii The British Government had listed over 150 communities under the Criminal Tribes Act which allowed the administration to forcefully 'settle' members of these communities into camps from where they could be called upon as bonded labour, and to separate children from their parents. It was considered that everyone born in the community would be deemed criminal and could be treated with suspicion. After the repeal of this Act in 1952, the communities henceforth have been referred to as 'denotified'.





**ಶಿವಾನಿ ತನೇಜಾ** ಅವರು ಭೋಪಾಲ್ ಮತ್ತು ಅದರ ಸುತ್ತಮುತ್ತ ಅಧಿಸೂಚಿತ ಬುಡಕಟ್ಟು ಹಿನ್ನೆಲೆಯ ಮತ್ತು ಸುಧಾರಿತ ಸಮುದಾಯಗಳ ಜನರೊಂದಿಗೆ ಕಳೆದ 25 ವರ್ಷಗಳಿಂದ ಕೆಲಸ ಮಾಡುತ್ತಿದ್ದಾರೆ. ಶಿಕ್ಷಣವನ್ನು ಪ್ರತ್ಯೇಕ ಶೈಕ್ಷಣಿಕ ವಿದ್ಯಮಾನವಾಗಿ ಪರಿಗಣಿಸಲು ಸಾಧ್ಯವಿಲ್ಲ ಎಂದು ನಂಬಿರುವ ಅವರು, ಒಬ್ಬ ಶಿಕ್ಷಣ ತಜ್ಞರಾಗಿ ಮಕ್ಕಳ ಯೋಗಕ್ಷೇಮ ಮತ್ತು ಸಶಕ್ತೀಕರಣವನ್ನು ಅವರ ಶೈಕ್ಷಣಿಕ ಪಯಣದ ಮುಖ್ಯ ಭಾಗವಾಗಿ ಪರಿಗಣಿಸಬೇಕು ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಇದು ಅವರ ಕಳಕಳಿಗಳು ಮತ್ತು ಕೆಲಸದ ಆದ್ಯತೆಗಳಲ್ಲಿ ಸೇರಿದೆ. ಮಕ್ಕಳ ರಚನಾತ್ಮಕ ಸಂಸ್ಥೆಯನ್ನು ಸ್ಥಾಪನೆ ಮಾಡುವುದು, ಸಂಕಷ್ಟದ ಬಾಲ್ಯದ ನಡುವೆ ಮಾನಸಿಕ ಆರೋಗ್ಯವನ್ನು ಕಾಯ್ದುಕೊಳ್ಳುವುದು ಮತ್ತು ಸಾಮಾಜಿಕ ನ್ಯಾಯ ಅವರ ಆದ್ಯತೆಗಳಲ್ಲಿ ಸೇರಿವೆ. ಒಬ್ಬ ಶಿಕ್ಷಕಿಯ ಹೃದಯವನ್ನು ಹೊಂದಿರುವ ಶಿವಾನಿ ಅವರು ಮುಸ್ಕಾನ್ ನಲ್ಲಿ ಪ್ರತಿದಿನದ ಕ್ಲಾಸ್-ರೂಂ ಚಟುವಟಿಕೆಗಳಲ್ಲಿ ಖುಷಿಯಿಂದ ಭಾಗಿಯಾಗುತ್ತಾರೆ ಹಾಗೂ ಬೋಧನಾ ವಿಧಾನದ ಪ್ರಯತ್ನಗಳ ಮೂಲಕ ವಿದ್ಯಾರ್ಥಿಗಳ ಪ್ರತಿಕ್ರಿಯೆಗಳಿಂದ ಕಲಿಕೆಯನ್ನು ಚಾಲ್ತಿಯಲ್ಲಿಟ್ಟಿದ್ದಾರೆ. ಅವರನ್ನು shivani@muskaan.org ಮೂಲಕ ಸಂಪರ್ಕಿಸಬಹುದು.





**ಸವಿತಾ ಸೋಹಿತ್** ಅವರು ಕಳೆದ 15 ವರ್ಷಗಳಿಂದ 'ಮುಸ್ಕಾನ್' ಜೊತೆ ಕಾರ್ಯನಿರ್ವಹಿಸುತ್ತಿದ್ದಾರೆ. ಪ್ರಾಥಮಿಕ ತರಗತಿಗಳಲ್ಲಿ ಮಕ್ಕಳ ಕಲಿಕಾ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿರುವ ಅವರು ತಮ್ಮ ಬೋಧನಾ ವಿಧಾನದಲ್ಲಿ ಬಹುಭಾಷಾ ಬೋಧನಾ ವಿಧಾನವನ್ನು ಅಳವಡಿಸಿಕೊಂಡಿದ್ದಾರೆ. ಸಮುದಾಯಗಳಲ್ಲಿ ಯುವಕರು ಮತ್ತು ವಯಸ್ಕರ ಜೊತೆಗೂ ಕೆಲಸ ಮಾಡುವ ಅವರು ಗೌರವ ಹಾಗೂ ಸಾಮಾಜಿಕ ನ್ಯಾಯಕ್ಕಾಗಿ ಸಮುದಾಯಗಳು ನಡೆಸುತ್ತಿರುವ ಹೋರಾಟಗಳಲ್ಲಿಯೂ ಬೆಂಬಲಕ್ಕೆ ನಿಂತಿದ್ದಾರೆ. ಅವರನ್ನು savita.sohit@rediffmail.com ಮೂಲಕ ಸಂಪರ್ಕಿಸಬಹುದು.


ಅನುವಾದ: **ಮಂಜುನಾಥ್ ಚಾಂದ್** | ಪರಿಶೀಲನೆ: **ಲತಾ ಕೆ.ಸಿ.**

# ಕುಟುಂಬದ ವಿಸ್ತರಿತ ಭಾಗವಾಗಿ ಶಾಲೆ

ಅನಿಲ್ ಸಿಂಗ್

ಮಾರ್ಚ್ 2020ರಿಂದ ಶುರುವಾಗಿ ಸುಮಾರು ಎರಡು ವರ್ಷ ಶಾಲೆಗಳು ಮುಚ್ಚಲ್ಪಟ್ಟಿದ್ದು ನಮ್ಮ ಸಮಾಜದ ಅಂಚಿನಲ್ಲಿರುವ ವರ್ಗಗಳ ಮೇಲೆ, ಜೊತೆಗೆ ಆರೋಗ್ಯ, ಉದ್ಯೋಗ ಮತ್ತು ಸಾಮಾಜಿಕ ಭದ್ರತೆಯಂತಹ ವಿಷಯಗಳ ಮೇಲೂ ಗಮನಾರ್ಹ ಪರಿಣಾಮ ಬೀರಿತ್ತು. ಅದರಲ್ಲೂ, ಮುಖ್ಯವಾಗಿ ಮಕ್ಕಳು ಉದ್ವೇಗ, ಅನಿಶ್ಚಿತತೆ ಮತ್ತು ಅಭಾವಗಳನ್ನು ಮೌನವಾಗಿ ಗಮನಿಸುತ್ತಿದ್ದುದರಿಂದ, ಅವರ ಪರಿಸ್ಥಿತಿ ಮತ್ತಷ್ಟು ಭೀಕರವಾಗಿತ್ತು. ದೊಡ್ಡವರು ಪರಿಸ್ಥಿತಿಯೊಂದಿಗೆ ಏಗುವ ದಾರಿ ಕಂಡುಕೊಂಡರೆ, ಮಕ್ಕಳಿಗೆ ಬಹಳ ಸೀಮಿತ ಆಯ್ಕೆಗಳಿದ್ದವು. ಶಾಲೆಯಲ್ಲಾದರೆ, ಇತರ ಮಕ್ಕಳೊಂದಿಗೆ ಪರಸ್ಪರ ಸಂವಹನ ನಡೆಸುತ್ತಾ, ತಮ್ಮ ಭಾವನೆಗಳನ್ನು ಹಂಚಿಕೊಳ್ಳುತ್ತಾ, ಹೊಸ ಸ್ನೇಹಿತರನ್ನು ಕಂಡುಕೊಳ್ಳುತ್ತಾ, ಸೃಜನಾತ್ಮಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮೂಲಕ ಹೊಸ ಸಂಗತಿಗಳನ್ನು ಕಲಿಯುತ್ತಾ, ಏನೋ ಸಾಧಿಸಿದಂತೆ ಭಾವಿಸಿಕೊಳ್ಳುವ ಅವಕಾಶಗಳು ಮಕ್ಕಳಿಗೆ ಸಿಗುತ್ತಿದ್ದವು. ಹಾಗೆ ಮಾಡುವುದರಿಂದ, ಅವರಿಗೆ ತಮ್ಮ ಮನೆ ಮತ್ತು ಸುತ್ತಮುತ್ತಲಿನ ಒತ್ತಡದ ವಾತಾವರಣದಿಂದ ತಾತ್ಕಾಲಿಕವಾಗಿ ದೂರವುಳಿಯುವ ಮೂಲಕ ತಮ್ಮ ಯಾವುದೇ ಬಗೆಯ ಭಾವನಾತ್ಮಕ ಬಿಕ್ಕಟ್ಟಿನಿಂದ ಸ್ವಲ್ಪ ಮಟ್ಟಿನ ಬಿಡುಗಡೆ ಸಿಗುತ್ತಿತ್ತು. ಸೈದ್ಧಾಂತಿಕವಾಗಿ, ಇದು ಒಳ್ಳೆಯ ಉಪಾಯದಂತೆ ಕಂಡರೂ, ಪ್ರಾಯೋಗಿಕವಾಗಿ ಇಂತಹ ಪರಿಸ್ಥಿತಿಯ ಬಗ್ಗೆ ಶಾಲಾ ಹಂತದಲ್ಲಿಯೇ ಜಾಗೃತಿ ಮೂಡಿಸುವ ಮತ್ತು ಸೂಕ್ಷ್ಮ ಸಂವೇದನೆ ಬೆಳೆಸುವಂತಹ ಅವಶ್ಯಕತೆ ಬಹಳ ಇದೆ.

ಸಮಾಜೋ–ಆರ್ಥಿಕ ಸ್ಥಿತಿ ಕೆಳಹಂತದಲ್ಲಿರುವ ಸಮುದಾಯಗಳ ಮಕ್ಕಳು ಅಭಿವ್ಯಕ್ತಪಡಿಸುವುದಕ್ಕೂ ಹೆಣಗುತ್ತಿರುತ್ತಾರೆ, ಇಂತಹ ಪರಿಸ್ಥಿತಿಯಲ್ಲಿ ಶಿಕ್ಷಕರ ಪ್ರಯತ್ನಗಳು ಮತ್ತು ಜವಾಬ್ದಾರಿಗಳು ಬಹಳ ಹೆಚ್ಚು ಇರುತ್ತವೆ ಎಂಬುದನ್ನು ನಾವು ನೆನಪಿಡಬೇಕು. ಶಾಲೆಗಳು ಮಕ್ಕಳಲ್ಲಿ ಆತ್ಮವಿಶ್ವಾಸ, ಪ್ರೀತಿ, ಭದ್ರತೆ ಹಾಗೂ ಭಾವನಾತ್ಮಕ ಆಸರೆಯನ್ನು ನೀಡುವಂತಾದರೆ ಎಷ್ಟು ಚಂದ! ಶಿಕ್ಷಕರು, ವಯಸ್ಕರಾಗಿ, ಮಕ್ಕಳೊಂದಿಗೆ ಸಾಂಗತ್ಯ ಮತ್ತು ನಂಬಿಕೆ ಬೆಳೆಸಿ, ಮಕ್ಕಳು ಯಾವುದೇ ಸವಾಲಿನ ಪರಿಸ್ಥಿತಿಗಳಲ್ಲಿ ತಮ್ಮನ್ನು ತಾವು ನಿಭಾಯಿಸಿಕೊಳ್ಳುವಂತೆ ಅವರನ್ನು ಸಜ್ಜುಗೊಳಿಸಬಹುದು.ನಮ್ಮ ಶಾಲೆಯ ಬಹುತೇಕ ಮಕ್ಕಳು ಕೊಳೆಗೇರಿಗಳಲ್ಲಿ ವಾಸಿಸುವವರು. ಲಾಕ್ಡೌನ್ ಅವಧಿಯಲ್ಲಿ ಎಷ್ಟೋ ಮಂದಿ ಉದ್ಯೋಗ ಕಳೆದುಕೊಂಡರು. ಬಹುದೊಡ್ಡ ಪ್ರಮಾಣದಲ್ಲಿ ಉದ್ಯೋಗಸೃಷ್ಟಿ ಮಾಡುವ – ನಿರ್ಮಾಣ ಕ್ಷೇತ್ರ ಸ್ತಬ್ಧವಾಗಿತ್ತು. ಜನರು ತಮ್ಮ ಉಳಿತಾಯದ ಹಣವನ್ನು ತಮ್ಮ ದೈನಂದಿನ ಖರ್ಚುವೆಚ್ಚಗಳಿಗೆ ಬಳಸಿಕೊಳ್ಳಬೇಕಾಯಿತು. ಅಷ್ಟೇ ಅಲ್ಲದೆ, ಆದಾಯ ಕುಸಿಯುತ್ತಾ ಹೋದಂತೆ ಸಾಲ ಹೆಚ್ಚುತ್ತಾ ಹೋಯಿತು. ಇಡೀ ಕುಟುಂಬದ ಮೇಲೆ ಇದು ಪರಿಣಾಮ ಬೀರುವಂತಾಯಿತು. ಆ ಕಷ್ಟಕರ ಸನ್ನಿವೇಶದಲ್ಲಿ ಅಲ್ಲಿನ ಮಕ್ಕಳು ಪಡುತ್ತಿರುವ ಸಂಕಷ್ಟಗಳು ಹಾಗೂ ಶಾಲೆಯಲ್ಲಿದ್ದಿದ್ದರೆ ಸಾಧ್ಯವಾದ ಮಟ್ಟದಲ್ಲಿ ಅವರ ಬೆಂಬಲಕ್ಕೆ ನಾವು ನಿಂತ ಬಗೆಯನ್ನು ಇಲ್ಲಿ ಹೇಳಿದ್ದೇವೆ.

## ಸವಾಲಿನ ಪರಿಸ್ಥಿತಿಗಳಲ್ಲಿ ಮಕ್ಕಳು

ಮೇಹಕ್, ಒಂಬತ್ತು ವರ್ಷದ ಹುಡುಗಿ. ಪೌರಕಾರ್ಮಿಕರಾಗಿರುವ ಅವಳ ತಂದೆ ಬಹುತೇಕ ಒಂದು ವರ್ಷದವರೆಗೂ ನಿರುದ್ಯೋಗಿಯಾಗಿ ಉಳಿದಿದ್ದರು. ಕೆಲವು ತಿಂಗಳ ಮಟ್ಟಿಗೆ ಅವರು ತಮ್ಮ ಕುಟುಂಬದೊಂದಿಗೆ ಹಳ್ಳಿಗೆ ಹೋಗಿ ನೆಲೆಸಿದರು. ಆದರೆ ಹಳ್ಳಿಯಲ್ಲಿಯೂ ಗದ್ದೆ/ತೋಟದ ಕೆಲಸವಿಲ್ಲದೆ ದೀರ್ಘ ಕಾಲ ಇಡೀ ಕುಟುಂಬದ ನಿರ್ವಹಣೆ ಕಷ್ಟವಾಯಿತು.ನಗರದಲ್ಲಿ ಕನಿಷ್ಠ ಪಕ್ಷ ಯಾವುದಾದರೊಂದು ಕೆಲಸ ಸಿಗುತ್ತದೆ ಎಂದು ಅವರು ಹಳ್ಳಿಯಿಂದ ವಾಪಸ್ ಬಂದರು. ಈಗ ಅವರಿಗೆ ಪ್ರತಿದಿನವೂ ಪ್ರತಿಯೊಂದರ ಅಭಾವ ಎದುರಾಯಿತು. ಆಹಾರ ಸಾಮಗ್ರಿಗಳಿಗಾಗಿ ಸಾಲ ತೆಗೆದುಕೊಂಡಿದ್ದಾಯಿತು. ಅಪರೂಪಕ್ಕೊಮ್ಮೆ ಕೆಲಸ ಸಿಕ್ಕಿದರೂ, ಮನೆಯಲ್ಲಿ ಪ್ರತಿಕ್ಷಣವೂ ಅನಿಶ್ಚಿತತೆ ಮತ್ತು ಚಿಂತೆ ಆವರಿಸಿಕೊಂಡಿರುತ್ತಿತ್ತು.

ಶಾಲೆ ಪುನರಾರಂಭವಾದಾಗ, ಮೇಹಕ್ ಶಾಲೆಗೆ ಬಂದರೂ ತುಂಬಾ ಭಯಪಟ್ಟುಕೊಂಡಿದ್ದಳು. ಹಿಂದಿನಂತೆ ಎಲ್ಲರೊಂದಿಗೆ ಬೆರೆಯುವುದು, ಆಟವಾಡುವುದು, ತಮಾಷೆ ಮಾಡುವುದು ಕಾಣಲಿಲ್ಲ. ಆಕೆಯ ಜೊತೆಗೆ ಮಾತನಾಡುವ ಅಗತ್ಯವಿದೆ ಎಂದು ಅರಿತುಕೊಂಡೆವು. ಬೆಳಗಿನ 'ಸಂಗೀತ ಸಭಾ ದಲ್ಲಿ ಅವಳು ಕೆಲಕಾಲ ಹಾಡುವುದನ್ನು ಮುಂದುವರಿಸಿದರೂ, ಅವಳ ಮುಖ ಕಳೆಗುಂದಿತ್ತು. ನಾವು ಮೂವರು ಶಿಕ್ಷಕರು ನಮ್ಮಲ್ಲೇ ಮೂರು ಜವಾಬ್ದಾರಿಗಳನ್ನು ಹಂಚಿಕೊಂಡೆವು – ನಾನು ಆಟದ ಅವಧಿಯಲ್ಲಿ ಮೇಹಕ್ ಜೊತೆ ಮಾತನಾಡಿ, ಅವಳ ಯೋಚನೆಗಳು ಮತ್ತು ಭಾವನೆಗಳನ್ನು ತಿಳಿದುಕೊಳ್ಳುವುದು, ಮತ್ತೊಬ್ಬ ಶಿಕ್ಷಕ ಅಂಕಿತ್, ಅವಳೊಂದಿಗೆ ಕುಳಿತು ಆಹಾರ ಸೇವಿಸುವುದು ಮತ್ತು ಮೂರನೆಯ ಶಿಕ್ಷಕಿ ಸೋನಮ್, ತರಗತಿಯಲ್ಲಿ ಮೇಹಕ್ ಹೆಚ್ಚು ಹೆಚ್ಚು ತೊಡಗಿಸಿಕೊಂಡು, ಬೆರೆಯುವಂತೆ ಆಕೆಗೆ ನೆರವಾಗುವುದು – ಎಂದು ಜವಾಬ್ದಾರಿ ಹಂಚಿಕೊಂಡೆವು. ನಮ್ಮ ಶಾಲೆಯಲ್ಲಿ ಪ್ರತಿದಿನವೂ, ನಾವು ಪ್ರತಿಯೊಬ್ಬ ಮಗುವಿನ ಬಗ್ಗೆ ಚರ್ಚಿಸಲು ಮತ್ತು ಆ ದಿನ ಪ್ರತಿ ತರಗತಿಯ ಚಟುವಟಿಕೆಗಳ ಬಗ್ಗೆ ಚರ್ಚಿಸಲು ಒಂದು ಸಣ್ಣ ಸಭೆ

ಮಾಡುತ್ತಿದ್ದೆವು. ಅದನ್ನು ನಾವು ಪ್ರತಿದಿನವೂ ದಾಖಲಿಸಿ–ಕೊಳ್ಳುತ್ತಿದ್ದೆವು. ಮೇಹಕ್ ಜೊತೆ ಮಾತನಾಡುವಾಗ, ಅವಳ ಮನೆಯಲ್ಲಿ ಹಿಂದಿನ ರಾತ್ರಿ ಯಾರೂ ಏನೂ ತಿಂದಿರಲಿಲ್ಲ ಎಂದು ತಿಳಿಯಿತು. ಸಾಕಷ್ಟು ಹಣ ಇರಲಿಲ್ಲವಂತೆ. ಮೈದಾನದಲ್ಲಿ ನಡೆದಾಡುತ್ತಾ ನಾನು ಅವಳೊಂದಿಗೆ ಮಾತನಾಡುತ್ತಿದ್ದೆ. ನಾನು ಸಣ್ಣವಳಿರುವಾಗ ನಮ್ಮ ಮನೆಯಲ್ಲಿದ್ದ ಪರಿಸ್ಥಿತಿಯನ್ನು ಅವಳೊಂದಿಗೆ ಹಂಚಿಕೊಂಡೆ. ಅಲ್ಲದೆ, ಕೆಟ್ಟ ದಿನಗಳು ಕಳೆದುಹೋಗುತ್ತವೆ ಎಂದೂ ಆಕೆಗೆ ವಿವರಿಸಿದೆ. ಅವಳು ತನ್ನ ಅಜ್ಜ–ಅಜ್ಜಿ ನಡುವಿನ ಜಗಳದ ಬಗ್ಗೆ ಹೇಳಿದಳು. ನಾನು ಸಣ್ಣವಳಿರುವಾಗ ಹೊಸ ಬಟ್ಟೆ ಖರೀದಿಗೆ, ಶಾಲಾ ಶುಲ್ಕ ತುಂಬಲೂ ದುಡ್ಡು ಇರದೇ ಇದ್ದ ಪರಿಸ್ಥಿತಿಯನ್ನು ವಿವರಿಸಿದೆ. ನಾವು ಪ್ರತಿದಿನವೂ ಮಕ್ಕಳ ಜೊತೆ ಮಾತನಾಡಿದೆವು. ಅಂಕಿತ್ ಅವರು ಹಲವು ಬಾರಿ ಮಕ್ಕಳ ಜೊತೆಗೇ ಬೆಳಗ್ಗಿನ ಉಪಾಹಾರವನ್ನು ಸೇವಿಸುತ್ತಿದ್ದರು. ಮಕ್ಕಳನ್ನೆಲ್ಲ ಒಟ್ಟಾಗಿ ಸೇರಿಸಿ ಆಹಾರವನ್ನು ಗುಡ್ಡೆ ಹಾಕಿಕೊಂಡು ಪರಸ್ಪರ ಹಂಚಿಕೊಂಡು ಸೇವಿಸುತ್ತಿದ್ದೆವು. ಮೇಹಕ್, ಹಕ್ಕಿಗಳು ಮತ್ತು ಹೂವುಗಳ ಕುರಿತು ತರಗತಿಯಲ್ಲಿ ಪದ್ಯ ರಚಿಸಿರುವುದಾಗಿ ಸೋನಮ್ ಹೇಳಿದರು. ಆ ಪದ್ಯದ ಕುರಿತು ಒಂದು ಭಿತ್ತಿಚಿತ್ರ ಸಿದ್ಧಪಡಿಸಿ ತರಗತಿಯಲ್ಲಿ ಪ್ರದರ್ಶಿಸಿರುವುದಾಗಿಯೂ ಹೇಳಿದರು.

ಸುಮಾರು 15–20 ದಿನಗಳ ಈ ಯೋಜಿತ ಕಾರ್ಯದ ಬಳಿಕ, ಮೇಹಕ್ ಹಿಂದಿನಂತೆ ಉಲ್ಲಾಸದಿಂದ ಎಲ್ಲರೊಂದಿಗೆ ಬೆರೆಯುವುದನ್ನು ನಾವು ಕಂಡುಕೊಂಡೆವು. ಸಹಪಾಠಿ–ಗಳೊಂದಿಗೆ ಆಟೋಟದಲ್ಲಿ ಪಾಲ್ಗೊಂಡ ಆಕೆ, ತರಗತಿಯಲ್ಲಿಯೂ ಕ್ರಿಯಾಶೀಲವಾಗಿ ತೊಡಗಿಸಿಕೊಂಡಳು.

ಮೇಹಕ್ ಕೇವಲ ಆರು ಗಂಟೆ ಶಾಲೆಯಲ್ಲಿ ಕಳೆದರೆ, ಉಳಿದ 18 ಗಂಟೆ ಅವಳು ಮನೆಯಲ್ಲಿ, ತನ್ನ ಕುಟುಂಬದೊಂದಿಗೆ ಅದೇ ಕಠಿಣ ಪರಿಸ್ಥಿತಿಯಲ್ಲಿ ಕಳೆಯಬೇಕು ಎಂಬುದು ನಮಗೆ ತಿಳಿದಿತ್ತು. ಆದರೂ, ಆ ಆರು ಗಂಟೆಗಳ ಭಾವನಾತ್ಮಕ ಪ್ರಯೋಜನವನ್ನು ಆಕೆ ಪಡೆಯಲು ಮತ್ತು ಮಕ್ಕಳು ಕಳೆದುಕೊಂಡ ಆತ್ಮವಿಶ್ವಾಸವನ್ನು ಮರಳಿ ಗಳಿಸಲು, ದೊಡ್ಡದಾದ ಸಮಾಜದ ಭಾಗವಾಗಿ ತಮ್ಮನ್ನು ತಾವು ಕಂಡುಕೊಳ್ಳಲು ಅವರಿಗೆ ನೆರವಾಗಬೇಕು ಹಾಗೂ ನಾವು ಅವರ ಬಗ್ಗೆ ತಿಳಿದವರಾಗಿಯೂ, ಸಂವೇದನಾಶೀಲರಾಗಿಯೂ ಇರಬೇಕಾಗುತ್ತದೆ. ಮೇಹಕ್ ಬದುಕಿನಲ್ಲಿ ನೇರವಾದ ಅಥವಾ ಶಾಶ್ವತವಾದ ಯಾವುದೇ ಬದಲಾವಣೆಯನ್ನು ನಾವು ಮಾಡದೇ ಇರಬಹುದು. ಆದರೆ, ಒಬ್ಬ ವ್ಯಕ್ತಿಯಾಗಿ ಆಕೆ ತನ್ನ ಬಗ್ಗೆ ಕಾಳಜಿ ವಹಿಸುವಂತೆಯೂ, ಕಠಿಣ ಪರಿಸ್ಥಿತಿಯಿಂದ ಹೊರಬರುವಂತೆಯೂ ಖಂಡಿತಾ ನೆರವಾಗ–ಬಲ್ಲೆವು. 13 ವರ್ಷದ ರೋಶ್ನಿ, ಜಾರ್ಖಂಡ್ನಿಂದ ಭೋಪಾಲ್ಗೆ ಬಂದಿದ್ದಳು. ಆಕೆ ನಮ್ಮ ಶಾಲೆಗೆ ಸೇರಿ ಮೂರು ವರ್ಷಗಳಾಗಿದ್ದವು. ಪೇಂಟರ್ ಆಗಿರುವ ಅವಳ ತಂದೆ ಮರು ಮದುವೆಯಾಗಿದ್ದರು. ಶಾಲೆ ಪುನರಾರಂಭವಾದಾಗ ನೋಡಿದರೆ, ರೋಶ್ನಿ ತುಂಬಾ ಕೃಶವಾಗಿದ್ದಳು. ಅವಳೇನೂ ತುಂಬಾ ಆರೋಗ್ಯವಂತೆಯಾಗಿರಲಿಲ್ಲವಾದರೂ, ಈಗ, ಅವರ ಹಳ್ಳಿಗೆ ಪದೇಪದೇ ಹೋಗಿ ಬರುತ್ತಿದ್ದುದರಿಂದ, ಅಲ್ಲಿ ಆಹಾರದ ಅಭಾವ, ಮರಳಿ ಬಂದು ಮನೆಗೆ ಬೀಗ ಹಾಕಿಕೊಂಡು ಒಳಗೇ ಇರುವುದು, ಶಾಲೆಯಿಂದ ದೂರ ಉಳಿದಿರುವುದು... ಮುಂತಾದ ಕಾರಣಗಳಿಂದಾಗಿ ಅವಳ ಆರೋಗ್ಯ ಹದಗೆಟ್ಟಿತ್ತು. ಶಾಲೆಯಲ್ಲಿ ಬಿಸಿ ಮತ್ತು ತಾಜಾ ಊಟ ಸಿಗುತ್ತಿದ್ದುದು ಆಕೆಗೆ ಬಹಳ ದೊಡ್ಡ ಸಂಗತಿಯಾಗಿತ್ತು. ಶಾಲೆ ಶುರುವಾದ ಮೇಲೆ ಆಕೆಯ ಆರೋಗ್ಯದಲ್ಲಿ ಸಾಕಷ್ಟು ಸುಧಾರಣೆಯಾಗಿದ್ದನ್ನು ನಾವು ಗಮನಿಸಿದೆವು. ದಿನಕ್ಕೊಂದು ಬಾರಿಯಾದರೂ ಆಕೆ ಉತ್ತಮ ಆಹಾರ ಸೇವಿಸಬೇಕಾದ ಅಗತ್ಯದ ಅರಿವು ನಮಗೆ ಆಯಿತು. ಹಿಂದೆ, ನಮಗೆ ಅಡುಗೆ ಮನೆ ನಿರ್ವಹಣೆಯಲ್ಲಿ ಹಲವಾರು ಪ್ರಾಯೋಗಿಕ ಸಮಸ್ಯೆಗಳು ಎದುರಾಗಿದ್ದರಿಂದ, ಅಡುಗೆ ಮನೆಯನ್ನು ಮುಚ್ಚಿ, ನಮ್ಮ ನಮ್ಮ ಆಹಾರವನ್ನು ನಾವೇ ತರುವುದೆಂದು ನಿರ್ಧರಿಸಿದ್ದೆವು. ಆದರೆ ಆ ಬಳಿಕ ನಾವು, ಕೆಲವು ಮಕ್ಕಳಿಗಾದರೂ ಮಧ್ಯಾಹ್ನದ ಬಿಸಿಯೂಟ ಭಾರೀ ಪ್ರಯೋಜನಕಾರಿಯಾದುದು ಮತ್ತು ನಾವು ಯಾವ ಕಾರಣಕ್ಕೂ ಅದನ್ನು ನಿಲ್ಲಿಸಬಾರದು ಎಂಬುದನ್ನು ಅರಿತುಕೊಂಡೆವು. ಹಲವಾರು ದಾನಿಗಳು ನೆರವಾಗಿದ್ದರಿಂದ ಊಟದ ವ್ಯವಸ್ಥೆ ಮುಂದುವರೆಯಿತು. ಆಹಾರದ ತೀವ್ರ ಅವಶ್ಯಕತೆ ಎದುರಿಸುತ್ತಿದ್ದ ರೋಶ್ನಿ, ಈ ಸೌಲಭ್ಯದ ಪ್ರಮುಖ ಫಲಾನುಭವಿಯಾಗಿದ್ದಳು. ರೋಶ್ನಿ ಭೋಜ್ಪುರಿಯಲ್ಲಿ ಮಾತ್ರ ಮಾತನಾಡಬಲ್ಲವಳಾಗಿದ್ದಳು. ನಾವು ಅಷ್ಟಿಷ್ಟು ಭೋಜ್ಪುರಿ ಕಲಿತು ಆಕೆಯೊಂದಿಗೆ ಮಾತನಾಡುತ್ತಿದ್ದೆವು. ಅವಳ ಸಹೋದರಿ ಅಂಕಿತಾ ಕೂಡಾ ಶಾಲೆಗೆ ಬರಲಾರಂಭಿಸಿದಳು. ಇಬ್ಬರಿಗೂ ಹೆಚ್ಚು ಕಡಿಮೆ ಒಂದೇ ವಯಸ್ಸು. ಸಹೋದರಿಯರಿಗಿಂತ ಹೆಚ್ಚಾಗಿ ಅವರಿಬ್ಬರು ಗೆಳತಿಯರಂತೆ ಇದ್ದರು. ಆದರೆ ಮನೆಯ ವಾತಾವರಣ ಅವರಿಗೆ ಪೂರಕವಾಗಿರಲಿಲ್ಲ. ಅವರಿಗೆ ಒಬ್ಬ ಮಲಸಹೋದರನೂ ಇದ್ದ. ತಂದೆ ತಾಯಿ ಹೊರಗೆ ಕೆಲಸಕ್ಕೆ ಹೋದಾಗ ಹೆಚ್ಚಿನ ಅವಧಿ ಇವರಿಬ್ಬರೂ ಅವನೊಂದಿಗೆ ಕಾಲ ಕಳೆಯಬೇಕಾಗಿತ್ತು. ಅಲ್ಲದೆ, ಅವರಿಬ್ಬರೂ ನಿಯಮಿತವಾಗಿ ಶಾಲೆಗೆ ಬರುತ್ತಿದ್ದರೂ, ದೈನಂದಿನ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಆಗುತ್ತಿರಲಿಲ್ಲ. ಅವರು ಎಲ್ಲವನ್ನೂ ಯಾಂತ್ರಿಕವಾಗಿ ಮಾಡುತ್ತಿದ್ದಂತೆ ಕಾಣುತ್ತಿತ್ತು. ನಮ್ಮ ದೈನಿಕ ಸಭೆಯಲ್ಲಿ ನಾವು ಈ ಸಮಸ್ಯೆಯನ್ನು ಚರ್ಚಿಸಿದೆವು. ಅವರು ಮನೆಗೆಲಸಗಳನ್ನು ಮಾಡಿದರೂ ಅವರಿಗೆ ಮನೆಯಲ್ಲಿ ಬೆಲೆಯೂ ಸಿಗುತ್ತಿರಲಿಲ್ಲ, ಯಾರೂ ಅದರ ಮಹತ್ವವನ್ನು ಅರ್ಥ ಮಾಡಿಕೊಳ್ಳುತ್ತಲೂ ಇರಲಿಲ್ಲ ಎಂಬುದನ್ನು ತಿಳಿದುಕೊಂಡೆವು. ಆ ಸಮಯದಲ್ಲಿ, ನಾವು 'ಉಮಾಂಗ್ ಕ್ರೀಡೋತ್ಸವ ವನ್ನು ಶಾಲೆಯಲ್ಲಿ ಆಯೋಜಿಸಿ, ಇಡೀ ಕ್ರೀಡೋತ್ಸವವನ್ನು ಸಂಘಟಿಸುವ ಜವಾಬ್ದಾರಿಯನ್ನು ಇನ್ನೂ ಇಬ್ಬರು ಮಕ್ಕಳ ಜೊತೆ ರೋಶ್ನಿ ಮತ್ತು ಅಂಕಿತಾಗೆ ವಹಿಸಿದೆವು. ಗಣಿತ ಶಿಕ್ಷಕರಾದ ಅಂಕಿತ್, ಅವರ ತಂಡದಲ್ಲಿದ್ದರು. ಆಗ ಒಂದು ಪವಾಡವೇ ನಡೆಯಿತು!. ಅಂಕಿತಾ ಮತ್ತು ರೋಶ್ನಿ ಪ್ರತಿದಿನದ ಚಟುವಟಿಕೆಗಳ ಬಗ್ಗೆ ನಮ್ಮೊಂದಿಗೆ ಸೇರಿ ಯೋಜಿಸಿದರು. ಮಕ್ಕಳ ತಂಡವನ್ನು ಆರಿಸುತ್ತಾ, ಬೇಕಾಗುವ ಸಾಮಗ್ರಿಗಳ ಪಟ್ಟಿ ತಯಾರಿಸುತ್ತಾ, ಈ ಎಲ್ಲದರ ಲೆಕ್ಕಪತ್ರಗಳನ್ನು ನಿರ್ವಹಿಸಿದರು. ಮೂರು ದಿನಗಳ ಕಾರ್ಯಕ್ರಮದಲ್ಲಿ ಪ್ರತಿದಿನದ ವರದಿಯನ್ನು ಇಬ್ಬರೂ ಸೇರಿ ಬರೆದರು. ಬೆಳಗಿನ ಸಂಗೀತ ಸಭಾದಲ್ಲಿ ರೋಶ್ನಿ

ಮತ್ತು ಅಂಕಿತಾರನ್ನು ಅಭಿನಂದಿಸಿದೆವು. ಅಂಕಿತಾ ಮತ್ತು ರೋಶ್ನಿಯ ಹೆತ್ತವರು ಹೊರಗೆ ಕೆಲಸಕ್ಕೆ ಹೋಗುವಾಗ, ಸಹೋದರರ ಜವಾಬ್ದಾರಿಯ ಜತೆಗೆ ಮನೆಗೆಲಸಗಳನ್ನು ನಿಭಾಯಿಸಿ, ಪ್ರತಿನಿತ್ಯ ಅವರು ಶಾಲೆಗೆ ಬಂದಿದ್ದಾರೆ ಹಾಗೂ ಕಾರ್ಯಕ್ರಮದ ಜವಾಬ್ದಾರಿಯನ್ನೂ ನಿರ್ವಹಿಸಿದ್ದಾರೆ ಎಂದು ಸಂಗೀತ ಸಭಾದಲ್ಲಿ ಎಲ್ಲಾ ಮಕ್ಕಳಿಗೆ ವಿವರಿಸಿದೆವು. ಎಲ್ಲರೂ ಅವರನ್ನು ಮೆಚ್ಚಿ ಚಪ್ಪಾಳೆ ತಟ್ಟಿದರು. ಶಾಲೆಯ ಪರವಾಗಿ ನಮಿತಾ ಅವರಿಬ್ಬರಿಗೂ ಒಂದೊಂದು ಕತೆ ಪುಸ್ತಕವನ್ನು ನೀಡಿದರು. ಮುಂದಿನ ದಿನಗಳಲ್ಲಿ ಅಂಕಿತಾ ಹಿಂದಿಯಲ್ಲಿ ಹಿಡಿತ ಸಾಧಿಸಿದರೆ, ರೋಶ್ನಿ ಗಣಿತದಲ್ಲಿ ಚೆನ್ನಾಗಿದ್ದಳು. ಮುಂದಿನ ವರ್ಷ ಅವರು ಒಂಬತ್ತನೇ ತರಗತಿಗೆ ಹೋಗುತ್ತಾರೆ. ಅವರು ನಮ್ಮ ಶಾಲೆ ಬಿಡುತ್ತಾರೆ ಎಂಬುದೇ ನಮಗೆ ಬೇಸರದ ಸಂಗತಿ.

ಗೋಪಾಲ್, 12ರ ಹರೆಯದವನು. ಸಮೀಪದ ಗುಡಿಸಲಿನಲ್ಲಿ ತನ್ನ ಅಜ್ಜಿ ತಾತನ ಜೊತೆ ಅವನು ವಾಸಿಸುತ್ತಾನೆ. ಅವನು ತನ್ನ ತಾತನೊಂದಿಗೆ ನಾಲ್ಕು ಎಮ್ಮೆಗಳನ್ನು ಸಾಕಿಕೊಂಡು ಸಣ್ಣದೊಂದು ಹಾಲಿನ ಡೈರಿಯನ್ನು ನಡೆಸುತ್ತಿದ್ದಾನೆ. ಪ್ರತಿದಿನ ಬೆಳಗ್ಗೆ ಬೇಗನೆ ಎದ್ದು ಎಮ್ಮೆಗಳಿಗೆ ಆಹಾರ ಕೊಟ್ಟು, ಸೈಕಲ್ನಲ್ಲಿ ಹೋಗಿ ಹಾಲು ಸರಬರಾಜು ಮಾಡಿ, ಶಾಲೆಗೆ ಹಾಜರಾಗುತ್ತಾನೆ. ಅವನ ಹೆತ್ತವರು ಹಳ್ಳಿಯಲ್ಲಿದ್ದು, ಬಹುಶಃ ಅವರ ನಡುವೆ ಏನೋ ಕೌಟುಂಬಿಕ ಕಲಹ ಆಗಿರಬೇಕು. ಹಾಗಾಗಿ ಅವರು ಗೋಪಾಲನನ್ನಾಗಲೀ, ಗೋಪಾಲ್ ಅವರನ್ನಾಗಲೀ ಪರಸ್ಪರ ಭೇಟಿಯಾಗುವುದಿಲ್ಲ. ಆದ್ದರಿಂದ ಅವನ ಅಜ್ಜ ಅಜ್ಜಿಯೇ ಅವನಿಗೆ ಸರ್ವಸ್ವವಾಗಿದ್ದರು. ಆದರೆ, ಅವನ ತಾತ ಕೋವಿಡ್ ಸಮಯದಲ್ಲಿ ಸಾವಿಗೀಡಾದರು. ಅದು ಗೋಪಾಲ್ಗೆ ತೀರಾ ದುಸ್ತರವಾದ ಸಮಯವಾಗಿತ್ತು. ಶಾಲೆಯೂ ಮುಚ್ಚಿತ್ತು. ಆದರೆ ಕ್ರೀಡಾ ಶಿಕ್ಷಕ ವಿಜಯ್ ಮತ್ತು ನಾನು ಗೋಪಾಲ್ನನ್ನು ನಿಯಮಿತವಾಗಿ ಭೇಟಿಯಾಗುತ್ತಿದ್ದೆವು. ಶಾಲೆ ಪುನರಾರಂಭ–ವಾದಾಗ, ಅವನು ಮನೆಗೆಲಸ ಮತ್ತು ಡೈರಿ ಕೆಲಸಗಳನ್ನು ಮುಗಿಸಿ ಶಾಲೆಗೆ ಬರಲಾರಂಭಿಸಿದ. ಅವನಿಗೆ 'ಶಾಲಾ ಕುಟುಂಬ'ದ ಅಗತ್ಯತೆ ತುಂಬಾ ಇತ್ತು. ನಮಗೂ ಹಾಗೇ ಅನಿಸಿತು. ಒಂದು ದಿನ ನಾವು ಶಾಲೆಯ ಎಲ್ಲಾ ಮಕ್ಕಳನ್ನು ಕರೆದುಕೊಂಡು ಅವನ ಡೈರಿಗೆ ಭೇಟಿ ನೀಡಿದೆವು. ಶಾಲೆಯಿಂದ ಕೊಂಡೊಯ್ದಿದ್ದ ಆಹಾರವನ್ನು ನಾವೆಲ್ಲರೂ ಅಲ್ಲಿಯೇ ಸೇವಿಸಿದೆವು. ಅವನ ಅಜ್ಜಿ ಭಾವುಕರಾಗಿ ಅಳಲಾರಂಭಿಸಿದರು. ಆಕೆಯ ಗಂಟಲಿನಲ್ಲಿ ದೊಡ್ಡ ಗಾತ್ರದ ಗೆಡ್ಡೆ ಆಗಿತ್ತು. ಆಕೆ ಬುಂದೇಲಿಯಲ್ಲಿ, 'ಗೋಪಾಲ ಅನಾಥ ಅಲ್ಲ. ಶಾಲೆಯೇ ಅವನ ಕುಟುಂಬ' ಎಂದು ಹೇಳಿದರು. ಎಲ್ಲಾ ಮಕ್ಕಳಿಗೂ ಆಕೆ ಬೆಲ್ಲ ನೀಡಿದರು.

ಗೋಪಾಲನ ಕುಟುಂಬವನ್ನು ಅವನಿಗೆ ಕೊಡಿಸಲು ಯಾರಾದರೂ ಏನು ಮಾಡಲು ಸಾಧ್ಯ? ಶಾಲೆಯೇ ಅವನ ಜತೆಗಿದ್ದು, ಕಾಳಜಿ ವಹಿಸಿದರೆ ಅವನಿಗೆ ಸಾಕು. ಗೋಪಾಲ ಶಾಲೆಗೂ ಹಾಲು ಸರಬರಾಜು ಮಾಡುತ್ತಿದ್ದ. ಅದುವೇ ಅವನ ಜೀವನೋಪಾಯದ ದಾರಿಯಾಗಿದ್ದುದರಿಂದ ಅದರ ಲೆಕ್ಕವನ್ನು ಬರೆದಿಡುತ್ತಿದ್ದ. ಆದರೆ, ಅವನು ಕೆಲವೊಮ್ಮೆ ಮಜ್ಜಿಗೆಯನ್ನು ಉಚಿತವಾಗಿ ನೀಡುತ್ತಿದ್ದ. ಶಾಲೆಯ ಪಾಕಶಾಲೆಯಲ್ಲಿ ಪದಾರ್ಥವನ್ನು ತಯಾರಿಸಲಾಗುತ್ತಿತ್ತು. ಎಲ್ಲರೂ ಸಂತೋಷದಿಂದ ಊಟ ಮಾಡುತ್ತಿದ್ದರು. 'ಆನಂದ್ ನಿಕೇತನ್'ನಲ್ಲಿ ನಮ್ಮ ಬೆಳಗಿನ ಅಧಿವೇಶನವು ಹಾಡು ಮತ್ತು ಸಂಗೀತದಿಂದ ಕೂಡಿದ್ದು, ಎಲ್ಲಾ ಮಕ್ಕಳು ಖುಷಿಯಾಗಿ, ಮುಕ್ತವಾಗಿ ಮತ್ತು ಕಡ್ಡಾಯವಾಗಿ ಪಾಲ್ಗೊಳ್ಳುತ್ತಿದ್ದರು. ಪ್ರತಿದಿನವೂ ನಡೆಯುತ್ತಿದ್ದ ವೇದಿಕೆ ಅಧಿವೇಶನವು ಮಕ್ಕಳಿಗೆ ತಮ್ಮ ದೃಷ್ಟಿಕೋನಗಳನ್ನು ಹಂಚಿಕೊಳ್ಳಲು ಮುಕ್ತ ಅವಕಾಶ ಕೊಡುತ್ತಿದ್ದುದರಿಂದ ಭಾರೀ ಯಶಸ್ಸು ಕಂಡಿತು. ಈ ಚಟುವಟಿಕೆಯಿಂದಾಗಿ ಮಕ್ಕಳ ಯೋಚನಾಶಕ್ತಿಯನ್ನು ಮತ್ತು ಅವರ ಖಾಸಗಿ ಬದುಕಿನ ಅನೇಕ ಸಂಗತಿಗಳನ್ನು ತಿಳಿದುಕೊಳ್ಳುವ ಅವಕಾಶ ಶಿಕ್ಷಕರಿಗೆ ಸಿಕ್ಕಿದಂತಾಗುತ್ತಿತ್ತು. ಶಿಕ್ಷಕರೂ ತಮ್ಮ ಯೋಚನೆಗಳನ್ನು ಹಂಚಿಕೊಳ್ಳುವ ಮೂಲಕ ಇಡೀ ಪ್ರಕ್ರಿಯೆಯಲ್ಲಿ ಸಮಾನತೆಯ ವಾತಾವರಣವನ್ನು ನಿರ್ಮಿಸುತ್ತಿದ್ದರು. ಇದರಿಂದಾಗಿ, ತಮ್ಮ ಶಿಕ್ಷಕರೂ ತಮ್ಮಂತೆಯೇ ಸಾಧಾರಣ ಬದುಕನ್ನು ಬದುಕುತ್ತಿದ್ದಾರೆ ಎಂಬ ಭಾವನೆ ಬಂದು ಮಕ್ಕಳಿಗೆ ನಿರಾಳವಾಗುತ್ತಿತ್ತು. ಅವರಿಗೂ ನಮ್ಮಂತೆ ಹೆದರಿಕೆಗಳು, ಉದ್ವಿಗ್ನತೆಗಳು, ಅಭಾವಗಳು ಇವೆ; ನಾವು ಪರಸ್ಪರರಿಗೆ ಭಾವನಾತ್ಮಕ ಬೆಂಬಲವನ್ನು ನೀಡಬಹುದು ಎಂದು ಮಕ್ಕಳಿಗೆ ಅನಿಸಲಾರಂಭಿಸಿತು. ಶಾಲೆಯಲ್ಲಿನ ಈ ವಾತಾವರಣ ಮತ್ತು ಪ್ರಕ್ರಿಯೆಗಳು ಮೇಹಕ್, ರೋಶ್ನಿ, ಅಂಕಿತಾ ಮತ್ತು ಗೋಪಾಲ್ನಂತಹ ಮಕ್ಕಳಿಗೆ ಮಹತ್ತರವಾಗಿ ಸಹಕಾರಿಯಾಯಿತು ಎಂದು ಅವರ ಪ್ರಕರಣಗಳಲ್ಲಿ ಸ್ಪಷ್ಟವಾಗಿದೆ.

*ಮಕ್ಕಳ ಸುರಕ್ಷತೆಯ ಹಿನ್ನೆಲೆಯಲ್ಲಿ ಅವರ ಹೆಸರುಗಳನ್ನು ಬದಲಿಸಲಾಗಿದೆ.



**ಅನಿಲ್ ಸಿಂಗ್,** ಕಳೆದ 15 ವರ್ಷಗಳಿಂದ ಶಿಕ್ಷಣ ಕ್ಷೇತ್ರದಲ್ಲಿ ವಿಶೇಷವಾಗಿ, ಶಾಲಾ ಶಿಕ್ಷಣ ಕ್ಷೇತ್ರದಲ್ಲಿ ಕ್ರಿಯಾಶೀಲರಾಗಿದ್ದಾರೆ. ಹಿಂದಿ ಭಾಷೆ ಮತ್ತು ಸಮಾಜ ವಿಜ್ಞಾನವನ್ನು ಬೋಧಿಸುವ ಜೊತೆಗೆ, ಅವರು ವಿದ್ಯಾರ್ಥಿಗಳಿಗೆ ರಂಗ ಶಿಕ್ಷಣವನ್ನೂ ಪ್ರತಿದಿನ ಹೇಳಿಕೊಡುತ್ತಾರೆ. ಕತೆ ಹೇಳುವುದರಲ್ಲಿ ಅವರಿಗೆ ವಿಶೇಷ ಆಸಕ್ತಿ. ತರಗತಿಕೊಠಡಿಯ ಅವರ ಅನುಭವಗಳು ಮತ್ತು ಶಿಕ್ಷಣ ಕ್ಷೇತ್ರದ ಸಮಸ್ಯೆಗಳಿಗೆ ಸಂಬಂಧಿಸಿದ ಅವರ ಇತರ ಲೇಖನಗಳು ನಿಯಮಿತವಾಗಿ ಪ್ರಕಟವಾಗುತ್ತಿರುತ್ತವೆ. ಭೋಪಾಲದ ಆನಂದ್ ನಿಕೇತನ್ ಡೆಮಾಕ್ರಟಿಕ್ ಸ್ಕೂಲ್‌ನಲ್ಲಿ ರೂಢಿಯಲ್ಲಿರುವ ಶಿಕ್ಷಣದ ಪರ್ಯಾಯ ಮಾದರಿಗೂ ಅವರಿಗೂ ನಂಟು ಇದೆ. ಪ್ರಸ್ತುತ, ಅವರು ಪರಾಗ್‌ನಲ್ಲಿ ವೃತ್ತಿಪರ ಅಭಿವೃದ್ಧಿ ಉಪಕ್ರಮಗಳಲ್ಲಿ ಬೋಧಕ ಸಿಬ್ಬಂದಿಯಾಗಿದ್ದಾರೆ. ಅವರನ್ನು bihuanandanil@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ರೋಹಿಣಿ ಮುಂಡಾಜೆ** | ಪರಿಶೀಲನೆ: **ಲತಾ ಕೆ.ಸಿ.**

# ಸಂಘರ್ಷ ಪರಿಹಾರಕ್ಕಾಗಿ ಸಮಾಜೋ-ಭಾವನಾತ್ಮಕ ಕೌಶಲಗಳು

ಅನುಜಾ ವೆಂಕಟರಮಣ್

ತರಗತಿಗಳಲ್ಲಿ ಶಿಕ್ಷಕರು ಮಕ್ಕಳಿಂದ ಹಲವಾರು ನಿರೀಕ್ಷೆಗಳನ್ನು ಹೊಂದಿರುತ್ತಾರೆ. ಆಸಕ್ತಿದಾಯಕವಾದ ಸನ್ನಿವೇಶಗಳು ಏನಾದರೂ ಸಂಭವಿಸಿದಾಗ ಅವರು ಅತಿಯಾಗಿ ಉತ್ಸುಕರಾಗ-ಬಾರದು ಮತ್ತು ಕಿರುಚಬಾರದು ಎಂದು ನಿರೀಕ್ಷಿಸುವುದು ಕೂಡ ಇವುಗಳಲ್ಲಿ ಸೇರಿವೆ; ಅವನನ್ನು ಹೊಡೆದನೆಂಬ ಕಾರಣಕ್ಕೆ ಸ್ನೇಹಿತನೊಂದಿಗೆ ಕೋಪಗೊಳ್ಳಬಾರದು, ಅವನು ಸಹ ತಿರುಗಿಸಿ ಹೊಡೆದು ಪರಿಸ್ಥಿತಿಯನ್ನು ಮತ್ತಷ್ಟು ಉಲ್ಬಣಗೊಳಸಬಾರದು; ಅಗತ್ಯವಿದ್ದರೆ ಶಾಲಾ ಲೇಖನ ಸಾಮಗ್ರಿಗಳು (ಸ್ಟೇಷನರಿ) ಅಥವಾ ಪುಸ್ತಕಗಳ ಬಗ್ಗೆ ಹೆಚ್ಚು ಸ್ವಾಮ್ಯತೆಯನ್ನು ತೋರಿಸದೆ ಅಗತ್ಯವಿದ್ದರೆ ಅವುಗಳನ್ನು ಹಂಚಿಕೊಳ್ಳಬೇಕು; ಶಾಲಾ ಪ್ರವಾಸದಲ್ಲಿ ಬಸ್‌ನಲ್ಲಿ ಶಿಕ್ಷಕರ ಪಕ್ಕದಲ್ಲಿ ಯಾರು ಕುಳಿತುಕೊಳ್ಳುತ್ತಾರೆ ಎಂಬುದರ ಕುರಿತು ಜಗಳವಾಡದಿರುವುದು ಅಥವಾ ಮುಂದಿನ ತರಗತಿಯಿಂದ ಯಾರು ಡಸ್ಟರ್ ಅನ್ನು ತೆಗೆದುಕೊಂಡು ಬರುತ್ತಾರೆ ಅಥವಾ ಮುಂದಿನ ಪ್ರಶ್ನೆಗೆ ಯಾರು ಉತ್ತರಿಸುತ್ತಾರೆ ಎಂಬುದರ ಕುರಿತು ವಾದಿಸದಿರುವುದು ಮತ್ತು ಅವರ ಸರದಿಗಾಗಿ ಕಾಯುವುದು – ಇತ್ಯಾದಿ ನಿರೀಕ್ಷೆಗಳನ್ನು ಶಿಕ್ಷಕರು ಮಕ್ಕಳಿಂದ ಬಯಸುತ್ತಾರೆ.

ವಯಸ್ಕರ ದೃಷ್ಟಿಕೋನದಿಂದ ಸಮಂಜಸವಾದ ನಿರೀಕ್ಷೆಗಳನ್ನು ಚಿಕ್ಕ ಮಕ್ಕಳಿಂದ ಬಯಸುವುದು ಕೆಲವೊಮ್ಮೆ ಬಹಳ ಸವಾಲಾಗಿ ತೋರುತ್ತದೆ. ಅನೇಕ ದೈನಂದಿನ ಸವಾಲುಗಳು ಬೌದ್ಧಿಕ ದೃಷ್ಟಿಕೋನವನ್ನು ಮಾತ್ರವಲ್ಲದೆ, ಅವು ಭಾವನಾತ್ಮಕ ಮತ್ತು ಸಾಮಾಜಿಕ ಸಂಬಂಧಗಳನ್ನು (emotional and social bearings) ಸಹ ಹೊಂದಿರುತ್ತವೆ.

ಸಂಘರ್ಷಗಳನ್ನು ಶಾಂತಿಯುತವಾಗಿ ನಿಭಾಯಿಸುವ ಸಾಮರ್ಥ್ಯ ಮತ್ತು ಮಗುವಿನ ಭಾವನಾತ್ಮಕ ಬುದ್ಧಿವಂತಿಕೆಯ (emotional Intelligence) ನಡುವಿನ ಸಂಪರ್ಕದ ಬಗ್ಗೆ ಕಲಿಯುವುದು ತುಂಬಾ ಉಪಯುಕ್ತವಾಗಿದೆ. ಇದು ಶಿಕ್ಷಕರಿಗೆ ತಮ್ಮದೇ ಆದ ನಿರೀಕ್ಷೆಗಳನ್ನು ನಿಭಾಯಿಸಲು ಸಹಾಯ ಮಾಡುತ್ತದೆ, ಜೊತೆಗೆ ವಿದ್ಯಾರ್ಥಿಗಳಿಗೆ ಏನನ್ನು ಮತ್ತು ಹೇಗೆ ಕಲಿಸಬೇಕೆಂಬುದರ ಕುರಿತು ಪೂರ್ವಸಿದ್ಧತೆ ಮಾಡಬಹುದಾಗಿದೆ. ಈ ಸಿದ್ಧತೆಯಿಂದಾಗಿ ವಿದ್ಯಾರ್ಥಿಗಳು ಕಲಿಯಬಹುದು, ಬೆಳೆಯಬಹುದು ಮತ್ತು ಇದರಲ್ಲಿನ ಕೆಲವು ನಿರೀಕ್ಷೆಗಳನ್ನು ಪೂರೈಸಬಹುದು. ಇದು ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಗೆ ಶಾಲೆಯಲ್ಲಿ ಸಂತೋಷದ ದಿನವನ್ನು ಕಳೆಯಲು ಸಹಾಯ ಮಾಡುತ್ತದೆ.

ವ್ಯಕ್ತಿಗತ ಬುದ್ಧಿಮತ್ತೆಯು (Intrapersonal intelligence) ನಾವು ನಮ್ಮ ಭಾವನೆಗಳನ್ನು ಹೇಗೆ ನಿಭಾಯಿಸುತ್ತೇವೆ ಎಂಬುದರ ಬಗ್ಗೆ, ಆದರೆ ಅಂತರವ್ಯಕ್ತಿಯ ಬುದ್ಧಿಶಕ್ತಿಯು (interpersonal intelligence) ಇತರರ ಭಾವನೆಗಳಿಗೆ ನಾವು ಹೇಗೆ ಪ್ರತಿಕ್ರಿಯಿಸುತ್ತೇವೆ ಎಂಬುದರ ಕುರಿತಾಗಿದೆ. ರಚನಾತ್ಮಕ, ಸಮಸ್ಯೆ-ಪರಿಹರಿಸುವ ರೀತಿಯಲ್ಲಿ ವರ್ತಿಸುವ ನಮ್ಮ ಸಾಮರ್ಥ್ಯವನ್ನು ನಿರ್ಣಯಿಸಲು ಇವೆರಡೂ ಮುಖ್ಯವಾಗಿದೆ.

## ಸಮಾಜೋ - ಭಾವನಾತ್ಮಕ ಕಲಿಕೆ

ಭಾವನೆಗಳ ಬಗ್ಗೆ ವಿದ್ಯಾರ್ಥಿಗಳಿಗೆ ಕಲಿಸುವುದು ಬಹಳ ಮೌಲ್ಯಯುತವೆನಿಸಬಹುದು. ಭಾವನಾತ್ಮಕ ಸಾಕ್ಷರತೆಯು (Emotional literacy) ಸ್ವಂತ ಭಾವನೆಗಳ ಬಗ್ಗೆ ತಿಳಿದಿರುವುದು, ಅವುಗಳನ್ನು ನಿರ್ವಹಿಸುವುದು, ಹಿನ್ನಡೆಗಳನ್ನು ಜಯಿಸಲು ಪ್ರೇರಣೆಯನ್ನು ಹೊಂದುವುದು, ಸಹಾನುಭೂತಿಯನ್ನು ಹೊಂದುವುದು ಮತ್ತು ಸಂವಹನ ಮತ್ತು ಸಂಘರ್ಷ ಪರಿಹಾರದಂತಹ ಸಾಮಾಜಿಕ ಕೌಶಲಗಳನ್ನು ಅಭಿವೃದ್ಧಿ-ಪಡಿಸುವುದನ್ನು ಒಳಗೊಂಡಿದೆ. ಸಾಮಾಜಿಕ-ಭಾವನಾತ್ಮಕ ಕಲಿಕೆಯು (Social-emotional learning) ಈ ಎಲ್ಲಾ ವಿಭಿನ್ನ ಅಂಶಗಳ ಬಗ್ಗೆ ಕಲಿಯಲು ವಿದ್ಯಾರ್ಥಿಗಳಿಗೆ ಸಹಾಯ ಮಾಡುವುದನ್ನು ಒಳಗೊಂಡಿರುತ್ತವೆ.

ಸ್ವಯಂ-ಅರಿವು ಎಂಬುದು ಮೂಲಭೂತವಾಗಿದ್ದು, ಅದರ ಹೊರತಾಗಿ ಬೇರೆ ಯಾವುದೇ ಭಾವನಾತ್ಮಕ ಕಲಿಕೆ ನಡೆಯದು. ಸ್ವಯಂ-ಅರಿವಿನ ನಂತರವೇ ನಮ್ಮ ಭಾವನೆಗಳನ್ನು ನಿಯಂತ್ರಿಸಲು ಸಾಧ್ಯ. ಹಿನ್ನಡೆಗಳನ್ನು ಎದುರಿಸುವಾಗ ಪ್ರೇರಣೆಗಳನ್ನು ಪಡೆದು ಮೊದಲಿನಂತೆಯೇ ಆಗುವುದು, ಇದನ್ನು ಸ್ಥಿತಿಸ್ಥಾಪಕತ್ವ (resilience) ಎಂದೂ ಕರೆಯ-ಲಾಗುತ್ತದೆ, ಇದು ಹತಾಶೆ, ಭಯ ಮತ್ತು ವೈಫಲ್ಯದ ಹೊರತಾಗಿಯೂ ನಮ್ಮನ್ನು ಮುಂದೆ ಸಾಗಿಸುತ್ತದೆ. ಪರಾನುಭೂತಿಯು (Empathy) ನಮ್ಮ ಭಾವನಾತ್ಮಕತೆಯಿಂದ ನಮ್ಮ ಸಾಮಾಜಿಕ ಸಾಮರ್ಥ್ಯಗಳವರೆಗಿನ ಸೇತುವೆಯಾಗಿದೆ (ಟ್ರಿಸಿಯಾ ಜೋನ್ಸ್, 2003) ಪರಾನುಭೂತಿಗೆ ಸ್ವಯಂ-ಅರಿವು ಮತ್ತು ಇತರ ವ್ಯಕ್ತಿಯ ಭಾವನೆಗಳು, ಅಗತ್ಯಗಳು ಮತ್ತು ನಂಬಿಕೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗದಂತೆ ಸ್ವಂತ ಭಾವನೆಗಳಲ್ಲಿ ತುಂಬಿಹೋಗದಿರುವ ಸಾಮರ್ಥ್ಯ ಅಗತ್ಯ.

ಸಾಮಾಜಿಕ ಕೌಶಲಗಳು (Social skills) ಸಂವಹನ, ಆರೋಗ್ಯಕರ ಸಂಬಂಧಗಳನ್ನು ನಿರ್ಮಿಸುವುದು ಮತ್ತು

ಸಂಘರ್ಷಗಳನ್ನು ಪರಿಹರಿಸಲು ಸಾಧ್ಯವಾಗುವುದನ್ನು ಒಳಗೊಂಡಿದೆ. ಸ್ವಯಂ–ಅರಿವು, ಸ್ಥಿತಿಸ್ಥಾಪಕತ್ವ, ಸಹಾನುಭೂತಿ ಮತ್ತು ಸಾಮಾಜಿಕ ಕೌಶಲಗಳು ಘರ್ಷಣೆಗಳನ್ನು ರಚನಾತ್ಮಕವಾಗಿ ನಿಭಾಯಿಸಲು ಕಲಿಯುವ ಅಡಿಗಲ್ಲಾಗಿದೆ.

## ಸಂಘರ್ಷ ಪರಿಹಾರ

ಸಂಘರ್ಷ ಪರಿಹಾರವು ಸಂಘರ್ಷವನ್ನು ರಚನಾತ್ಮಕವಾಗಿ ನಿರ್ವಹಿಸುವ ಪ್ರಕ್ರಿಯೆಯಾಗಿದ್ದು, ಎರಡೂ ಕಡೆಯವರು ತಮ್ಮ ಗುರಿಯನ್ನು ಸಾಧಿಸುತ್ತಾರೆ ಮತ್ತು ಇದು ಅವರ ನಡುವಿನ ಸಂಬಂಧವನ್ನು ಸುಧಾರಿಸುತ್ತದೆ. ಒಬ್ಬ ವ್ಯಕ್ತಿಗೆ ಘರ್ಷಣೆಗಳನ್ನು ನಿರ್ವಹಿಸುವ ಸಾಮರ್ಥ್ಯವು ವರ್ತಮಾನಕ್ಕೆ (ಪ್ರಸ್ತುತಕ್ಕೆ) ಮಾತ್ರವಲ್ಲದೆ ಭವಿಷ್ಯಕ್ಕೂ ಸಹ ಪ್ರಮುಖ ಕೌಶಲವಾಗಿದೆ. ಇದು ಹೆಚ್ಚು ಬೆಂಬಲ ಮತ್ತು ಸುರಕ್ಷಿತ ಸಮುದಾಯವನ್ನು ರಚಿಸಲು ಸಹಾಯ ಮಾಡುತ್ತದೆ. ಇದು ಗೌರವ ಮತ್ತು ಸದ್ಭಾವನೆಯೊಂದಿಗೆ ಮಾತುಕತೆ ಮತ್ತು ನಿರ್ಧಾರಗಳನ್ನು ತೆಗೆದುಕೊಳ್ಳುವ ಅಹಿಂಸಾತ್ಮಕ ವಿಧಾನದ ಉದಾಹರಣೆಯನ್ನು ತೋರಿಸಿ ಕೊಡುತ್ತದೆ.

ಸಾಮಾನ್ಯವಾಗಿ, ಸಂಘರ್ಷ ಪರಿಹಾರ ಪ್ರಕ್ರಿಯೆಯು ಈ ಕೆಳಗಿನ ಹಂತಗಳನ್ನು ಒಳಗೊಂಡಿರುತ್ತದೆ:

ಮೊದಲನೆಯದಾಗಿ, ಸಂಘರ್ಷದಲ್ಲಿರುವ ಉಭಯ ವ್ಯಕ್ತಿಗಳು ಶಾಂತವಾಗುತ್ತಾರೆ ಮತ್ತು ಸಮಸ್ಯೆಯನ್ನು ಒಟ್ಟಿಗೆ ಸೇರಿ ಪರಿಹರಿಸಲು ಒಪ್ಪುತ್ತಾರೆ. ಅವರು ಪರಸ್ಪರ ಹೆಸರುಗಳನ್ನು ಕರೆಯದಂತೆ ಅಥವಾ ಮತ್ತೊಬ್ಬರನ್ನು ನಿಂದಿಸುವ ಪದಗಳನ್ನು ಬಳಸದಿರಲು ಒಪ್ಪುತ್ತಾರೆ ಮತ್ತು ಸಂಘರ್ಷ ಪರಿಹಾರ ಪ್ರಕ್ರಿಯೆಗೆ ಗೌರವಯುತವಾಗಿ ಪ್ರವೇಶಿಸುತ್ತಾರೆ.

ನಂತರ, ಪ್ರತಿಯೊಬ್ಬರೂ "ನಾನು" – ಎಂಬ ಪದವನ್ನು ಬಳಸಿಕೊಂಡು ತಮ್ಮ ಭಾವನೆಗಳನ್ನು ಮತ್ತು ಅಗತ್ಯಗಳನ್ನು ವ್ಯಕ್ತಪಡಿಸಲು ಸರದಿಯಂತೆ ಮುಂದಾಗುತ್ತಾರೆ. ('ನಾನು'– ಸಂದೇಶದ ಸ್ವರೂಪವು ಕೆಳಕಂಡಂತಿದೆ: ————————— ಎಂಬಂತೆ ನಾನು ಭಾವಿಸುತ್ತೇನೆ ________ ಏಕೆಂದರೆ____ ಕಾರಣದಿಂದಾಗಿ ಮತ್ತು _ _ _ ರ ಅಗತ್ಯ ನನಗಿದೆ). ಮಾತನಾಡುವುದರ ಜೊತೆಗೆ, ಇತರ ವ್ಯಕ್ತಿಯನ್ನು ಬಹಳ ಎಚ್ಚರಿಕೆಯಿಂದ ಆಲಿಸಿ, ನಂತರ ಇಬ್ಬರಿಗೂ ಸರಿಹೊಂದುವ ಪರಿಹಾರಗಳೊಂದಿಗೆ ಬರಲು ಮತ್ತು ಉತ್ತಮವಾದುದನ್ನು ಆಯ್ಕೆ ಮಾಡಲು ಪ್ರಯತ್ನಿಸುವುದು ಸಹ ಮುಖ್ಯವಾಗಿದೆ.

## ಸಂಘರ್ಷ ಪರಿಹಾರ ಮತ್ತು ಭಾವನಾತ್ಮಕ ಬುದ್ಧಿವಂತಿಕೆಯ ಪಾಲುದಾರಿಕೆ

ಮೇಲಿನ ಸಂಘರ್ಷ ಪರಿಹಾರ ಪ್ರಕ್ರಿಯೆಯಲ್ಲಿ ವಿವರಿಸಿರುವ ಪ್ರತಿಯೊಂದು ಹಂತವು ಮಗುವಿನ ಭಾವನಾತ್ಮಕ ಅರಿವು, ಸಂಯಮ ಮತ್ತು ಮಗುವಿನ ಅಭಿವ್ಯಕ್ತಿಯ ಜೊತೆಗಿನ ಅಗತ್ಯತೆಯನ್ನು ಹೊಂದಿರುತ್ತದೆ. ಹಂತಗಳನ್ನು ಅರ್ಥಮಾಡಿಕೊಳ್ಳಲು, ನಾವು ಇಬ್ಬರು ವಿದ್ಯಾರ್ಥಿಗಳ ಉದಾಹರಣೆಯನ್ನು ಬಳಸುತ್ತೇವೆ – ಅರ್ಹಾನ್ ಮತ್ತು ಅರ್ಚನಾ, ಅವರು ಗೊಂಬೆಗಾಗಿ ಜಗಳವಾಡುತ್ತಿದ್ದ ಸಂದರ್ಭ.

ಹಂತ 1: ಶಾಂತವಾಗಿಸುವಿಕೆ

ಕಿರಚುವ, ಆತಂಕದಲ್ಲಿರುವ ಅಥವಾ ಕೋಪಗೊಂಡಿರುವ, ಇನ್ನೊಬ್ಬರಿಗೆ ನೋವುಂಟು ಮಾಡುವ ಮಗುವನ್ನು, ಶಾಂತಗೊಳ್ಳುವಂತೆ ಹೇಳುವುದು ಎಷ್ಟು ನಿಷ್ಪರಿಣಾಮ–ಕಾರಿಯಾಗಿದೆ ಎಂಬುದನ್ನು ಶಿಕ್ಷಕರು ಮತ್ತು ಆರೈಕೆದಾರರು ಅರಿತಿರಬಹುದು. ವಯಸ್ಕರು ಸಹ ಒತ್ತಡದ ಸಂದರ್ಭಗಳಲ್ಲಿ ತಳಮಳಗೊಳ್ಳದಂತೆ, ಚಿಂತಿಸುವುದನ್ನು ನಿಲ್ಲಿಸಲು ಮತ್ತು ಶಾಂತವಾಗಿರಲು ಮತ್ತು ತಮ್ಮ ಮೆದುಳಿನ ನಿರ್ದೇಶನಗಳನ್ನು ಕೇಳುವ ಸಾಮರ್ಥ್ಯವನ್ನು ವಿರಳವಾಗಿ ಹೊಂದಿರುತ್ತಾರೆ. ಹಾಗಿರುವಾಗ 'ಸ್ವಯಂ–ಶಾಂತಗೊಳಿಸುವುದು' (self-soothe) ಅಥವಾ ಶಾಂತವಾಗುವುದು ಹೇಗೆಂದು ಅವರು ಮಕ್ಕಳಿಗೆ ಹೇಗೆ ಕಲಿಸಲು ಸಾಧ್ಯ?

ಶಾಂತವಾಗುವುದು ಎಂದರೆ ಒಬ್ಬರ ಭಾವನೆಗಳನ್ನು ಗುರುತಿಸಲು ಕಲಿಯುವುದನ್ನು – ಸ್ವಯಂ–ಅರಿವು– ಒಳಗೊಂಡಿರುತ್ತದೆ ಮತ್ತು ಆ ಬಳಿಕ ಒಬ್ಬರ ಏರುತ್ತಿರುವ ಭಾವನೆಗಳನ್ನು ನಿಭಾಯಿಸುವ ಮಾರ್ಗವನ್ನು ತ್ವರಿತವಾಗಿ ಗುರುತಿಸಲು ಸಾಧ್ಯವಾಗುತ್ತದೆ. ಈ ಭಾವನಾತ್ಮಕ ಕೌಶಲವು ಮೆದುಳನ್ನು ಗಲಾಟೆ–ಅಥವಾ–ಗಲಾಟೆಯ ದಾರಿಯಲ್ಲಿ ಸಿಕ್ಕಿಕೊಳ್ಳುವುದರಿಂದ ತಡೆಯುತ್ತದೆ. ನಂತರ ವಿದ್ಯಾರ್ಥಿಗಳು ತಮ್ಮ ಶಾಂತ ಮನಸ್ಸು ಮತ್ತು ಆಲೋಚನೆಗಳನ್ನು ಸೃಜನಶೀಲ ಮತ್ತು ವಿಮರ್ಶಾತ್ಮಕ ಸಮಸ್ಯೆ – ಪರಿಹರಿಸುವಲ್ಲಿ ಬಳಸಬಹುದು. ಅರ್ಹಾನ್ ಗೊಂಬೆಯೊಂದಿಗೆ ಆಟವಾಡುತ್ತಿದ್ದಾಗ ಅರ್ಚನಾ ಅದನ್ನು ಏಕಾಏಕಿ ಕಿತ್ತುಕೊಳ್ಳುತ್ತಾಳೆ. ಆದರೆ ಅರ್ಹಾನ್ ತನಗಾದ ಹತಾಶೆಯನ್ನು ಗುರುತಿಸಿಕೊಳ್ಳುತ್ತಾನೆ ಮತ್ತು ಅವನ ತಲೆಯ ಮೇಲೆ ರೂಪುಗೊಂಡ ಕೋಪದ 'ಮೋಡ'ವನ್ನು ತೊಡೆದು ಹಾಕಲು ತನ್ನ ಶಿಕ್ಷಕರು ಕಲಿಸಿದ ದೀರ್ಘ ಉಸಿರಾಟದ ತಂತ್ರವನ್ನು ನೆನಪಿಸಿಕೊಳ್ಳುತ್ತಾನೆ. ಅವನು ದೀರ್ಘ ಉಸಿರನ್ನು ತೆಗೆದುಕೊಂಡು ಪ್ರತಿ ಉಸಿರಿನೊಂದಿಗೆ ಕೋಪದ ಮೋಡವು ಒಡೆದು ಹೋಗುವುದನ್ನು ಊಹಿಸಿಕೊಳ್ಳುತ್ತಾನೆ. ಇದು ಅವನ ಸಂಘರ್ಷವನ್ನು ಹೆಚ್ಚು ಪರಿಣಾಮಕಾರಿಯಾಗಿ ಪರಿಹರಿಸಲು ಸಾಧ್ಯವಾಗುವಂತೆ ಶಾಂತಗೊಳಿಸಲು ಸಹಾಯ ಮಾಡಿತು.

ಹಂತ 2: ಹೀಯಾಳಿಸದಿರುವುದು ಅಥವಾ ಹೆಸರು ಕರೆಯದಿರುವುದು

ಪ್ರಚೋದನೆಗಳನ್ನು ನಿಯಂತ್ರಿಸುವ ಅಥವಾ ವಿಳಂಬಗೊಳಿಸುವ ಸಾಮರ್ಥ್ಯ ಭಾವನೆಗಳನ್ನು ನಿರ್ವಹಿಸುವುದರ ಒಂದು ಭಾಗವಾಗಿದೆ. ಶಾಂತವಾಗಿರುವ ಮಗು ಇತರ ಹೆಸರುಗಳನ್ನು

ಕರೆಯದಿರಬಹುದು. ನಿಯಮಗಳಿಗೆ ವಿಧೇಯತೆಯಿಂದ ಅಥವಾ ಇನ್ನೊಬ್ಬ ವ್ಯಕ್ತಿಗೆ ನಿಜವಾದ ಗೌರವ ನೀಡುವ ಸಲುವಾಗಿ ಹೀಯಾಳಿಸುವಂತೆ ಹೆಸರುಗಳನ್ನು ಕರೆಯುವುದನ್ನು ತಪ್ಪಿಸಬಹುದು. ನಿಯಮಗಳಿಗೆ ವಿಧೇಯತೆಯ ಕಾರಣದಿಂದ ನೋಯಿಸುವ ನಡವಳಿಕೆಯನ್ನು ತಪ್ಪಿಸುವುದು ಅಪಾಯಕಾರಿ ಮತ್ತು ಅಸಮಂಜಸವಾಗಬಹುದು, ಆದರೆ ನೈಜ ಗೌರವವು ಅರ್ಥಪೂರ್ಣ ಸಂಪರ್ಕದಿಂದ ಬರುತ್ತದೆ. ವಿದ್ಯಾರ್ಥಿಗಳು ತಮ್ಮನ್ನು ಮತ್ತು ತಮ್ಮ ಭಾವನೆಗಳನ್ನು ಒಂದಾಗಿಸಿದರೆ, ಅವರು ತಮ್ಮನ್ನು ಮತ್ತು ಇತರರನ್ನು ಗೌರವಿಸುತ್ತಾರೆ. ಪರಾನುಭೂತಿಯಿಂದ ಗೌರವವು ನಿಯಮ–ಆಧಾರಿತ ಗೌರವಕ್ಕಿಂತ ನಿಂದನೆಯಿಂದ ಹೆಸರು–ಕರೆಯುವಿಕೆಯನ್ನು ತಡೆಯುವಲ್ಲಿ ಹೆಚ್ಚು ಪರಿಣಾಮಕಾರಿಯಾಗಿದೆ.

ಅರ್ಚನಾ ತನ್ನ ಸ್ನೇಹಿತೆ ಎಂಬುದನ್ನು ಅರ್ಹಾನ್ ನೆನಪಿಸಿಕೊಂಡನು ಮತ್ತು ಈ ಜಗಳಕ್ಕೆ (ಗಲಾಟೆಗೆ) ಮೊದಲು ಅವರಿಬ್ಬರು ಹಲವಾರು ಬಾರಿ ಒಟ್ಟಿಗೆ ಆಡಿದ್ದನ್ನು ಕೂಡ ಅರ್ಹಾನ್ ಆ ಕ್ಷಣದಲ್ಲಿ ನೆನಪಿಸಿಕೊಂಡನು. ಈ ಭಾವನಾತ್ಮಕ ಸಂಬಂಧದ ನೆನಪು ಅವಳು ಅವನ ಗೊಂಬೆಯನ್ನು ಕಸಿದುಕೊಳ್ಳುವ ಮೂಲಕ ಅವನಿಗೆ ಸ್ಪಷ್ಟವಾಗಿ ಅನ್ಯಾಯ ಮಾಡಿದ್ದರೂ ಸಹ ಅರ್ಚನಾಳನ್ನು ಕೋಪದಿಂದ ಇತರ ಹೆಸರುಗಳಿಂದ ಕರೆಯುವುದನ್ನು ತಡೆಯಲು ಅರ್ಹಾನ್‌ಗೆ ಇದು ಸಹಾಯ ಮಾಡಿತು.

ಹಂತ 3: ಘರ್ಷಣೆಯ ಸಮಯದಲ್ಲಿ 'ನಾನು' ಪದ ಬಳಸಿ – ಭಾವನೆಗಳು ಮತ್ತು ಅಗತ್ಯಗಳನ್ನು ವ್ಯಕ್ತಪಡಿಸುವುದು

ಸಂಘರ್ಷದ ವೇಳೆ 'ನಾನು' ಪದ ಬಳಸುವುದಕ್ಕೆ ಮುನ್ನ ವಿದ್ಯಾರ್ಥಿಗಳಿಗೆ ತಮ್ಮ ಭಾವನೆಗಳನ್ನು ಗುರುತಿಸಲು ಸಾಧ್ಯವಾಗಬೇಕು, ಅವುಗಳನ್ನು ವ್ಯಕ್ತಪಡಿಸಲು ಶಬ್ದಗಳನ್ನು ಹೊಂದಿರಬೇಕು ಮತ್ತು ನೈಜ ಭಾವನೆಯನ್ನು ವ್ಯಕ್ತಪಡಿಸಲು ಸುರಕ್ಷಿತವೆನಿಸಬೇಕು. ವಿದ್ಯಾರ್ಥಿಯ ನಿಜವಾದ ಭಾವನೆಗಳನ್ನು ವ್ಯಕ್ತಪಡಿಸಲು, ಅವುಗಳನ್ನು ಗುರುತಿಸಲು ಮತ್ತು ಸ್ವಯಂ–ಅರಿವಿನ ಸಾಮರ್ಥ್ಯವು ತರಗತಿಯ ಸುರಕ್ಷತೆಯನ್ನು ಅವಲಂಬಿಸಿದೆ. ವಿದ್ಯಾರ್ಥಿಯು ಬೆದರಿಕೆ ಅಥವಾ ಅಗೌರವದ ವಾತಾವರಣದಲ್ಲಿ ಅವಳು/ಅವನು ಏನನ್ನು ಅನುಭವಿಸುತ್ತಿದ್ದಾನೆಂದು ನಿಖರವಾಗಿ ತಿಳಿದಿರುವುದಿಲ್ಲ. ಈ ಪ್ರಕ್ರಿಯೆಗೆ ಸಹಾಯ ಮಾಡಲು, ಶಿಕ್ಷಕರು ಸುರಕ್ಷಿತ ತರಗತಿಯ ವಾತಾವರಣವನ್ನು ಅಭಿವೃದ್ಧಿಪಡಿಸಲು ಸಹಾಯ ಮಾಡಬಹುದು, ಅಲ್ಲಿ ವಿದ್ಯಾರ್ಥಿಗಳನ್ನು ತಮ್ಮ ಭಾವನೆಗಳನ್ನು ಅರಿಯಲು ಮತ್ತು ವ್ಯಕ್ತಪಡಿಸಲು ಪ್ರೋತ್ಸಾಹಿಸಲಾಗುತ್ತದೆ.

ಅರ್ಹಾನ್‌ನ ಶಿಕ್ಷಕರು ಶಾಲಾ ದಿನದ ಕೊನೆಯಲ್ಲಿ ವಿದ್ಯಾರ್ಥಿಗಳು ಒಟ್ಟಿಗೆ ಸೇರಲು ಮತ್ತು ಅವರ ದಿನದ ಬಗ್ಗೆ ಚರ್ಚಿಸಲು ಮುಕ್ತ ಮಾತುಕತೆ ಸಮಯವನ್ನು (circle time) ನೀಡುತ್ತಾರೆ. ಅಲ್ಲಿ ಮಾತನಾಡುವ ಮತ್ತು ಆಲಿಸುವ ಕೆಲವು ಮೂಲಭೂತ ನಿಯಮಗಳನ್ನು ಕೂಡ ರಚಿಸಲಾಗಿದೆ, ಇದು ಅರ್ಚನಾ ಮತ್ತು ಇತರರ ಭಾವನೆಗಳು ತನ್ನ ಸ್ವಂತ ಭಾವನೆಗಳಷ್ಟೇ ಮುಖ್ಯವೆಂದು ಅರ್ಹಾನ್‌ಗೆ ತಿಳಿಯಲು ಸಹಾಯ ಮಾಡಿತು. ಸಂಘರ್ಷದ ಸಮಯದಲ್ಲಿ, ಈ ಸುರಕ್ಷತೆಯ ಪ್ರಜ್ಞೆ ಮತ್ತು ಅವನ ಸ್ವಂತ ಭಾವನೆಗಳ ಅರಿವು ಅರ್ಚನಾಳಿಗೆ ಪರಿಸ್ಥಿತಿಯ ಬಗ್ಗೆ ತನ್ನ ದೃಷ್ಟಿಕೋನವನ್ನು ವ್ಯಕ್ತಪಡಿಸಲು ಸಹಾಯ ಮಾಡಿತು.

ಹಂತ 4: ಇತರರನ್ನು ಜಾಗರೂಕತೆಯಿಂದ ಆಲಿಸುವುದು.

ಆಲಿಸುವಿಕೆಯನ್ನು ಹಲವು ವಿಧಗಳಲ್ಲಿ ಮಾಡಬಹುದು. ಇವುಗಳಲ್ಲಿ 'ನಿಜವಾಗಿಯೂ ಕೇಳುತ್ತಿಲ್ಲ', 'ತಪ್ಪು ಹುಡುಕಲು ಕೇಳುವುದು' ಮತ್ತು 'ಜಾಗರೂಕತೆಯಿಂದ ಆಲಿಸುವುದು' ಸೇರಿವೆ. ಘರ್ಷಣೆಯಿಂದ ಹೊಡೆದಾಟ ಅಥವಾ ಹಾರಾಟದ ಭಾವನಾತ್ಮಕ ಸಂವಹನವು (fight-or-flight chemistry) ಉದ್ರೇಕಗೊಂಡಾಗ ಮತ್ತು ಇತರ ವ್ಯಕ್ತಿಯು ಮಾತನಾಡುವಾಗ ನಮ್ಮ ಮೆದುಳು ಕೋಪಗೊಂಡ ಮತ್ತು ರಕ್ಷಣಾತ್ಮಕ ಆಲೋಚನೆಗಳಿಂದ ತುಂಬಿರುವಾಗ ಆಲಿಸದಿರುವುದು (ಯಾರ ಮಾತನ್ನೂ ಕೇಳದ ಪರಿಸ್ಥಿತಿ) ಸಂಭವಿಸುತ್ತದೆ. ನಾವು ತಪ್ಪು ಹುಡುಕಲಿಕ್ಕಾಗಿ ಕೇಳುತ್ತಿರುವಾಗ, ನಾವು ನಮ್ಮದೇ ಆದ ವಿರುದ್ಧವಾದ ವಾದದ ಮೇಲೆ ತೆರಳುತ್ತೇವೆ ಮತ್ತು ದಾಳಿ ಮಾಡುತ್ತೇವೆ. ಎಚ್ಚರಿಕೆಯಿಂದ ಆಲಿಸುವುದು ನಿಜವಾದ ಗಮನದಿಂದ ಪ್ರಾರಂಭವಾಗುತ್ತದೆ, ವಿಶಾಲ ಹೃದಯದಿಂದ ಮತ್ತು ಮನಸ್ಸನ್ನು ಗೌರವಿಸಿ ಕೆಲಸ ಮಾಡುತ್ತದೆ ಮತ್ತು ತಿಳುವಳಿಕೆ ಮತ್ತು ಸಹಾನುಭೂತಿಯೊಂದಿಗೆ ಕೊನೆಗೊಳ್ಳುತ್ತದೆ. ಇತರರ ದೃಷ್ಟಿಕೋನವನ್ನು ಒಟ್ಟುಗೂಡಿಸುವ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸಿದಾಗ ಪರಾನುಭೂತಿಯಿಂದ ಆಲಿಸುವುದು (Empathic listening) ಸಾಧ್ಯವಾಗುತ್ತದೆ. ರಚನಾತ್ಮಕ ಸಮಸ್ಯೆ ಪರಿಹಾರಕ್ಕಾಗಿ ಸೃಜನಶೀಲತೆ ಮತ್ತು ವಿಮರ್ಶಾತ್ಮಕ ಚಿಂತನೆ ಪ್ರಮುಖ ಅಡಿಗಲ್ಲು.

ಗಹನವಾದ ಆಲಿಸುವಿಕೆ, ಸ್ವಂತ ಮಾತಿನಲ್ಲಿ ಬಿಡಿಸಿ ಹೇಳುವ (paraphrasing) ಮತ್ತು ಸಂವಹನದ ನಿಯಮಗಳನ್ನು ಹೊಂದಿಸುವ ಮತ್ತು ಅಭ್ಯಾಸ ಮಾಡುವ ತರಗತಿಯ ಅಭ್ಯಾಸಗಳ ಮೂಲಕ ಕರಾರುವಕ್ಕಾಗಿ ಆಲಿಸುವ ಅಭ್ಯಾಸವನ್ನು ಅರ್ಹಾನ್‌ಗೆ ನೀಡಲಾಗಿದೆ. ಇದು ತೀರ್ಮಾನಗಳಿಗೆ ಧಾವಿಸದೆ ಅಥವಾ ಅವಳ ತಪ್ಪುಗಳನ್ನು ಕಂಡುಹಿಡಿಯದೆ ಅರ್ಚನಾಳ ಕಥೆಯನ್ನು ಎಚ್ಚರಿಕೆಯಿಂದ ಆಲಿಸಲು ಅವನಿಗೆ ಸಹಾಯ ಮಾಡಿತು.

ಹಂತ 5: ಇಬ್ಬರಿಗೂ ಸರಿಹೊಂದುವ ಪರಿಹಾರ ಮಾರ್ಗಗಳನ್ನು ಕಂಡು ಹಿಡಿಯುವುದು

ಪರಾನುಭೂತಿ ಅಗತ್ಯವಿರುವ ನೈಜ ಅವಶ್ಯಕತೆಗಳಿಗೆ ಗಮನ ಕೊಡುವುದರಿಂದ ಸೃಜನಶೀಲ ಪರಿಹಾರಗಳು (Creative solutions) ದೊರಕುತ್ತವೆ. ಇದಕ್ಕೆ ತರಗತಿಯಲ್ಲಿ ಸುರಕ್ಷತೆಯ

ಅಗತ್ಯವೂ ಕೂಡ ಮುಖ್ಯವಾಗಿರುತ್ತದೆ. ಏಕೆಂದರೆ ವಿಚಾರಣೆ ಮತ್ತು ಅಗತ್ಯಗಳ ಅಭಿವ್ಯಕ್ತಿ ನಮ್ಮನ್ನು ದುರ್ಬಲ-ಗೊಳಿಸಬಹುದು. ಸೃಜನಾತ್ಮಕ, ವಿಮರ್ಶಾತ್ಮಕ ಚಿಂತನೆಯನ್ನು ಪ್ರೋತ್ಸಾಹಿಸಲು ಸುರಕ್ಷತೆಯೂ ಬಹಳ ಮುಖ್ಯ. ಬೆದರಿಕೆಯನ್ನು ಅನುಭವಿಸಿದಾಗ, ನಾವು ನಮ್ಮ ಆಲೋಚನೆಯನ್ನು ಕಡಿಮೆಗೊಳಿಸುತ್ತೇವೆ, ಅದು ಅಸಹಾಯಕತೆಯ ಭಾವನೆಯನ್ನು ಉಂಟುಮಾಡುತ್ತದೆ. ಇದರಿಂದ ಹೊಸ ಸಾಧ್ಯತೆಗಳ ಕುರಿತು ಯೋಚಿಸಲು ಹಾಗೂ ಹಳೆಯ ವಿಚಾರಗಳನ್ನು ಮರುಚಿಂತಿಸಲು ಅಥವಾ ಪ್ರಯತ್ನಶೀಲರಾಗಲು ಇದು ಅಸುರಕ್ಷತೆಯ ಭಾವನೆಯನ್ನು ಹುಟ್ಟುಹಾಕುತ್ತದೆ. ಸಂಪರ್ಕ ಬೆಸೆಯುವುದು, ಉನ್ನತ ಮಟ್ಟದ ಚಿಂತನೆಯನ್ನು ಮತ್ತು ಸೃಜನಶೀಲತೆಯನ್ನು ನೈಜ ಚಿಂತನೆಯು ಒಳಗೊಂಡಿರುತ್ತದೆ. ಇದು ಅಸುರಕ್ಷಿತ ವಾತಾವರಣದಲ್ಲಿ ಸೃಷ್ಟಿಯಾಗುವುದಿಲ್ಲ. ಅರ್ಚನಾ ಮತ್ತು ಅರ್ಹಾನ್ ಅವರ ಸುರಕ್ಷಿತ ತರಗತಿಯ ವಾತಾವರಣವು ಅವರ ಸಂಘರ್ಷವನ್ನು ಪರಿಹರಿಸುವ ಮಾರ್ಗಗಳ ಬಗ್ಗೆ ಶಾಂತವಾಗಿ ಯೋಚಿಸುವಲ್ಲಿ ಅವರಿಗೆ ಸಹಕರಿಸಿತು.

ಹಂತ 6: ಉತ್ತಮ ಪರಿಹಾರವನ್ನು ಕಂಡುಕೊಳ್ಳುವುದು

ಇಬ್ಬರ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವಾಗ ಸಂಘರ್ಷದಲ್ಲಿರುವವರು ಆ ಸಂದರ್ಭದಲ್ಲಿ ಬರುವ ಅಸಹನೆ, ಹತಾಶೆ, ನಿರಾಶೆ ಮತ್ತು ಭಯದ ಭಾವನೆಗಳನ್ನು ನಿಭಾಯಿಸ-ಬೇಕಾಗುತ್ತದೆ. ಪ್ರೇರಿತರಾಗಿ ಉಳಿಯಲು, ಹಿನ್ನಡೆಗಳ ಹೊರತಾಗಿಯೂ ಅವರು ಆಶಾವಾದವನ್ನು ಆಶಿಸಿ ಕಾಪಾಡಿಕೊಳ್ಳಬೇಕು. ಎಲ್ಲರಿಗೂ ಸರಿಹೊಂದುವ ಪರಿಹಾರವನ್ನು ಕಂಡುಕೊಳ್ಳಲು ಇತರರ ಬಗ್ಗೆ ಸಂವೇದನಾಶೀಲತೆ, ಸಮಸ್ಯೆ-ಪರಿಹರಿಸುವ ಮತ್ತು ಪರಿಣಾಮಕಾರಿ ಸಂವಹನದಂತಹ ಸಾಮಾಜಿಕ ಕೌಶಲಗಳ ಅಗತ್ಯವಿರುತ್ತದೆ.

ಇತರ ಮಕ್ಕಳು ಜಗಳವಾಡಿದ ನಂತರ ರಾಜಿಯಾಗುವುದನ್ನು ಅರ್ಹಾನ್ ಮತ್ತು ಅರ್ಚನಾ ನೋಡಿದ್ದರು. ರಾಜಿಯಾಗಲು ಸ್ವಲ್ಪ ಸಮಯ ತೆಗೆದುಕೊಂಡರೂ, ಅಂತಿಮವಾಗಿ ಅರ್ಚನಾ ಬಹಳ ಸಮಯದಿಂದ ಗೊಂಬೆಗಾಗಿ ಕಾಯುತ್ತಿದ್ದು, ಅದರೊಂದಿಗೆ ಆಟವಾಡಲು ಬೇರೆ ದಾರಿ ಕಾಣದೆ ತಾಳ್ಮೆ ಕಳೆದುಕೊಂಡು ಗೊಂಬೆಯನ್ನು ಕಿತ್ತುಕೊಂಡಳು ಎಂದು ಅರ್ಹಾನ್ ಅರ್ಥೈಸಿ ಗೊಂಬೆಯೊಂದಿಗೆ ಒಟ್ಟಿಗೆ ಆಟವಾಡಲು ನಿರ್ಧರಿಸಿದರು.

ಸಂಘರ್ಷ ಪರಿಹಾರ ಶಿಕ್ಷಣಕ್ಕಾಗಿ ಸಮಾಜೋ ಮತ್ತು ಭಾವನಾತ್ಮಕ ಕಲಿಕೆಯನ್ನು (SEL) ಅಡಿಪಾಯವಾಗಿ ಬಳಸುವುದು

ಸಮಾಜೋ-ಭಾವನಾತ್ಮಕ ಕಲಿಕೆಯನ್ನು ಬೆಂಬಲಿಸುವ ಮೂಲಕ ಸಂಘರ್ಷ ಪರಿಹಾರಕ್ಕೆ (conflict resolution) ಅಡಿಪಾಯ ಹಾಕಲು ಶಾಲೆಗಳು ಮಾಡಬಹುದಾದ ಕೆಲವು ವಿಷಯಗಳು ಈ ಕೆಳಗಿನಂತಿವೆ:

## ತರಗತಿ ಒಪ್ಪಂದಗಳನ್ನು ರಚಿಸುವುದು

ಸಹಯೋಗದೊಂದಿಗೆ ವಿದ್ಯಾರ್ಥಿಗಳಿಗೆ ಒಪ್ಪಂದಗಳನ್ನು ರಚಿಸಲು ಕಲಿಸಬಹುದು ಮತ್ತು ಬೆಂಬಲಿಸಬಹುದು. ಸುರಕ್ಷತೆ ಮತ್ತು ಮುಕ್ತತೆಯ ವಾತಾವರಣವನ್ನು ಸೃಷ್ಟಿಸುವಲ್ಲಿ ಇದು ಬಹಳ ಸಹಕಾರಿಯಾಗಿದೆ, ಇವೆರಡೂ ಪ್ರಮುಖ ಸಮಸ್ಯೆಗಳ ನಿರ್ಭೀತ ಅಭಿವ್ಯಕ್ತಿಗೆ ಮತ್ತು ಸಂಘರ್ಷಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಕೆಲಸ ಮಾಡುವುದು ಅತ್ಯಗತ್ಯ. ತಿರುವುಗಳನ್ನು ತೆಗೆದುಕೊಳ್ಳುವುದು ಮತ್ತು ಇತರರು ಮಾತನಾಡುವಾಗ ತಾಳ್ಮೆಯಿಂದ ಆಲಿಸುವುದು ಮುಂತಾದ ಸರಳ ನಿಯಮಗಳನ್ನು ಚಿಕ್ಕ ವಯಸ್ಸಿನಿಂದಲೇ ಮೈಗೂಡಿಸಬಹುದು.

ತರಗತಿಯ ಸಂವಹನಕ್ಕಾಗಿ ಕೆಲವು ಮೂಲ ನಿಯಮಗಳನ್ನು ಅಭಿವೃದ್ಧಿಪಡಿಸಬಹುದು. ಇವುಗಳಲ್ಲಿ ಅಡಚಣೆ ಉಂಟು-ಮಾಡದಿರುವುದು, ಮತ್ತೊಬ್ಬರನ್ನು ಕೀಳಾಗಿ ಕಾಣದಿರುವುದು, ಯಾರ ಬಗ್ಗೆಯೂ ತೀರ್ಪು ಕೊಡದಿರುವುದು, ಗೌರವ, ಪ್ರಾಮಾಣಿಕತೆ, ನ್ಯಾಯಸಮ್ಮತತೆ ಹೊಂದುವುದು, ಕೆಲವು ಬೇಡವಾದ ಚರ್ಚೆಗೆ ಆಸ್ಪದ ನೀಡದಂತಹ ಅಂದರೆ ಉತ್ತೀರ್ಣ ಮಾಡುವ ಹಕ್ಕು (ಮತ್ತು ಅಭಿಪ್ರಾಯಗಳನ್ನು ಹಂಚಿ-ಕೊಳ್ಳದಿರುವ) ಮತ್ತು ಕ್ಷಮಿಸುವ ಇಚ್ಛೆ ಹೊಂದುವುದು. ಯಾವಾಗ ವಿದ್ಯಾರ್ಥಿಗಳು ಆ ನಿಯಮಗಳ ಒಡೆತನದ ಹಕ್ಕನ್ನು ಅನುಭವಿಸುತ್ತಾರೋ, ಆಗ ಅವರು ಅವುಗಳನ್ನು ಅನುಸರಿಸಲು ಹೆಚ್ಚು ಸಿದ್ಧರಿರುತ್ತಾರೆ.

## ಭಾವನೆಗಳ ಶಬ್ದಕೋಶವನ್ನು ರಚಿಸಿ

ಸಂವಹನದಲ್ಲಿ ಭಾವನೆಗಳನ್ನು ಗುರುತಿಸುವ ಸಾಮರ್ಥ್ಯವು ಸಂಘರ್ಷ ಪರಿಹಾರಕ್ಕಾಗಿ ಸಹಾಯ ಮಾಡುತ್ತದೆ. ಆಟೋಟ ಮತ್ತು ಸೃಜನಶೀಲ ಮಾರ್ಗಗಳ ಮೂಲಕ ಭಾವನೆಗಳ ಶಬ್ದಕೋಶವನ್ನು ಕಲಿಸಬಹುದು. ಉದಾಹರಣೆಗೆ ಕಲೆಗಳನ್ನು ಬಳಸುವುದು ಮತ್ತು ಬಣ್ಣ, ಚಲನೆ, ರೂಪಕ, ಸನ್ನೆ, ಚಿಹ್ನೆಗಳು ಅಥವಾ ನೇರ ಮೌಖಿಕ ವಿವರಣೆಗಳ ಮೂಲಕ ಕಲ್ಪನೆಗಳಿಗೆ ಧ್ವನಿ ನೀಡುವಂತಹ ವಿಧಾನಗಳಲ್ಲಿ ಕಲಿಸಬಹುದು. ತಮ್ಮ ಜೀವನದ ಬಗ್ಗೆ ಪರ್ಯಾಲೋಚಿಸಲು ಮತ್ತು ಬರೆಯಲು ಈ ಪದಗಳನ್ನು ಬಳಸುವುದರಿಂದ ವಿದ್ಯಾರ್ಥಿಗಳು ಸ್ವಯಂ-ಅರಿವು ಬೆಳೆಸಿಕೊಳ್ಳಲು ಶಬ್ದ ಸಂಪತ್ತು ಸಹಾಯ ಮಾಡುತ್ತದೆ. ಪರ್ಯಾಲೋಚನೆಗಳನ್ನು ಹಂಚಿಕೊಳ್ಳುವಾಗ ಅವರು ಸಹಾನುಭೂತಿಯನ್ನು ಬೆಳೆಸಿಕೊಳ್ಳುತ್ತಾರೆ.

ಕೋಪ ನಿರ್ವಹಣೆಯ (anger management) ಬಗ್ಗೆ ವಿದ್ಯಾರ್ಥಿಗಳಿಗೆ ಕಲಿಸಬಹುದು – ಕೋಪದ ಚಿಹ್ನೆಗಳನ್ನು ಗುರುತಿಸುವುದು, ಕೋಪವು ಮೆದುಳನ್ನು ಆವರಿಸುವ ಮೊದಲು ಶಾಂತಗೊಳಿಸುವ ತಂತ್ರಗಳನ್ನು ಅಭಿವೃದ್ಧಿಪಡಿಸುವುದು, ಅವರ ಕೋಪವು ಹೇಗೆ ಪ್ರಚೋದಿಸಲ್ಪಡುತ್ತದೆ ಎಂಬುದರ ಮಾದರಿಯನ್ನು ಅರ್ಥಮಾಡಿಕೊಳ್ಳುವ ಮೂಲಕ ಅವರ ಕೋಪದ ಸ್ಫೋಟವನ್ನು ತಡೆಯುವುದು, ಮತ್ತು ಇತರ ಜನರ

ಕೋಪ ತಣಿಸಲು ಅವರೇನು ಮಾಡಬಹುದು ಎಂಬುದನ್ನು ಕಲಿಯಬಹುದು. ಭಯ ಮತ್ತು ಅವಮಾನ ಹೇಗೆ ಕೆಲಸ ಮಾಡುತ್ತದೆ ಮತ್ತು ಕಥೆಗಳು, ಕಲೆ ಮತ್ತು ಇತರ ವಿಧಾನಗಳನ್ನು ಬಳಸಿಕೊಂಡು ಅವುಗಳನ್ನು ಹೇಗೆ ನಿಭಾಯಿಸಲು ಸಾಧ್ಯ ಎಂಬುದನ್ನು ಅವರು ಕಲಿಯಬಹುದು.

ಮಾತನಾಡುವುದು ಮತ್ತು ಆಲಿಸುವುದು

ಕರಾರುವಕ್ಕಾದ ಮಾತುಗಾರಿಕೆ ಮತ್ತು ಪ್ರಾಮಾಣಿಕವಾದ ಆಲಿಸುವಿಕೆಯು ತರಗತಿಯಲ್ಲಿ ಸುರಕ್ಷತಾ ಭಾವನೆಯನ್ನು ಖಚಿತಪಡಿಸುತ್ತದೆ. ಗಂಭೀರವಾದ ಆಲಿಸುವಿಕೆಯುಸಕ್ರಿಯ ಆಲಿಸುವಿಕೆಗೆ ಪೂರ್ವಾಪೇಕ್ಷಿತವಾಗಿದೆ ಮತ್ತು ಇದು ಪ್ರಶ್ನೆಗಳು, ಅಡಚಣೆಗಳು ಅಥವಾ ತಕ್ಷಣದ ಪ್ರತಿಕ್ರಿಯೆಗಳಿಲ್ಲದೆ ಅಸುವಿಕೆಯನ್ನು ಒಳಗೊಂಡಿರುತ್ತದೆ. ಆಳವಾದ ಆಲಿಸುವಿಕೆಯು ಕರಾರುವಕ್ಕಾದ ಮಾತನಾಡುವಿಕೆಯನ್ನು ಉತ್ತೇಜಿಸುತ್ತದೆ – ಏಕೆಂದರೆ ಯಾರೂ ಅವರನ್ನು ಪ್ರೇರೇಪಿಸದಿದ್ದಾಗ, ಅವರಿಗೆ ಪ್ರಶ್ನೆಗಳನ್ನು ಕೇಳದೇ ಇದ್ದಾಗ, ಧೈರ್ಯ ತುಂಬದೆ ಇದ್ದಾಗ ಮತ್ತು ಅವರಿಗೆ ಮಾರ್ಗದರ್ಶನ ನೀಡದೆ ಇದ್ದಾಗ ವಿದ್ಯಾರ್ಥಿಗಳು ಏನು ಹೇಳಬೇಕೆಂದು ಬಯಸುತ್ತಾರೆ ಎಂಬುದನ್ನು ಅವರು ಅರಿಯುತ್ತಾರೆ.

ಇದನ್ನು ಮೊದಲು ಜೋಡಿಯಾಗಿ ಅಭ್ಯಾಸ ಮಾಡಬಹುದು, ಮತ್ತು ನಂತರ ವೃತ್ತದಲ್ಲಿ ಹಂಚಿಕೊಳ್ಳುವುದು. ತರಗತಿಯ ಸಮುದಾಯವನ್ನು ರಚಿಸಲು ಆಲಿಸುವಂತಹ ವೃತ್ತಗಳು (Listening circles) ಒಂದು ಪ್ರಬಲ ಸಾಧನವಾಗಿ ಹೊರಹೊಮ್ಮುತ್ತವೆ.

## ಉಪಸಂಹಾರ

ವಿದ್ಯಾರ್ಥಿಗಳು ತಮ್ಮ ಭಾವನೆಗಳನ್ನು ಅರಿತುಕೊಳ್ಳಲು ಮತ್ತು ನಿಯಂತ್ರಿಸಲು, ಹಿನ್ನಡೆಗಳ ನಡುವೆಯೂ ಪ್ರೇರಿತರಾಗಿ ಉಳಿಯಲು, ಇತರರತ್ತ ಪರಾನುಭೂತಿ ಬೆಳೆಸಿಕೊಳ್ಳಲು ಮತ್ತು ಸಾಮಾಜಿಕ ಮತ್ತು ಸಂವಹನ ಕೌಶಲಗಳನ್ನು ಬೆಳೆಸಲು ಚಿಕ್ಕ ವಯಸ್ಸಿನಿಂದಲೇ ಪ್ರೇರೇಪಿಸಬಹುದು. ಪರಸ್ಪರ ಸಂವಹನ ಮತ್ತು ಸಂಭಾಷಣೆ ನಡೆಸುವುದು ಹೇಗೆ ಎಂಬುದರ ಕುರಿತು ತರಗತಿಯ ಒಪ್ಪಂದಗಳನ್ನು ಸಾಮೂಹಿಕವಾಗಿ ರಚಿಸಲು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ಮೂಲಕ ಇದನ್ನು ಮಾಡಬಹುದು. ಕಲೆ, ಸಂಗೀತ, ಪುಸ್ತಕಗಳು ಮತ್ತು ಚಿಹ್ನೆಗಳ ಮೂಲಕ ಭಾವನೆಗಳ ಶಬ್ದಸಂಪತ್ತನ್ನು ನಿರ್ಮಿಸಲು ಅವರಿಗೆ ಸಹಾಯ ಮಾಡುವ ಮೂಲಕ; ಮತ್ತು ಸಂವಹನ ಕೌಶಲ ಮತ್ತು ಪರಾನುಭೂತಿಯನ್ನು ನಿರ್ಮಿಸುವ ಮೂಲಕ ವಿಶ್ವಾಸಾರ್ಹ ಮಾತುಗಾರಿಕೆ ಮತ್ತು ಗಂಭೀರ ಆಲಿಸುವಿಕೆಯನ್ನು ಉತ್ತೇಜಿಸುವುದು. ಈ ಭಾವನಾತ್ಮಕ ಮತ್ತು ಸಾಮಾಜಿಕ ಕಲಿಕೆಯು ಕೇವಲ ನಿರ್ಬಂಧಿತ ಮೌಲ್ಯಗಳನ್ನು ಹೊಂದಿದೆಯಲ್ಲದೆ, ರಚನಾತ್ಮಕ ಸಂಘರ್ಷ ಪರಿಹಾರಕ್ಕಾಗಿ ಇದು ಪ್ರಮುಖ ಅಡಿಪಾಯವಾಗಿದೆ.

***References***

Tricia Jones and Randy Compton. *Kids Working It Out - Strategies and Stories for Making Peace in Our Schools*. San Francisco: Jossey-Bass, 2003



**ಅನುಜಾ ವೆಂಕಟರಾಮನ್** ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಸಂವಾದ, ಭ್ರಾತೃತ್ವ ಮತ್ತು ನ್ಯಾಯದ ಮೇಲಿನ ಆಸಕ್ತಿ ಗುಂಪಿನೊಂದಿಗೆ ಸಂಶೋಧನಾ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಿಂದ ಎಂಎ ಶಿಕ್ಷಣ ಪಡೆಯುವ ಮೊದಲು, ಅವರು ಹಲವಾರು ವರ್ಷಗಳಿಂದ ಬೆಂಗಳೂರಿನ ಕೆಲವು ಪರ್ಯಾಯ ಶಾಲೆಗಳಲ್ಲಿ ವಿವಿಧ ವಯಸ್ಸಿನ ಮಕ್ಕಳೊಂದಿಗೆ ಕೆಲಸ ಮಾಡಿದ್ದಾರೆ. ಅವರನ್ನು anuja.venkataraman@apu.edu.in ಮೂಲಕ ಸಂಪರ್ಕಿಸಬಹುದು.

ಅನುವಾದ: **ಶೌಕತ್ ಅಲಿ** | ಪರಿಶೀಲನೆ: **ಲತಾ ಕೆ.ಸಿ.**

ಯೋಗಕ್ಷೇಮವನ್ನು ಪೋಷಿಸುವುದು ಶಿಕ್ಷಕರು ಮತ್ತು ಶಾಲಾ ನಾಯಕರುಗಳ ಸಾಮೂಹಿಕ ಜವಾಬ್ದಾರಿಯಾಗಿದೆ. ಯೋಗಕ್ಷೇಮಕ್ಕೆ ಕಾರಣವಾಗುವ ತಮ್ಮದೇ ಆದ ಸ್ವಂತ ಸಾಮರ್ಥ್ಯಗಳನ್ನು ಅಭಿವೃದ್ಧಿಪಡಿಸುವ ಕಡೆಗೆ ಹೆಚ್ಚು ಗಮನ ಹರಿಸಿ ಕೆಲಸ ಮಾಡಬೇಕಾದ ಸಂದರ್ಭದಲ್ಲಿ, ಕೆಲಸದ ಸ್ಥಳದಲ್ಲಿ ನಾಯಕರು ಶಿಕ್ಷಕರ ಸ್ವಾಯತ್ತತೆ, ವೃತ್ತಿಪರ ಅಭಿವೃದ್ಧಿ ಅವಕಾಶಗಳು ಮತ್ತು ಕಲಿಯುವವರು ಮತ್ತು ಸಹೋದ್ಯೋಗಿಗಳೊಂದಿಗೆ ವಿಶ್ವಾಸಾರ್ಹ ಸಂಬಂಧಗಳನ್ನು ಬೆಳೆಸುವ ಸಾಧ್ಯತೆಗಳನ್ನು ಒದಗಿಸುವ ಸಕಾರಾತ್ಮಕ ಶಾಲಾ ವಾತಾವರಣವನ್ನು ಸೃಷ್ಟಿಸಲು ಬದ್ಧರಾಗಿರಬೇಕು.

ಜ್ಯೆರಿಯಾ ಸಲೀಂ, ಶಿಕ್ಷಕರ ಯೋಗಕ್ಷೇಮದ ಬಗ್ಗೆ ಮರುಚಿಂತನೆ । ಒತ್ತಡ ಮತ್ತು ಬಳಲಿಕೆಯ ಆಚೆಗೆ, ಪು 6

# ಮಕ್ಕಳ ಕಥೆಗಳಲ್ಲಿ ಮಕ್ಕಳ ಧ್ವನಿ

ಜ್ಯೋತಿ ದೇಶಮುಖ್ ಮತ್ತು ಶಿವಾನಿ ತನೇಜಾ

ಶಾಲೆಯು ಮಕ್ಕಳ ಹಿತವನ್ನು ಕಾಯುವ ಒಂದು ಸಂಸ್ಥೆ ಎಂದು ನಾವು ನಂಬಿದರೂ ಕೂಡ ಶಾಲೆಗಳಲ್ಲಿನ ಮತ್ತು ಶಾಲೆಗಳ ಬಗೆಗಿನ ಎಲ್ಲಾ ನಿರ್ಧಾರಗಳನ್ನು ವಯಸ್ಕರೇ ತೆಗೆದುಕೊಳ್ಳುತ್ತಾರೆ. ಅನೇಕ ಬಾರಿ, ಮಕ್ಕಳ ವಾಸ್ತವತೆಯನ್ನು ತಿಳಿಯದ ವಯಸ್ಕರು ಶಾಲೆಯು ಕಾರ್ಯನಿರ್ವಹಿಸುವ ರೀತಿಗೆ ಜವಾಬ್ದಾರ–ರಾಗಿರುತ್ತಾರೆ. ಮಕ್ಕಳಿಗಿಂತ ವಯಸ್ಕರಿಗೆ ಹೆಚ್ಚು ತಿಳಿದಿದೆ ಎಂಬ ಈ ನಂಬಿಕೆಯನ್ನು ಪರಿಶೀಲನೆಗೆ ಒಳಪಡಿಸಬೇಕಾಗಿದೆ. ಈ ಲೇಖನವು ಮಕ್ಕಳು ತಮ್ಮ ಶಾಲಾ ಜೀವನದ ವ್ಯಾಖ್ಯಾನಗಳನ್ನು ಕಥಾಪುಸ್ತಕಗಳ ಮೂಲಕ ಹಂಚಿಕೊಳ್ಳುವಂತೆ ಅವರನ್ನು ಹೇಗೆ ಪ್ರೋತ್ಸಾಹಿಸಬಹುದು ಎಂಬುದನ್ನು ಪರಿಶೋಧಿಸುತ್ತದೆ ಹಾಗೂ ಮಕ್ಕಳ ಸಾಹಿತ್ಯದಲ್ಲಿ ಮಕ್ಕಳ ಕರ್ತೃತ್ವವನ್ನು (children's agency) ವರ್ಧಿಸುವುದನ್ನು ಪ್ರತಿಪಾದಿಸುತ್ತದೆ. ಸ್ಕೂಲ್ ಮೇ ಸೀಖಾ ಔರ್ ಸಿಖಾಯಾ (ಮುಸ್ಕಾನ್, 2022) ಎಂಬುದು ಭೋಪಾಲ್‌ನ ಗಂಗಾನಗರದ ಕೊಳೆಗೇರಿಯ ವಸತಿ ಪ್ರದೇಶದ ಗೋಂಡಿ ಬುಡಕಟ್ಟು ನಿವಾಸಿಯಾದ ನಿಕಿತಾ ಧುರ್ವೆ ಬರೆದ ಕಥೆ. ಅವಳು ತನ್ನ ಸ್ನೇಹಿತರೊಂದಿಗೆ ಶಾಲೆಯೊಂದಕ್ಕೆ ಸೇರುವ ಉತ್ಸಾಹದೊಂದಿಗೆ ಕಥೆಯು ಪ್ರಾರಂಭವಾಗುತ್ತದೆ. ಆದರೆ ತರಗತಿಯಲ್ಲಿ ಅವರಿಗಾಗುವ ಅನುಭವಗಳು ಬಹಳ ತ್ವರಿತವಾಗಿ ಅವರ ಈ ಉತ್ಸಾಹವನ್ನು ನಿರಾಶೆಗೆ ತಿರುಗಿಸುತ್ತವೆ. ಶಾಲೆಯು ಕಾರ್ಯನಿರ್ವಹಿಸುವ ವಿಧಾನಗಳು ಅವರನ್ನು ಏನೋ ಕಳೆದುಕೊಂಡ ಭಾವಕ್ಕೆ ತಳ್ಳುತ್ತವೆ. ಶಿಕ್ಷಕರು ಅವರ ಮನೆ ಭಾಷೆಯಾದ ಗೋಂಡಿಗಿಂತ ಭಿನ್ನವಾದ ಭಾಷೆಯಲ್ಲಿ ಮಾತನಾಡುತ್ತಿರುತ್ತಾರೆ ಮತ್ತು ಆ ಬಗ್ಗೆ ಸ್ಪಷ್ಟತೆ ಪಡೆಯಲು ಪ್ರಯತ್ನಿಸಿದಾಗ ಶಿಕ್ಷಕರಿಂದ ನಿಂದನೆಗೆ ಒಳಗಾಗುತ್ತಿರುತ್ತಾರೆ. ಆದರೆ ಮಕ್ಕಳು ತಮ್ಮ ಔಪಚಾರಿಕ ಶಿಕ್ಷಣದ ಕನಸನ್ನು ಬಿಟ್ಟುಕೊಡಲು ಬಯಸುವುದಿಲ್ಲ. ಆದ್ದರಿಂದ ಅವರು ಈ ಪರಿಸ್ಥಿತಿಯಿಂದ ಹೊರಬರಲು ಮಾರ್ಗಗಳನ್ನು ಹುಡುಕಲು ಪ್ರಾರಂಭಿಸುತ್ತಾರೆ. ಈ ಸಮಾಲೋಚನೆಯ ಮೂಲಕ, ಬರಹಗಾರರಾದ ಮಕ್ಕಳು ಶೈಕ್ಷಣಿಕ ಬೋಧನಾ ವಿಧಾನದ ಕುರಿತು ಸೂಕ್ತ ಪ್ರಶ್ನೆಗಳನ್ನು ಎತ್ತುತ್ತಾರೆ.

## ತರಗತಿಯಲ್ಲಿನ ಕಥೆ

ನಮ್ಮ ಶಾಲೆಯ ಐದನೇ ತರಗತಿಯಲ್ಲಿ ಓದುತ್ತಿರುವ 10ರಿಂದ 15 ವರ್ಷದೊಳಗಿನ 20 ವಿದ್ಯಾರ್ಥಿಗಳ ಮಿಶ್ರ ಗುಂಪಿಗೆ ಈ ಪುಸ್ತಕವನ್ನು ಪರಿಚಯಿಸಲಾಯಿತು. ಕಥೆಯಲ್ಲಿ ತೆರೆದುಕೊಳ್ಳುವ ಸನ್ನಿವೇಶಗಳಿಗೆ ಎಷ್ಟು ಸುಲಭವಾಗಿ ಮಕ್ಕಳು ತಮ್ಮನ್ನು ಗುರುತಿಸಿಕೊಂಡರು ಎಂಬುದು ಸಾಕಷ್ಟು ಆಶ್ಚರ್ಯಕರವಾಗಿ ಕಾಣುತ್ತದೆ. ಕಥೆಯಲ್ಲಿನ ಒಂದೆರಡು ವಾಕ್ಯಗಳು ಗೋಂಡಿ ಭಾಷೆಯಲ್ಲಿ ಇವೆ. ಇವುಗಳನ್ನು ಓದಿದಾಗ, ಮಕ್ಕಳಿಂದ ಕೆಲವು ವಿನಂತಿಗಳು ಕೇಳಿಬಂದವು. 'ಅದನ್ನು ಇನ್ನೊಮ್ಮೆ ಓದಿ'. 'ನೀವು ಏನೆಂದು ಓದಿದಿರಿ?' ಎಂದು ಕೇಳಿದರು. ಸಂಭಾಷಣೆಯ ಹರಿವು ಮತ್ತು ಕೆಲವು ಪರಿಚಿತ ಪದಗಳ ಆಧಾರದ ಮೇಲೆ ಅವರು ಏನನ್ನು ತಿಳಿಸುತ್ತಿದ್ದಾರೆಂದು ಊಹಿಸಲು ಪ್ರಯತ್ನಿಸುತ್ತಿದ್ದರು. ತರಗತಿಯಲ್ಲಿ ಗೋಂಡಿ ಮಾತನಾಡುವ ಮಕ್ಕಳಿರಲಿಲ್ಲ, ಆದರೆ ಆ ಮಕ್ಕಳಿಗೆ ಗೋಂಡಿ ಮಾತನಾಡುವ ಸ್ನೇಹಿತರಿದ್ದರು. ಅವರ ಉತ್ಸಾಹದ ಕಾರಣವು ಕೇವಲ ಅವರಿಗೆ ಪರಿಚಿತವಾಗಿದ್ದ ಭಾಷೆಯಿಂದ ಬಂದಿರಲಿಲ್ಲ, ಆದರೆ ಆ ಕಥೆಯ ಮೂಲದೊಂದಿಗೆ ಅವರಿಗೆ ಹೆಚ್ಚು ಸಂಬಂಧ ಇದ್ದಿದ್ದರಿಂದ ಬಂದಿತ್ತು ಎಂದು ಸುಗಮಕಾರರಾಗಿ ಅರ್ಥಮಾಡಿಕೊಳ್ಳಬಹುದಾಗಿತ್ತು. ರಾಗಿಣಿ ಲಲಿತ್ ಅವರು ಹಿಮಾಚಲ ಪ್ರದೇಶದ ಮಕ್ಕಳ ಗುಂಪಿಗೆ ಇದೇ ಕಥೆಯನ್ನು ಓದಿದಾಗ, ಬೆಟ್ಟಗಳಲ್ಲಿ ವಾಸಿಸುವ ಮಕ್ಕಳು ನಿಕಿತಾ ಮತ್ತು ಅವರ ಸ್ನೇಹಿತರೊಂದಿಗೆ ತಕ್ಷಣವೇ ತಮ್ಮನ್ನು ಗುರುತಿಸಿಕೊಂಡರು ಎಂಬುದನ್ನು ಕಂಡುಕೊಂಡರು.

## ಅನುಭವಗಳನ್ನು ಹಂಚಿಕೊಳ್ಳುವುದು

ಕಥೆ ಹೇಳಿದ ನಂತರ, ಮಕ್ಕಳಿಗೆ ತಮ್ಮ ಅನುಭವಗಳನ್ನು ಹಂಚಿಕೊಳ್ಳಲು ಕೆಲವು ಉತ್ತೇಜಕ ಪ್ರಶ್ನೆಗಳನ್ನು ಕೇಳಿ ಸುಗಮಗೊಳಿಸಲಾಯಿತು. ಉದಾಹರಣೆಗೆ, "ಆ ನಾಲ್ಕು ಹುಡುಗಿಯರ ಬಗ್ಗೆ ನಿಮಗೆ ಏನನ್ನಿಸುತ್ತದೆ?" 'ಶಾಲೆಯಲ್ಲಿ ನೀವು ಎಂದಾದರೂ ಕಳೆದುಹೋದಂತಹ ಭಾವನೆಯನ್ನು ಅನುಭವಿಸಿದ್ದೀರಾ?' 'ನೀವು ಕಳೆದುಹೋದಂತೆ ಭಾಸವಾದರೆ ನೀವು ಏನು ಮಾಡುತ್ತೀರಿ?', 'ತಮ್ಮ ಕಾರ್ಯಚಟುವಟಿಕೆಯನ್ನು ಬದಲಾಯಿಸಿಕೊಳ್ಳುವಂತೆ ಯಾರಾದರೂ ವಯಸ್ಕರನ್ನು ನೀವು ಕೇಳಿದ್ದೀರಾ?'. ಮಕ್ಕಳು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳಲು ಉತ್ಸುಕರಾಗಿದ್ದರು ಮತ್ತು ಇತರರ ಕಥೆಗಳನ್ನು ಕೇಳಿಸಿಕೊಳ್ಳುವಂತೆ ನಾವು ಅವರಿಗೆ ಹೇಳಬೇಕಾಯಿತು. ಇವುಗಳನ್ನು ಮೌಖಿಕವಾಗಿ ಹಂಚಿಕೊಳ್ಳಲಾಯಿತಾದರೂ ಕೆಲವು ಮಕ್ಕಳು ಅವುಗಳನ್ನು ಬರೆದರು ಕೂಡ. ಈ ಪ್ರಕ್ರಿಯೆಯಿಂದ ಮೂರು ರೀತಿಯ ಕಥೆಗಳು ಹುಟ್ಟಿಕೊಂಡವು.

ಶಾಲೆಯಲ್ಲಿನ ಅನುಭವಗಳು

10 ವರ್ಷದ ಬಾಲಕನೊಬ್ಬ ತನ್ನ ಹಳ್ಳಿಯ ಶಾಲೆಯಲ್ಲಿ ಶಿಕ್ಷಕರು ಬೋರ್ಡ್ನ ಮೇಲೆ ಏನನ್ನಾದರೂ ಬರೆದು ಅದನ್ನು ನಕಲು ಮಾಡುವಂತೆ ಮಕ್ಕಳಿಗೆ ಹೇಳುತ್ತಾರೆ ಎಂದು ಹಂಚಿಕೊಂಡನು; ಮಕ್ಕಳಿಗೆ ಬರೆಯಲು ಸಾಧ್ಯವಾಗದಿದ್ದರೆ ಅಥವಾ ಅವರು ತಪ್ಪು

ಮಾಡಿದರೆ, ಅವರನ್ನು 'ಮರದಿಂದ ಆಗಷ್ಟೇ ಮುರಿದು ತಂದ ಹಸಿರು ಕೋಲಿನಿಂದ' ಹೊಡೆಯಲಾಗುತ್ತಿತ್ತು. 'ನಾವು ತರಗತಿಯಿಂದ ಹೊರಗೆ ಹೋಗಲು ಹೇಳಬಹುದಾದ ಕಾರಣಗಳ ಬಗ್ಗೆ ಯೋಚಿಸುತ್ತಿದ್ದೆವು. ನಮಗೆ ಶಾಲೆಗೆ ಹೋಗಬೇಕೆಂಬ ಮನಸ್ಸೇ ಇರುತ್ತಿರಲಿಲ್ಲ. ಆದರೆ ಕುಟುಂಬದ ಸದಸ್ಯರು ನಮ್ಮನ್ನು ಹೋಗುವಂತೆ ಒತ್ತಾಯಿಸುತ್ತಿದ್ದರು'. ಇಂತಹದ್ದೇ ರೀತಿಯ ಅನುಭವವನ್ನು 11 ವರ್ಷದ ಬಾಲಕಿ ಹಂಚಿಕೊಂಡಳು. 'ಸರ್ ನಮಗೆ ಕಂಠಪಾಠ ಮಾಡುವಂತೆ ಹೇಳುತ್ತಿದ್ದರು. ಆದರೆ ನನಗೆ ಅದನ್ನು ಮಾಡಲು ಸಾಧ್ಯವಾಗುತ್ತಿರಲಿಲ್ಲ. ನಾನು ನಿಜವಾಗಿಯೂ ಪ್ರಯತ್ನಿಸುತ್ತಿದ್ದೆ. ಆದರೂ ನನಗೆ ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಅವರು ನಮ್ಮನ್ನು ಕೋಲಿನಿಂದ ಹೊಡೆಯುತ್ತಿದ್ದರು, ಆಗ ನನಗೆ ತುಂಬಾ ಅಸಮಾಧಾನವಾಗುತ್ತಿತ್ತು'. "ಸರ್ ನಮ್ಮನ್ನು ಮೇಲಿನಿಂದ ಕೆಳಕ್ಕೆ ದುರುಗುಟ್ಟಿ ನೋಡುತ್ತಿದ್ದರು" ಎಂದು ಸಹ ಒಂದು ಹುಡುಗಿ ಬರೆದಿದ್ದಳು. ಇದನ್ನು ತನ್ನ ತಾಯಿಯೊಂದಿಗೆ ಹಂಚಿಕೊಳ್ಳಲು ಅವಳಿಗೆ ಸಾಧ್ಯವಾಗದೆ, ಆ ಶಿಕ್ಷಕನು ಸರಿಯಾಗಿ ಪಾಠ ಮಾಡುತ್ತಿಲ್ಲ ಎಂದು ಹೇಳಿದ್ದಳು. ಹಾಗಾಗಿ ಅವಳ ತಾಯಿ ಶಾಲೆಯಿಂದ ಬಿಡಿಸಿದ್ದಳು. ಕೇವಲ ಒಂದು ವರ್ಷದ ಹಿಂದೆ ತನ್ನ ಶಿಕ್ಷಣ ಪಯಣವನ್ನು ಪ್ರಾರಂಭಿಸಿದ 14 ವರ್ಷದ ಹುಡುಗಿ ಶಾಲೆಯ ಭಾಗವಾಗುವ ತನ್ನ ಆರಂಭಿಕ ಪ್ರಯತ್ನದ ಬಗ್ಗೆ ಬರೆದಿದ್ದಳು. "ನಾವು ಮೊದಲ ಬಾರಿಗೆ ಶಾಲೆಗೆ ಹೋದಾಗ, ಅಲ್ಲಿ ನಾವು ಕೇವಲ ಮೂರು ದಿನ ಮಾತ್ರ ಇದ್ದೆವು. ನಮಗೆ ಅಲ್ಲಿ ಓದಲು ಸಾಧ್ಯವಾಗಲಿಲ್ಲ. ಮೊದಮೊದಲು ಇದು ಹೊಸ ಸ್ಥಳವಾದ ಕಾರಣ ಹೀಗೆ ಆಗುತ್ತಿದೆ ಎಂದು ನಾವು ಭಾವಿಸಿದ್ದೆವು. ಆ ವ್ಯಕ್ತಿ (ಶಿಕ್ಷಕ) ನಮಗೆ ಹೊಡೆಯುವುದಿಲ್ಲ ಎಂದು ನಾನು ಭಾವಿಸಿದ್ದೆ". ನನ್ನ ಗೆಳತಿ ನಾವು ಪುಸ್ತಕವನ್ನು ತೆರೆದು ಕುಳಿತುಕೊಳ್ಳಬೇಕಷ್ಟೇ, ಅವರು ಹೊಡೆಯುವುದಿಲ್ಲ ಎಂದು ನನಗೆ ಭರವಸೆ ನೀಡಿದ್ದಳು. ಆದರೆ ಅದು ಖಾಲಿ ನೋಟ್ ಬುಕ್ ಆಗಿತ್ತು. ಶಿಕ್ಷಕರು ಬೋರ್ಡ್ ಅನ್ನು ದೊಡ್ಡ ದೊಡ್ಡ ವಾಕ್ಯಗಳಿಂದ ತುಂಬುತ್ತಿದ್ದರು. ನನಗೆ ಓದುವುದು ಹೇಗೆಂದು ತಿಳಿದಿರಲಿಲ್ಲ, ಆದರೆ ಶಿಕ್ಷಕರು ಬೇರೆ ಏನನ್ನೂ ಕಲಿಸುವುದಿಲ್ಲ ಎಂದು ಹೇಳಿದರು. 'ಹಾಗಾಗಿ ನಾವು ಬೇರೆ ಯಾವುದಾದರೂ ಶಾಲೆಯಲ್ಲಿ ಓದುತ್ತೇವೆಂದು 'ನನ್ನ ಗೆಳತಿ ಹೇಳಿದಳು'. ಶಿಕ್ಷಕರು ತಲೆಕೆಡಿಸಿಕೊಂಡಂತೆ ಕಾಣಲಿಲ್ಲ. 'ಸರಿ ಹೋಗಿ' ಎಂದು ಸುಮ್ಮನಾದರು. ಸುಗಮಕಾರರಾಗಿ, ನಾವು ಶಾಲೆಯ ಬಗ್ಗೆ ಕೆಲವಾದರೂ ಸಕಾರಾತ್ಮಕ ಅನುಭವಗಳನ್ನು ಪಡೆದುಕೊಳ್ಳಲು ಪ್ರಯತ್ನಿಸಿದೆವು. ಆದರೆ ಅಂತಹ ಯಾವ ಅನುಭವವೂ ಇರಲಿಲ್ಲ.

ಅವರ ಭಾಷೆ ಮತ್ತು ಹೊರಗಿನ ಪ್ರಪಂಚಕ್ಕೆ ಸಂಬಂಧಿಸಿದ ಅನುಭವಗಳು

18 ವರ್ಷದ ಹದಿಹರೆಯದ ಹುಡುಗಿಯೊಬ್ಬಳು ತನ್ನ ಸ್ನೇಹಿತೆಯರೊಂದಿಗೆ ತನ್ನ ಭಾಷೆಯಲ್ಲಿ (ಪಾರ್ಧಿ) ಮಾತನಾಡುವಾಗ ಇತರ ಮಕ್ಕಳು ಅವರು ತಮ್ಮ ಬಗ್ಗೆ ಮಾತನಾಡಿಕೊಳ್ಳುತ್ತಿದ್ದಾರೆ ಎಂದು ಭಾವಿಸಿ ಶಿಕ್ಷಕರಿಗೆ ದೂರು ನೀಡುತ್ತಿದ್ದರು. 'ಮಧ್ಯಾಹ್ನದ ಊಟದ ವೇಳೆಯಲ್ಲಿ ಇತರ ಮಕ್ಕಳು ನಾವು ಪಾರ್ಧಿಗಳು ಎಂಬ ಕಾರಣಕ್ಕೆ ನಮ್ಮಿಂದ ದೂರ ಕುಳಿತುಕೊಳ್ಳುತ್ತಿದ್ದರು' ಎಂಬುದನ್ನು ಹಂಚಿಕೊಂಡಳು. ಇಂತಹದ್ದೇ ಅನುಭವವನ್ನು ಕಂಜರ್ ಸಮುದಾಯದ ಮಗುವೊಂದು ಹಂಚಿಕೊಂಡಿತು. 'ನಾನು ಮೊದಲು ಶಾಲೆಗೆ ಹೋಗುತ್ತಿದ್ದಾಗ, ನನ್ನ ಶಾಲೆಯ ಮಕ್ಕಳು ನಮ್ಮನ್ನು ಮತ್ತು ನಮ್ಮ ಭಾಷೆಯನ್ನು ಅಪಹಾಸ್ಯ ಮಾಡುತ್ತಿದ್ದರು' ಎಂದು ಅವಳು ಬರೆದಿದ್ದಾಳೆ. 'ಯಾರಾದರೂ ಅವರನ್ನು ಗೇಲಿ ಮಾಡಿದರೆ, ಅವರಿಗೆ ಹೇಗೆ ಅನಿಸುತ್ತದೆ? ನಾವು ಬೇರೆ ಭಾಷೆ ಮಾತನಾಡುತ್ತೇವೆ ಎಂಬ ಕಾರಣಕ್ಕೆ ಯಾರೂ ನಮ್ಮನ್ನು ನಿಂದಿಸಬಾರದು'.

ವಯಸ್ಕರ ಮುಂದೆ ತಮ್ಮ ಅಭಿಪ್ರಾಯಗಳನ್ನು ಮುಂದಿಡುವ ಅನುಭವಗಳು

14 ವರ್ಷದ ಬಾಲಕಿಯೊಬ್ಬಳು ತನ್ನ ತಾಯಿಯು ತನ್ನನ್ನು ಕೆಲವೊಮ್ಮೆ ಭಿಕ್ಷೆ ಬೇಡಲು ಕಳುಹಿಸುತ್ತಿದ್ದಳು, ಆದರೆ ಅದು ತನಗೆ ಇಷ್ಟವಿರಲಿಲ್ಲ ಎಂದು ಹಂಚಿಕೊಂಡಳು. ಚಿಂದಿ ಆಯಲು ಕೂಡಾ ಹೋಗದಿದ್ದರೆ ಅವಳ ತಾಯಿಯು ಅವಳ ಮೇಲೆ ಕೋಪಗೊಳ್ಳುತ್ತಿದ್ದಳು. ಅವಳು ತನ್ನ ತಾಯಿಗೆ ತುಂಬಾ ಹೆದರುತ್ತಿದ್ದಳು (ಈಗಲೂ ಸಹ ಹೆದರುತ್ತಾಳೆ). ಆದ್ದರಿಂದ ತನಗೆ ಭಿಕ್ಷೆಗೆ ಹೋಗಲು ಇಷ್ಟವಿಲ್ಲ ಎಂದು ಅವಳಿಗೆ ಹೇಳಲು ಸಾಧ್ಯವಾಗಲಿಲ್ಲ. ಆದರೆ ಒಂದು ದಿನ ಧೈರ್ಯ ತಂದುಕೊಂಡು ಅಮ್ಮನಿಗೆ ಹೇಳಿದಳು. ಅವಳ ತಾಯಿ ಅವಳನ್ನು ಭಿಕ್ಷೆಗೆ ಕಳುಹಿಸುವುದನ್ನು ನಿಲ್ಲಿಸಿ ಶಾಲೆಗೆ ಸೇರಿಸಿದಳು. ಈ ಲೇಖಕಿಯರಲ್ಲಿ ಒಬ್ಬಳು ತನ್ನ ಶಾಲಾ ಜೀವನದ ವೈಯಕ್ತಿಕ ಅನುಭವವನ್ನು ಸಹ ಹಂಚಿಕೊಂಡಿದ್ದಾಳೆ. 'ನಾನು ಹತ್ತನೇ ತರಗತಿಯಲ್ಲಿದ್ದಾಗ, ಗಣಿತ ಶಿಕ್ಷಕರಾದ ತಿವಾರಿ ಸರ್ ಅವರು ಯಾವಾಗಲೂ ನನ್ನನ್ನು ಕಪ್ಪುಹಲಗೆಯ ಬಳಿ ಕರೆದು ಸಮಸ್ಯೆಯನ್ನು ವಿವರಿಸದೆ, ಅದನ್ನು ಪರಿಹರಿಸುವಂತೆ ನನಗೆ ಸೂಚಿಸುತ್ತಿದ್ದರು. ನನಗೆ ಅದು ಸಾಧ್ಯವಾಗದಿದ್ದಾಗ, ಅವರು ನನ್ನ ಜಡೆಯನ್ನು ಎಳೆಯುತ್ತಿದ್ದರು. ಇದು ಹಲವಾರು ದಿನಗಳವರೆಗೆ ನಡೆಯಿತು. ನಾನು ಅವರನ್ನು ಕಂಡರೆ ಹೆದರುತ್ತಿದ್ದೆ ಮತ್ತು ಅವರ ತರಗತಿಯನ್ನು ತಪ್ಪಿಸಿಕೊಳ್ಳಲು ಬಯಸುತ್ತಿದ್ದೆ. ಒಂದು ದಿನ ಅವರು ಪಾಠ ಮುಗಿಸಿ ಹೋಗುವಾಗ ನಾನು ಧೈರ್ಯ ತಂದುಕೊಂಡು ಅವರ ಹಿಂದೆ ಓಡಿದೆ. ಅವರು ನನಗೆ ಹೀಗೇಕೆ ಮಾಡುತ್ತಾರೆ ಎಂದು ನೇರವಾಗಿ ಕೇಳಿದೆ. ಅದಕ್ಕೆ, ಸರ್ ನಾನು ಉತ್ತಮ ಸಾಧನೆ ಮಾಡಬೇಕೆಂಬ ಕಾರಣಕ್ಕೆ ಹಾಗೆ ಮಾಡುತ್ತೇನೆ ಎಂದು ತಣ್ಣಗೆ ಪ್ರತಿಕ್ರಿಯಿಸಿದರು. ಪ್ರತಿಯಾಗಿ ಏನು ಹೇಳಬೇಕೆಂದು ನನಗೆ ತಿಳಿಯಲಿಲ್ಲ. ಆದರೆ ಅದಾದ ನಂತರ ಅವರು ನನ್ನ ಜಡೆ ಎಳೆಯುವುದನ್ನು ನಿಲ್ಲಿಸಿದರು. ನಾನೂ ಸಹ ಅವರ ಬಗ್ಗೆ ಭಯ ಪಡುವುದನ್ನು ನಿಲ್ಲಿಸಿದೆ'.

ಮಕ್ಕಳ ಅಭಿವ್ಯಕ್ತಿಗಳು ಈ ಕೆಳಗಿನವುಗಳನ್ನು ಸ್ಪಷ್ಟವಾಗಿ ಸೂಚಿಸುತ್ತವೆ:

1. ಮಕ್ಕಳು ತಾರತಮ್ಯವನ್ನು ಗುರುತಿಸುತ್ತಾರೆ. ಅದು ಭಾಷೆ ಅಥವಾ ಜಾತಿ ಅಥವಾ ಬೇರೆ ಯಾವ ಕಾರಣಕ್ಕೆ ಎಂಬುದನ್ನು ವಿಶ್ಲೇಷಿಸಲು ಅವರಿಗೆ ಸಾಧ್ಯವಾಗದಿರ-ಬಹುದು, ಆದರೆ ತಮ್ಮನ್ನು ಕೀಳಾಗಿ ನಡೆಸಿಕೊಂಡಿರುವ ಅನುಭವವನ್ನು ಅಲಕ್ಷ್ಯಕ್ಕೆ ಒಳಗಾದ ಸಮುದಾಯಗಳ ಅನೇಕ ಮಕ್ಕಳು ಸಮಾಜದಿಂದ ನಿರಂತರವಾಗಿ ಅನುಭವಿಸುತ್ತಿರುತ್ತಾರೆ. ಅದೂ ಕೂಡ ತುಂಬಾ ಪ್ರಭಾವಶಾಲಿಯಾದ ವಯಸ್ಸಿನಲ್ಲಿ. ಇದು ಅವರು ಬೆಳೆದಂತೆ ಅವರ ವ್ಯಕ್ತಿತ್ವದ ಮೇಲೆ ಗಮನಾರ್ಹ ಮತ್ತು ಶಾಶ್ವತವಾದ ಪ್ರಭಾವವನ್ನು ಬೀರುವ ಸಾಧ್ಯತೆಯಿದೆ.

2. ಮಕ್ಕಳ ಋಣಾತ್ಮಕ ಅನುಭವಗಳು ಅವರ ಮನಸ್ಸಿನಲ್ಲಿ ಪದರಗಳಾಗಿ ಉಳಿದುಬಿಡುತ್ತವೆ. ಅವರು ಹೇಗೆ ಹೊಡೆಸಿಕೊಂಡರು ಎಂಬ ವಿವರಗಳು ಅವರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿವೆ ಮತ್ತು ಇವುಗಳನ್ನು ಅವರ ಅಭಿವ್ಯಕ್ತಿಗಳಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ. ಸಾಮಾನ್ಯವಾಗಿ ಮಕ್ಕಳು, ಅಲ್ಲಿ ಯಾರ್ಯಾರಿದ್ದರು, ಏನೇನಾಯಿತು ಎಂಬಂಥ ವಿವರಗಳನ್ನು ಹಂಚಿ-ಕೊಳ್ಳುತ್ತಾರೆ. ಅವು ಅವರ ಅನುಭವದ ಮೇಲೆ ಪ್ರಭಾವ ಬೀರುವುದಿಲ್ಲ. ಆದರೆ ಮಗುವಿನ ಸ್ಮರಣೆಯಲ್ಲಿ ಮಹತ್ವದ್ದಾಗಿವೆ. ಈ ಸ್ಪಷ್ಟತೆಯು ಅದನ್ನು ಹೆಚ್ಚು ನೈಜ ಮತ್ತು ನಂಬಲರ್ಹವಾಗಿಸುತ್ತದೆ ಎಂದು ಅವಳು/ಅವನು ನಂಬಿರುವ ಸಾಧ್ಯತೆಯಿದೆ. ಅಥವಾ ಅವಳು/ಅವನು ಘಟನೆಯನ್ನು ಅದರ ವಿವರಗಳಿಂದ ಪ್ರತ್ಯೇಕಿಸಲು ಇನ್ನೂ ಸಾಧ್ಯವಾಗಿರಲಿಕ್ಕಿಲ್ಲ. ಈ ರೀತಿಯ ಸ್ವಭಾವವನ್ನು ಅಭಿವ್ಯಕ್ತಗೊಳಿಸುವುದು ಮಕ್ಕಳ ಪಾಲಿಗೆ ಚಿಕಿತ್ಸಕ ಗುಣವನ್ನು ಹೊಂದಿರುತ್ತದೆ. ಅವರು ಅದಕ್ಕೆ ಧ್ವನಿ ರೂಪ ನೀಡಿದಾಗ ವಯಸ್ಕರು ಅವರು ಭಾವಿಸಿದ್ದನ್ನು ಮತ್ತು ಅನುಭವಿಸಿದ್ದನ್ನು ಮಾನ್ಯ ಮಾಡುತ್ತಾರೆ.

3. ಗುಂಪು ಪ್ರಕ್ರಿಯೆಯ ಮೂಲಕ ಈ ಅನುಭವಗಳನ್ನು ತರಗತಿಯಲ್ಲಿ ಹಂಚಿಕೊಂಡಾಗ, ಇದು 'ನನಗೆ' ಮಾತ್ರ ಸಂಭವಿಸಿಲ್ಲ ಎಂದು ಪ್ರತಿ ಮಗುವಿಗೂ ಅರಿವಾಗುತ್ತದೆ. ಮಕ್ಕಳು ತುಂಬಾ ಚಿಕ್ಕವರಾಗಿದ್ದರೂ ಸಹ, ಅವರು ಈ ದತ್ತಾಂಶವನ್ನು – ಅನುಭವಗಳ ಒಂದು ಗುಚ್ಛ – ಬಳಸಿಕೊಂಡು ವಿಮರ್ಶಾತ್ಮಕವಾಗಿ ವಿಶ್ಲೇಷಿಸಲು ಸಮರ್ಥರಾಗಿರುತ್ತಾರೆ. ಇದು ಸಮಾಜದ ಕಾರ್ಯ-ಚಟುವಟಿಕೆಯ ಭಾಗವಾಗಿದೆ ಮತ್ತು 'ನನ್ನ' ತಪ್ಪು ಅಲ್ಲ ಎಂದು ತಿಳಿದುಕೊಳ್ಳುತ್ತಾರೆ. ಸಾಮಾಜಿಕ ನ್ಯಾಯದ ಮೌಲ್ಯಗಳ ಮೇಲೆ ಆಧಾರಿತವಾದ ಶಿಕ್ಷಣಕ್ಕೆ ಇದು ಅವಶ್ಯಕವಾಗಿದೆ.

4. ನಮ್ಮ ಸಂಸ್ಕೃತಿಯಲ್ಲಿ, ಮಗು ಮತ್ತು ವಯಸ್ಕರಿಬ್ಬರೂ (ಶಿಕ್ಷಕ, ಪೋಷಕರು ಅಥವಾ ಪೋಷಕ/ಹಿರಿಯರ ರೂಪದ ಯಾವುದೇ ವ್ಯಕ್ತಿ) ವಿಭಿನ್ನವಾಗಿ ಯೋಚಿಸಬಹುದು, ಮಗುವಿನ ಆಲೋಚನೆಯು ಸಹ ಮೌಲ್ಯಯುತವಾದದ್ದು ಎಂಬುದು ಸ್ವೀಕಾರಾರ್ಹವಾಗಿಲ್ಲ. ಆದ್ದರಿಂದ, ಅಂತಹ ಚರ್ಚೆಗಳು ತರಗತಿಗಳಲ್ಲಿ ನಡೆಯುವುದಿಲ್ಲ.

5. 'ತಮ್ಮನ್ನು ವಿರೋಧಿಸುವವರು' ಎಂದು ಮಕ್ಕಳು ವರ್ಗೀಕರಿಸಿದವರ ಬಗೆಗಿನ ನೋವು ಅಥವಾ ಕೋಪದ ಅನುಭವಗಳನ್ನು ಹಂಚಿಕೊಳ್ಳಬಹುದಾದರೂ, ಅವರಲ್ಲಿ ಹೆಚ್ಚಿನವರು ತಮ್ಮ 'ರಕ್ಷಕ'ರನ್ನು ಸವಾಲೊಡ್ಡುವ ಪರಿಸ್ಥಿತಿಯಲ್ಲಿ ನಿಲ್ಲಿಸಿ ನೋಡುವುದು, ಅವರಿಗೆ ಸುಲಭವಲ್ಲ. ಬಹುಶಃ ಮಗುವಿನ ಮನಸ್ಸಿನಲ್ಲಿ ಯಾವುದೋ ಒಂದು ತರ್ಕವಿರಬಹುದು. ಅದು ಆ ವ್ಯಕ್ತಿಯು ತನ್ನ ಚೌಕಟ್ಟಿನಲ್ಲಿ ಇಲ್ಲದೆ ತಾನು "ಸ್ವಯಂ" ಎಂಬ ಪರಿಕಲ್ಪನೆಯನ್ನು ರಚಿಸಿಕೊಳ್ಳಲು ಕಷ್ಟವಾಗುತ್ತದೆ' ಎಂದು ಆ ತರ್ಕವು ಹೇಳುತ್ತಿರಬಹುದು.

ವಿವಿಧ ಸಾಮಾಜಿಕ-ಆರ್ಥಿಕ ಗುಂಪುಗಳ ವಿದ್ಯಾರ್ಥಿಗಳ ನಡುವೆ ಅನೇಕ ಸಂಭಾಷಣೆಗಳನ್ನು ತೆರೆದಿಡಲು ಸ್ಕೂಲ್ ಮೇ ಸೀಖಾ ಔರ್ ಸಿಖಾಯಾ ಕಥೆಯನ್ನು ಬಳಸಬಹುದು ಎಂಬುದು ಸ್ಪಷ್ಟವಾಗಿದೆ.

ಶಿಕ್ಷಾರ್ಥಿಗಳು, ಶಿಕ್ಷಕರ ನಡವಳಿಕೆ, ಕಲಿಕೆಯ ತೊಂದರೆಗಳು, ಗೆಳೆಯರೊಂದಿಗೆ ಹೊಂದಾಣಿಕೆ, ಹಿಂಸೆ ಮತ್ತು ನಿಂದನೆ ಮುಂತಾದ ಶಾಲಾ ಜೀವನದ ಅಂಶಗಳಲ್ಲಿ ಒಂದು ಅಥವಾ ಹಲವು ಅಂಶಗಳೊಂದಿಗೆ ತೊಂದರೆಗಳನ್ನು ಹೊಂದಿರಬಹುದು. ಇಂತಹ ಚರ್ಚೆಗಳು ಶಾಲೆಗಳಿಗೂ ಸಹ ಪ್ರತಿಫಲನ ಮಾಡಿಕೊಳ್ಳುವ ಅವಕಾಶಗಳಾಗಿವೆ.

ಇಲ್ಲಿಯವರೆಗೆ ವಿವರಿಸಿದ ಪಾರಸ್ಪರಿಕ ಕ್ರಿಯೆಯು ಶಾಲಾ ವ್ಯವಸ್ಥೆಯು ಮಕ್ಕಳಿಗೆ ಬೇರೆ ರೀತಿಯಲ್ಲಿ ಹೊಂದಿಕೊಳ್ಳುವ ಅಗತ್ಯವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಈ ಕಥೆಯನ್ನು ವಿಮರ್ಶಿಸಿದ ಅಂಜಲಿ ನೊರೊನ್ಹಾರವರು[ii] "ಇಲ್ಲಿ ವಿವರಿಸಿದ ಮಕ್ಕಳ ಅನುಭವಗಳು ಸಾರ್ವತ್ರಿಕವಾಗಿವೆಯೆಂದು ಕಂಡುಕೊಳ್ಳುತ್ತಾರೆ".

## ಕಥೆಗಳಲ್ಲಿ ಮಕ್ಕಳ ಕರ್ತೃತ್ವತೆ

ಮೇಲೆ ನೋಡಿದಂತೆ, ಕಥೆಗಳು ಸಂಭಾಷಣೆಗಳನ್ನು ಪ್ರಾರಂಭಿಸಲು ನಮಗೆ ಒಂದು ಸುರಕ್ಷಿತ ಅವಕಾಶ ಮಾಡಿಕೊಡುತ್ತವೆ. ಅವುಗಳು ತುಂಬಾ ವೈಯಕ್ತಿಕವಾಗಿ ಇರದಿದ್ದರೂ ನಾವು ಪ್ರತಿಫಲಿಸಲು ಮತ್ತು ಉದ್ದೇಶಪೂರ್ವಕವಾಗಿ ಪ್ರಾರಂಭಿಸಬಹುದಾದ ದತ್ತಾಂಶ ಅಥವಾ ವಿಷಯವನ್ನು ಒದಗಿಸುತ್ತವೆ. ಇದಕ್ಕಾಗಿ ನಮಗೆ

ಮಕ್ಕಳನ್ನು ಕೇಂದ್ರವನ್ನಾಗಿ ಹೊಂದಿರುವ, ಕೇವಲ ಪಾತ್ರವಾಗಿ ಮಾತ್ರವಲ್ಲದೆ, ಮಗುವಿನ ವಿಶ್ವ ದೃಷ್ಟಿಕೋನವು ವಯಸ್ಕರ ದೃಷ್ಟಿಕೋನದೊಂದಿಗೆ ಸಂಘರ್ಷದಲ್ಲಿರುವ ಅಥವಾ ಮಕ್ಕಳ ಗುಂಪಿನಲ್ಲಿ ವಿಭಿನ್ನ ದೃಷ್ಟಿಕೋನಗಳಿರುವ ಕಥೆಗಳನ್ನು ನೀಡುವ ಪುಸ್ತಕಗಳು ಬೇಕು.

ಸ್ಕೂಲ್ ಮೇ ಸೀಖಾ ಔರ್ ಸಿಖಾಯಾ ಕಥೆಯಲ್ಲಿನ ಒಂದು ವಿಮರ್ಶಾತ್ಮಕ ಅಂಶವೆಂದರೆ ಈ ಕಥೆಯಲ್ಲಿ ಮಕ್ಕಳ ಹಲವಾರು ಹಂತದ ಧ್ವನಿಗಳು ಕೇಳಿ ಬರುತ್ತಿವೆ. ಮೊದಲನೆಯದಾಗಿ, ಕಥೆಯು ಮಗುವಿನಿಂದ ಬರೆಯಲ್ಪಟ್ಟಿದೆ; ಎರಡನೆಯದಾಗಿ, ಮಕ್ಕಳ ಭಾವನೆಗಳು ಇಲ್ಲಿ ಚೆನ್ನಾಗಿ ಹೊರಹೊಮ್ಮಿವೆ; ಮತ್ತು ಕೊನೆಯದಾಗಿ ಮಕ್ಕಳು ಸಾಮೂಹಿಕವಾಗಿ ಯೋಜನೆಯನ್ನು ರೂಪಿಸಿ ಅವುಗಳನ್ನು ಕಾರ್ಯಗತಗೊಳಿಸುತ್ತಾರೆ. ಮಕ್ಕಳ ದೃಷ್ಟಿಕೋನವನ್ನು ಅರ್ಥಮಾಡಿಕೊಳ್ಳುವ ಮತ್ತು ಸ್ವೀಕರಿಸುವ ಒಬ್ಬ ವ್ಯಕ್ತಿ ಎಂದರೆ, ಅದು ಶಿಕ್ಷಕ. ಇದು ಕಥೆಗೆ ನಿರ್ಣಯ ಮತ್ತು ಸುಖಾಂತ್ಯವನ್ನು ನೀಡುತ್ತದೆ. ಜೀವನದಲ್ಲಿ ಇದು ಯಾವಾಗಲೂ ಸಾಧ್ಯವಾಗದಿರಬಹುದು. ಆದ್ದರಿಂದ, ಮಕ್ಕಳ ಕರ್ತೃತ್ವವನ್ನು ಸ್ಪಷ್ಟವಾಗಿ ಸ್ಥಾಪಿಸುವುದು ಹೆಚ್ಚು ಮುಖ್ಯವಾಗುತ್ತದೆ.

"ಒಬ್ಬರ ಕ್ರಿಯೆಗಳು ಉದ್ದೇಶಪೂರ್ವಕವಾಗಿ ಕೆಲವು ಪರಿಣಾಮಗಳನ್ನು ಉಂಟುಮಾಡುತ್ತವೆ" ಎಂದು ಬಂಡೂರರವರು (2017)[iii] ಕರ್ತೃತ್ವವನ್ನು ವ್ಯಾಖ್ಯಾನಿಸಿದ್ದಾರೆ; ಮ್ಯಾಥೀಸ್ (2016)[iv] 'ಕರ್ತೃತ್ವವನ್ನು ಇಲ್ಲಿ ಒಬ್ಬರ ಅಸ್ಮಿತೆ ಮತ್ತು ಗ್ರಹಿಕೆಗಳನ್ನು ಗೋಚರಿಸುವಂತೆ ಮಾಡುವ ಮತ್ತು ಒಬ್ಬರ ಜೀವನದ ವೈಯಕ್ತಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳನ್ನು ಹೆಚ್ಚಿಸಲು ಮತ್ತು ಸಬಲೀಕರಣಗೊಳಿಸಲು ಇತರರಿಂದ ಸಕ್ರಿಯವಾಗಿ ಅಂಗೀಕರಿಸಲ್ಪಡುವುದು' ಎಂದು ವ್ಯಾಖ್ಯಾನಿಸುತ್ತಾರೆ. ಮುಂದುವರಿದು, 'ಲೇಖಕರು ಮತ್ತು ಸಚಿತ್ರಕಾರರು ಕರ್ತೃತ್ವವನ್ನು ಮತ್ತಷ್ಟು ಉತ್ಕೃಷ್ಟಗೊಳಿಸುವ ಸಂದರ್ಭಗಳು ಮತ್ತು ಪಾತ್ರಗಳನ್ನು ರಚಿಸುವ ಶಕ್ತಿಯನ್ನು ಹೊಂದಿದ್ದಾರೆ' ಎಂದು ಮ್ಯಾಥೀಸ್ ಸೇರಿಸುತ್ತಾರೆ.ಚರ್ಚೆಯಲ್ಲಿರುವ ಕಥೆಯು ಪಠ್ಯದ ಮೂಲಕ ಅಂಚಿಗೆ ದೂಡಲ್ಪಟ್ಟಿರುವ ಸಮುದಾಯದ ಮಗುವಿನ ಸಾಂಸ್ಕೃತಿಕ ಹಿನ್ನೆಲೆ ಮತ್ತು ಆಕಾಂಕ್ಷೆಗಳನ್ನು ಪ್ರಸ್ತುತಪಡಿಸಲು ಸಮರ್ಥವಾಗಿರುತ್ತದೆ. ಇದೇ ಸಮಯದಲ್ಲಿ ರೇಖಾಚಿತ್ರಗಳು ನಮಗೆ ಕಥಾನಾಯಕನ ಜೀವನ ಪರಿಸ್ಥಿತಿಗಳಿಗೆ ಸಂದರ್ಭವನ್ನು ಒದಗಿಸುತ್ತವೆ. ಶಾಲೆಯ ಬಗ್ಗೆ ತಿಳಿಸುವ ಮಕ್ಕಳ ಸಾಹಿತ್ಯ ನಮ್ಮ ಸುತ್ತಮುತ್ತ ಸಾಕಷ್ಟು ಇದೆ. ಆದಾಗ್ಯೂ, ಹೆಚ್ಚಿನ ಕಥೆಪುಸ್ತಕಗಳು ಮೊದಲ ಬಾರಿಗೆ ಶಾಲೆಗೆ ಹೋಗುವವರನ್ನು ಶಾಲೆಗೆ ಅಥವಾ ಅದೇ ರೀತಿಯ ವ್ಯವಸ್ಥೆಗೆ ಸಿದ್ಧಪಡಿಸುವ ಕಲ್ಪನೆಯೊಂದಿಗೆ ಮುಖ್ಯವಾಹಿನಿಯ ವ್ಯವಸ್ಥೆಯಲ್ಲಿ ಮಕ್ಕಳನ್ನು ಏಕೀಕರಣಗೊಳಿಸುವುದರ ಸುತ್ತ ಸುತ್ತುತ್ತವೆ. ಶಾಲೆಯ ಒಳಗೆ ಮಗುವಿನ ಕರ್ತೃತ್ವವನ್ನು ಪ್ರದರ್ಶಿಸುವ ಪುಸ್ತಕಗಳು ಬೆರಳೆಣಿಕೆಯಷ್ಟು ಮಾತ್ರ ಇವೆ. ಈ ವಿಷಯ ಕುರಿತು ಪ್ರಥಮ್ ಬುಕ್ಸ್ ಪ್ರಕಟಿಸಿದ ಹಲವಾರು ಪುಸ್ತಕಗಳಲ್ಲಿ ಶಬ್ನಮ್ ಮಿನ್ವಾಲಾ (2020) ಬರೆದ ದಿ ರೈಟ್ ವೇ ಸ್ಕೂಲ್, ಮಗುವಿನ ಸ್ವಾಭಾವಿಕ ವ್ಯಕ್ತಿತ್ವಕ್ಕೆ, ಅಂದರೆ ಅದರ ಜಿಜ್ಞಾಸೆಯ ಬಗ್ಗೆ ಅಥವಾ ಅದು ಹೇಗೆ ಬಟ್ಟೆ ಧರಿಸುತ್ತದೆ ಮತ್ತು ಹೇಗೆ ಕಾಣುತ್ತದೆ ಎಂಬುದಕ್ಕೂ ಅವಕಾಶವನ್ನು ನೀಡುತ್ತದೆ. ವಿದ್ರೋಹ್ ಕಿ ಥಾಪ್ ಥಾಪ್ (ಮುಸ್ಕಾನ್, 2020) ಅಂತಹ ಇನ್ನೊಂದು ಪುಸ್ತಕವಾಗಿದ್ದು, ಬರಹಗಾರ ರಿಂಚಿನ್ ಮಗು–ಕೇಂದ್ರಿತ ಬೋಧನಾ ವಿಧಾನವು ಶಿಕ್ಷಕಿಯನ್ನು ವಿದ್ಯಾರ್ಥಿ ಸ್ನೇಹಿಯನ್ನಾಗಿ ಮಾಡುತ್ತದೆ ಮತ್ತು ಮಕ್ಕಳ ಪಾಲಿಗೆ ತುಂಬಾ ಸ್ನೇಹಪರ ವ್ಯಕ್ತಿಯಂತೆ ಚಿತ್ರಿಸುತ್ತದೆ. ಆದರೆ ಶಿಕ್ಷಕಿಯು ತನ್ನ ವಯಸ್ಕ ಸ್ಥಾನದಿಂದ ಕಾರ್ಯನಿರ್ವಹಿಸುತ್ತಿದ್ದಾಳೆ ಎಂಬುದು ಸ್ಪಷ್ಟವಾದಾಗ ಕಥೆಯು ತಿರುವು ಪಡೆಯುತ್ತದೆ. ಅವರು ನಿಜವಾಗಿಯೂ ಮಕ್ಕಳನ್ನು ಸ್ವೀಕರಿಸಲು ಬಯಸಿದರೆ, ಅವರಲ್ಲಿ ಆಂತರಿಕ ರೂಪಾಂತರದ ಅಗತ್ಯವಿದೆ.ಹೆಚ್ಚಿನ ಪುಸ್ತಕಗಳನ್ನು ವಯಸ್ಕರು ಬರೆಯುತ್ತಾರೆ. ಅಲ್ಲಿ ವಯಸ್ಕರ ದೃಷ್ಟಿಕೋನದಿಂದ ಪಡೆದ ಮಗುವಿನ ಗ್ರಹಿಕೆಯು (ಅಥವಾ ಅವರ ಬಾಲ್ಯದ ನೆನಪುಗಳು) ವಿಷಯವನ್ನು ನಿರ್ಧರಿಸುತ್ತದೆ. ಆದರೆ ನಾವು ಚಿಕ್ಕ ಮಕ್ಕಳು ಮತ್ತು ಹದಿಹರೆಯದ ಮಕ್ಕಳನ್ನು ಅವರ ಕಥಾಪುಸ್ತಕಗಳ ಲೇಖಕರಾಗುವಂತೆ ಪ್ರೋತ್ಸಾಹಿಸಿದರೆ, ಮಕ್ಕಳು ತಮ್ಮ ಅನಿಸಿಕೆ ಮತ್ತು ಭಾವನೆಗಳನ್ನು ಹಂಚಿಕೊಳ್ಳಲು ಮತ್ತು ಮಕ್ಕಳ ದೃಷ್ಟಿಕೋನಗಳನ್ನು ಗೌರವಿಸಲು ಒಂದು ಅವಕಾಶವನ್ನು ನಿರ್ಮಿಸಲು ಇದು ಆರಂಭಿಕ ಹೆಜ್ಜೆಯಾಗುತ್ತದೆ.

ಮಕ್ಕಳ ಧ್ವನಿಗೆ ಅವಕಾಶ ನೀಡುವ ಕಥೆಗಳು ಶಾಲೆಯನ್ನು ಪ್ರವೇಶಿಸಿದಾಗ ಶಾಲೆಯ ಪ್ರಕ್ರಿಯೆಗಳ ಕುರಿತು ಚರ್ಚೆಗಳು ಮತ್ತು ಪ್ರಶ್ನೆಗಳು ತೆರೆದುಕೊಳ್ಳುವ ಸಾಧ್ಯತೆ ಇದೆಯೇ? ಥಾಮ್ಸನ್ ಮತ್ತು ಜಾನ್ಸನ್ (2007),[v] ಶಿಕ್ಷಕರೂ ಸಹ ಮಕ್ಕಳನ್ನು 'ಅತ್ಯಂತ ಸೃಜನಶೀಲರು, ಹೆಚ್ಚಿನ ಒಳನೋಟ ಮತ್ತು ತಿಳುವಳಿಕೆ ಹೊಂದಿದ್ದಾರೆ!' ಎಂಬ ದೃಷ್ಟಿಕೋನದಿಂದ ನೋಡುತ್ತಾ ಅವರ ಕರ್ತೃತ್ವವನ್ನು ಒಪ್ಪಿಕೊಳ್ಳಬೇಕು ಎಂದು ಒತ್ತಿಹೇಳುತ್ತಾರೆ. ನಿಕಿತಾ ಬರೆದ ಕಥೆಯಲ್ಲಿನ ಶಿಕ್ಷಕರಂತೆ, ವಯಸ್ಕರು ಮಕ್ಕಳ ಮಾತುಗಳನ್ನು ಕೇಳಲು, ಅವರ ಸ್ವಂತ ದೌರ್ಬಲ್ಯಗಳನ್ನು ಗುರುತಿಸಲು ಮತ್ತು ನಮ್ಮ ನಡವಳಿಕೆಗಳು ಮತ್ತು ನಮ್ಮ ವಿಧಾನಗಳು ಮಕ್ಕಳನ್ನು ಹೇಗೆ ದೂರವಿಡುತ್ತವೆ ಎಂಬುದನ್ನು ಗುರುತಿಸಲು ಸಿದ್ಧರಿದ್ದರೆ, ಬಹುಶಃ ನಾವು ಶಾಲೆಯನ್ನು ಸುರಕ್ಷಿತವಾಗಿ ಅಭಿವೃದ್ಧಿಪಡಿಸಲು ಮೊದಲ ಹೆಜ್ಜೆ ಇಡುತ್ತೇವೆ ಮತ್ತು ಎಲ್ಲಾ ಮಕ್ಕಳಿಗೆ ಅದು ಸಂತೋಷದ ಸ್ಥಳವಾಗುತ್ತದೆ.

**ಅಡಿ ಟಿಪ್ಪಣಿಗಳು:**

i Lalit, R. (2022) The Cultivation of Safe Spaces Within Schools. Available at: https://feminisminindia.com/2022/01/21/the-cultivation-of-safe-spaces-within-schools/

ii The Book Review, November 2022, Pg. 62

iii Bandura A (2017) Toward a psychology of human agency: pathways and reflections. Perspectives on Psychological Science, 13(2):130–136

iv Janelle B. Mathis (2016) Literature and the Young Child: Engagement, Enactment, and Agency from a Sociocultural Perspective, Journal of Research in Childhood Education, Volume 30, 2016 - Issue 4

v Quoted in Reflecting on childhood and child agency in history: Haring, U. et al. (2019) Palgrave Communications | https://doi.org/10.1057/s41599-019-0259-0

---



**ಜ್ಯೋತಿ ದೇಶಮುಖ್** ಅವರು ಕಳೆದ ಒಂಬತ್ತು ವರ್ಷಗಳಿಂದ ಭೋಪಾಲ್ ಮೂಲದ ಲಾಭೋದ್ದೇಶವಿಲ್ಲದ ಸಂಸ್ಥೆ ಮುಸ್ಕಾನ್ನಲ್ಲಿ ತರಗತಿಯ ಸುಗಮಕಾರರಾಗಿ ಕೆಲಸ ಮಾಡುತ್ತಿದ್ದಾರೆ. ಮಕ್ಕಳಿಗೆ ಕಲಿಸಲು ಆನಂದಿಸುತ್ತಾರೆ ಮತ್ತು ತರಗತಿಯನ್ನು ಸಕ್ರಿಯವಾಗಿ ಇಡಲು, ಎಲ್ಲರಿಗೂ ಆನಂದದಾಯಕವಾಗಿಸಲು ಹೊಸ ವಿಧಾನಗಳನ್ನು ನಿರಂತರವಾಗಿ ಹುಡುಕುತ್ತಿರುತ್ತಾರೆ. ಅವರನ್ನು jdeshmukh025@gmail.com ಮೂಲಕ ಸಂಪರ್ಕಿಸಬಹುದು.



**ಶಿವಾನಿ ತನೇಜಾ** ಅವರು 25 ವರ್ಷಗಳಿಂದ ಭೋಪಾಲ್ ಮತ್ತು ಸುತ್ತಮುತ್ತಲಿನ, ಗುರುತಿಸಲ್ಪಟ್ಟ ಬುಡಕಟ್ಟು ಹಿನ್ನೆಲೆಯ ಜನರು ಮತ್ತು ಬಡ ಸಮುದಾಯಗಳ ನಡುವೆ ಕೆಲಸ ಮಾಡುತ್ತಿದ್ದಾರೆ. ಶಿಕ್ಷಣವನ್ನು ಪ್ರತ್ಯೇಕವಾದ ಶೈಕ್ಷಣಿಕ ವಿದ್ಯಮಾನವಾಗಿ ನೋಡಲು ಸಾಧ್ಯವಿಲ್ಲ ಮತ್ತು ಶಿಕ್ಷಣತಜ್ಞರಾಗಿ ನಾವು ಮಗುವಿನ ಹಿತ ಮತ್ತು ವಿಮರ್ಶಾತ್ಮಕ ಸಬಲೀಕರಣವನ್ನು ಶೈಕ್ಷಣಿಕ ಪ್ರಯಾಣದ ಕೇಂದ್ರವಾಗಿ ನೋಡಬೇಕಾಗಿದೆ ಎಂದು ನಂಬುತ್ತಾರೆ. ಈ ದೃಷ್ಟಿಕೋನವು ಅವರ ಕಾಳಜಿ ಮತ್ತು ಕೆಲಸದ ಆದ್ಯತೆಗಳಲ್ಲಿ, ಸಾಮಾಜಿಕ ನ್ಯಾಯ ಮತ್ತು ಕಷ್ಟಕರವಾದ ಬಾಲ್ಯದ ನಡುವೆ ಮಕ್ಕಳ ಸಾಮೂಹಿಕ ಕರ್ತೃತ್ವವನ್ನು, ಮಾನಸಿಕ ಆರೋಗ್ಯವನ್ನು ನಿರ್ಮಿಸುವುದರಲ್ಲಿ ಪ್ರತಿಬಿಂಬಿತವಾಗುತ್ತಿದೆ. ಪ್ರಮುಖವಾಗಿ ಶಿಕ್ಷಕಿಯಾಗಿ, ಅವರು ಮುಸ್ಕಾನ್ನಲ್ಲಿ ಪ್ರತಿದಿನವೂ ತರಗತಿಯ ಭಾಗವಾಗಿರುವುದನ್ನು ಮತ್ತು ಶಿಕ್ಷಣಶಾಸ್ತ್ರದ ಮಧ್ಯಸ್ಥಿಕೆಗಳಿಗೆ ವಿದ್ಯಾರ್ಥಿಗಳ ಪ್ರತಿಕ್ರಿಯೆಗಳನ್ನು ಗಮನಿಸುವುದನ್ನು ಮತ್ತು ಅದರಿಂದ ಕಲಿಯುವುದನ್ನು ಆನಂದಿಸುತ್ತಾರೆ. ಅವರನ್ನು shivani@muskaan.org ಮೂಲಕ ಸಂಪರ್ಕಿಸಬಹುದು.

ಅನುವಾದ: **ನಿವೇದಿತಾ ಬಿ. ರುದ್ರೇಶ್** | ಪರಿಶೀಲನೆ: **ನಾಗಮಣಿ ಎಸ್. ಎನ್.**

# ಯೋಜನಾ ಕಾರ್ಯದ ಮೂಲಕ ಸಮಾಜೋ-ಭಾವನಾತ್ಮಕ ಕಲಿಕೆ

ಚಿಕ್ಕವೀರೇಶ್ ಎಸ್. ವಿ

ಮಕ್ಕಳ ಕಲಿಕೆಯು ಅವರ ಭಾವನೆಗಳೊಂದಿಗೆ ಸಂಬಂಧ ಹೊಂದಿರುತ್ತದೆ; ನಾವು ಆ ಎರಡನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಭಾವನೆಗಳೊಂದಿಗೆ ಸಂಬಂಧ ಹೊಂದಿರುವಾಗ ಮಾತ್ರ ಮಕ್ಕಳ ಕಲಿಕೆಯು ಪರಿಣಾಮಕಾರಿಯಾಗಿರಲು, ಬಹಳ ಕಾಲ ಉಳಿಯುವಂತಾಗಲು ಸಾಧ್ಯ. ಕೋವಿಡ್–19 ಮಹಾರೋಗ–ದಿಂದಾಗಿ ಸರಿಸುಮಾರು ಎರಡು ವರ್ಷಗಳ ಕಾಲ ಶಾಲೆಗಳು ಮುಚ್ಚಲ್ಪಟ್ಟಿದ್ದುದರಿಂದ ಅವರ ಶೈಕ್ಷಣಿಕ ಕಲಿಕೆಗೆ ತೊಂದರೆ ಉಂಟಾಗಿರುವುದು ಮಾತ್ರವಲ್ಲದೆ, ಅವರ ಸಾಮಾಜಿಕ ಮತ್ತು ಭಾವನಾತ್ಮಕ ಬೆಳವಣಿಗೆಗೂ ಅದು ತೊಡಕುಂಟುಮಾಡಿದೆ. ಆದ್ದರಿಂದ, ಮಕ್ಕಳ ಕಲಿಕಾ ಚಟುವಟಿಕೆಯು ಸಾಮಾಜಿಕ ಮತ್ತು ಭಾವನಾತ್ಮಕ ಆಯಾಮಗಳಿಗೆ ಒತ್ತು ನೀಡುವುದು ಹಿಂದೆಂದಿಗಿಂತಲೂ ಇಂದು ಹೆಚ್ಚು ಅಗತ್ಯವಾಗಿದೆ. ಕಲಿಕೆಯ ಈ ಅಂಶವು ಚಟುವಟಿಕೆಗಳ ಮತ್ತು ತರಗತಿ ಪ್ರಕ್ರಿಯೆಯ ಭಾಗವಾಗಬೇಕು. ಮಕ್ಕಳ ಸಾಮಾಜಿಕ ಮತ್ತು ಭಾವನಾತ್ಮಕ ಅಗತ್ಯತೆಗಳನ್ನು ಕಲಿಕೆಯ ಪರಿಕಲ್ಪನೆಗಳು ಮತ್ತು ಫಲಿತಗಳೊಂದಿಗೆ ಒಂದಾಗಿಸಬೇಕು. ಇದನ್ನು ಬೆಂಬಲಿಸಲು ಅನೇಕ ಬೋಧನಾ ವಿಧಾನದ ಅಭ್ಯಾಸಗಳನ್ನು ಅಳವಡಿಸಿ–ಕೊಳ್ಳಬಹುದು. ಇದರಲ್ಲಿ ಮುಖ್ಯವಾದವುಗಳೆಂದರೆ ಕಿರುನಾಟಕ, ನಾಟಕ, ಕಲೆಗಳು, ಗುಂಪು ಚಟುವಟಿಕೆ, ಮತ್ತು ಸಮ್ಮತಿ ಹಾಗೂ ಅಸಮ್ಮತಿ/ಭಿನ್ನಾಭಿಪ್ರಾಯಕ್ಕೆ ಅವಕಾಶವಿರುವ ಚಟುವಟಿಕೆಗಳು, ಗಟ್ಟಿಯಾಗಿ ಓದುವುದು, ಕ್ರಿಯಾಶೀಲವಾಗಿ ಕೇಳಿಸಿಕೊಳ್ಳುವುದು, ಮುಕ್ತ ಚರ್ಚೆಗಳು ಮತ್ತು ಸ್ವತಂತ್ರವಾದ ಬರವಣಿಗೆ. ಇಂತಹ ಚಟುವಟಿಕೆಗಳು ಮಕ್ಕಳ ಸಮಗ್ರ ಬೆಳವಣಿಗೆಗೆ ಕೊಡುಗೆ ನೀಡಬಲ್ಲವು. ಇಂತಹ ಒಂದು ಪ್ರಯತ್ನದ ಕುರಿತಾದ ನನ್ನ ಅನುಭವ ಮತ್ತು ಅದರಿಂದ ನಾನು ಗಳಿಸಿಕೊಂಡ ಒಳನೋಟಗಳನ್ನು ನಾನಿಲ್ಲಿ ಮಂಡಿಸಲಿದ್ದೇನೆ. ನಾನು ಮಕ್ಕಳಿಗೆ ವಹಿಸಿಕೊಟ್ಟ ಒಂದು ಯೋಜನೆಯ ನಿರೂಪಣೆ, ಒಳಗೊಂಡಿದ್ದ ಪ್ರಕ್ರಿಯೆಗಳು ಹಾಗೂ ಮಕ್ಕಳ ಸಾಮಾಜಿಕ ಮತ್ತು ಭಾವನಾತ್ಮಕ ಅಗತ್ಯಗಳನ್ನು ಬೆಂಬಲಿಸುವಲ್ಲಿ ಅದು ನೆರವು ನೀಡಿದ ವಿವಿಧ ಮಾರ್ಗಗಳು, ಇದನ್ನು ಕುರಿತಾದ ಕಥನವನ್ನು ಮುಂದೆ ಹೇಳಲಾಗಿದೆ.

## ಯೋಜನಾ ಮೇಳದ ಅನುಭವ

ನಾವು ಒಂದು 'ಯೋಜನಾ ಮೇಳ'ವನ್ನು ಯೋಜಿಸಿದೆವು. ಆರಂಭದಲ್ಲಿ ನಾವು ಶಿಕ್ಷಕರೊಡನೆ, ಮಕ್ಕಳು ಯಾವ ಯೋಜನೆಗಳ ಬಗ್ಗೆ ತಾವೇ ಸ್ವತಃ ಮಾಹಿತಿ ಅಥವಾ ದತ್ತಾಂಶಗಳನ್ನು ಸಂಗ್ರಹಿಸಬಹುದೋ ಅಂತಹ ಯೋಜನೆಗಳ ಕುರಿತು ಚರ್ಚಿಸಿದೆವು. ಆಗ ಮುನ್ನೆಲೆಗೆ ಬಂದಂಥ ವಿಷಯಗಳಲ್ಲಿ ನಾವು ಹಳ್ಳಿಗಳಲ್ಲಿರುವ ನೀರಿನ ಮೂಲಗಳ ಕುರಿತಾದ ವಿಷಯವನ್ನು ಆಯ್ಕೆ ಮಾಡಿಕೊಳ್ಳಲು ನಿರ್ಧರಿಸಿದೆವು. ಜೀವವನ್ನು ಕಾಪಾಡುವುದಲ್ಲದೇ, ನೀರಿನ ಪ್ರಾಮುಖ್ಯತೆಯು ಸಾಮಾಜಿಕ, ಸಾಂಸ್ಕೃತಿಕ ಮತ್ತು ಚಾರಿತ್ರಿಕ ಕ್ಷೇತ್ರಗಳನ್ನೂ ಆವರಿಸಿಕೊಳ್ಳುತ್ತದೆ ಎಂಬ ಕಾರಣದಿಂದಾಗಿ ನಾವು ಈ ವಿಷಯವನ್ನು ಆಯ್ಕೆ ಮಾಡಿಕೊಂಡೆವು. ಮಕ್ಕಳು ಈ ವಿಷಯದ ಕುರಿತು ತಮ್ಮ ಹಳ್ಳಿಗಳಲ್ಲಿ ಮಾಹಿತಿಯನ್ನು ಹೆಕ್ಕಿ ತೆಗೆಯಬೇಕಾಗುತ್ತದೆ. ರಾಜಸ್ಥಾನದಲ್ಲಿ ನೀರಿನ ಅಭಾವದ ಬಗ್ಗೆ ವಿವರಿಸುವ 'ವಾಟರ್ ವೈವ್ಸ್' ಎಂಬ ಶೀರ್ಷಿಕೆಯ ಸಾಕ್ಷಚಿತ್ರ ಪ್ರದರ್ಶನದ ಮೂಲಕ ನಾವು 5, 6 ಮತ್ತು 7ನೇ ತರಗತಿಗಳ 30 ವಿದ್ಯಾರ್ಥಿಗಳೊಂದಿಗೆ ಅನನ್ಯವಾದ ರೀತಿಯಲ್ಲಿ ಈ ಯೋಜನೆಯನ್ನು ಆರಂಭಿಸಿದೆವು. ಸಾಕ್ಷ್ಯಚಿತ್ರ ಪ್ರದರ್ಶನದ ಬಳಿಕ ನೀರಿನ ಅಭಾವದ ಭಯಾನಕತೆ ಮತ್ತು ನೀರನ್ನು ಸಂರಕ್ಷಿಸಬೇಕಾದ ಪ್ರಾಮುಖ್ಯತೆಯ ಬಗ್ಗೆ ಚರ್ಚೆ ನಡೆಯಿತು. ತಮ್ಮ ಹಳ್ಳಿಗಳಲ್ಲಿನ ನೀರಿನ ಮೂಲಗಳನ್ನು ಗುರುತಿಸಲು ಮಕ್ಕಳಿಗೆ ಹೇಳಲಾಯಿತು. ಮಕ್ಕಳು ಜಂಬಲದಿನ್ನಿ, ಹಿರೇಹುನಕುಂಟಿ ಮತ್ತು ತಾರಿವಾಳ ಎಂಬ ಮೂರು ವಿಭಿನ್ನ ಹಳ್ಳಿಗಳಿಂದ ಬಂದಿದ್ದು ಅವರ ಅನುಭವಗಳು ಬೇರೆ ಬೇರೆಯಾಗಿದ್ದವು. ನಾವು ಅವರನ್ನು ಹತ್ತು ಗುಂಪುಗಳಾಗಿ ವಿಂಗಡಿಸಿ ಪ್ರತಿಯೊಂದು ಗುಂಪಿಗೂ ಒಂದು ಕಾರ್ಯ–ಯೋಜನೆಯನ್ನು ನೀಡಿ ಅದರ ಮೇಲೆ ಕೆಲಸ ಮಾಡಲು ಹೇಳಿದೆವು. ಕಾರ್ಯಯೋಜನೆಗೆ ನೀಡಿದ ವಿಷಯಗಳು ಹೀಗಿದ್ದವು:

1. ಜಂಬಲದಿನ್ನಿಯ ವಿದ್ಯಾರ್ಥಿಗಳಿಗೆ: ಇಪ್ಪತ್ತು ವರ್ಷಗಳ ಹಿಂದೆ ನಿಮ್ಮ ಹಳ್ಳಿಯಲ್ಲಿದ್ದ ನೀರಿನ ಮೂಲಗಳು.
2. ಹಿರೇಹುನಕುಂಟಿಯ ವಿದ್ಯಾರ್ಥಿಗಳಿಗೆ: ಇಪ್ಪತ್ತು ವರ್ಷಗಳ ಹಿಂದೆ ನಿಮ್ಮ ಊರಿನಲ್ಲಿದ್ದ ನೀರಿನ ಮೂಲಗಳು.
3. ತಾರಿವಾಳದ ವಿದ್ಯಾರ್ಥಿಗಳಿಗೆ: ನಿಮ್ಮ ಹಳ್ಳಿಯಲ್ಲಿ ಇಪ್ಪತ್ತು ವರ್ಷಗಳ ಹಿಂದೆ ಇದ್ದ ನೀರಿನ ಮೂಲಗಳು.
4. ಈ ಮೂರು ಹಳ್ಳಿಗಳಲ್ಲೂ ಈಗಿರುವ ನೀರಿನ ಮೂಲಗಳು.
5. ನಿಮ್ಮ ಹಳ್ಳಿಯಲ್ಲಿ ನೀರಿನ ದುರುಪಯೋಗ.
6. ಒಂದು ದಿನದಲ್ಲಿ, ಒಂದು ತಿಂಗಳಿನಲ್ಲಿ ಮತ್ತು ಒಂದು ವರ್ಷದಲ್ಲಿ ಒಂದು ಕುಟುಂಬ ಅಥವಾ ಮನೆಯಲ್ಲಿ ಕುಡಿಯಲು ಉಪಯೋಗಿಸುವ ನೀರಿನ ಪ್ರಮಾಣ; ನೀರನ್ನು ಸಂರಕ್ಷಿಸಲು ಸಾಧ್ಯವಾದ ಮಾರ್ಗೋಪಾಯಗಳು ಮತ್ತು ಉಳಿಸಲು ಸಾಧ್ಯವಾಗಬಹುದಾದ ನೀರಿನ ಪ್ರ.ಮಾಣ.
7. ನೀರಿನ ವಿಷಯಕ್ಕೆ ಸಂಬಂಧಿಸಿದಂತೆ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗಿರುವ ಲೇಖನಗಳು ಮತ್ತು ಅದರಲ್ಲಿ ಪ್ರತಿಪಾದಿಸಲಾಗಿರುವ ವಿಚಾರಗಳು.

8. ಶೌಚಾಲಯಗಳು ಮತ್ತು ಶೌಚಾಲಯಗಳಲ್ಲಿ ನೀರಿನ ಉಪಯೋಗ.
9. ಕೃಷಿ ಮತ್ತು ನೀರಾವರಿಯಲ್ಲಿ ನೀರಿನ ಉಪಯೋಗ.
10. ಮಳೆನೀರಿನ ಕೊಯ್ಲು ಮಾಡಲು ನಿಮ್ಮ ಹಳ್ಳಿಯಲ್ಲಿ ತೆಗೆದುಕೊಳ್ಳಲಾಗಿರುವ ಕ್ರಮಗಳು.

ಮಕ್ಕಳು ತಮ್ಮ ಪೋಷಕರೊಂದಿಗೆ, ಹಳ್ಳಿಯ ಹಿರಿಯರು ಮತ್ತು ಮುಖಂಡರೊಂದಿಗೆ, ಹಳ್ಳಿಯ ಪಂಚಾಯಿತಿ ಸದಸ್ಯರೊಂದಿಗೆ ಚರ್ಚಿಸಿ ತಮ್ಮ ನಿಲುವನ್ನು ನಿರ್ಧರಿಸಿ ಒಂದು ತಿಂಗಳಲ್ಲಿ ತಮ್ಮ ವರದಿಯನ್ನು ಸಿದ್ಧಪಡಿಸಿದರು. ಬೇರೆಬೇರೆ ತರಗತಿಗಳ ಮಕ್ಕಳನ್ನು ಒಳಗೊಂಡ ವಿಭಿನ್ನ ಗುಂಪುಗಳೊಂದಿಗೆ ನಾವು ಈ ವರದಿಯನ್ನು ಅನೇಕ ಬಾರಿ ಚರ್ಚಿಸಿದೆವು ಮತ್ತು ಈ ವರದಿಗಳ ಗುಣಮಟ್ಟವನ್ನು ಉತ್ತಮಪಡಿಸಲು ಅವರಿಗೆ ಸಲಹೆಗಳನ್ನು ನೀಡಿದೆವು. ಮಾಹಿತಿ ಸಂಗ್ರಹಣೆಯಲ್ಲಿ ಮತ್ತು ವರದಿಗಳ ಕುರಿತಾದ ಚರ್ಚೆಯಲ್ಲಿ ಮಕ್ಕಳು ಬಹಳ ಉತ್ಸಾಹದಿಂದ ಭಾಗವಹಿಸಿದರು. 'ಮೇಳ'ದ ದಿನ ಯಾವತ್ತು ಎಂಬುದನ್ನು ನಿರ್ಧರಿಸಲಾಯಿತು ಮತ್ತು ಎಲ್ಲಾ ವಿದ್ಯಾರ್ಥಿಗಳ ವರದಿಗಳ ಮಂಡನೆಗೆ ವೇಳಾಪಟ್ಟಿಯನ್ನೂ ನಿಗದಿ ಮಾಡಲಾಯಿತು. ಹಳ್ಳಿಯ ಜನರನ್ನು ಇದಕ್ಕೆ ಆಹ್ವಾನಿಸಲಾಯಿತು. ಅನೇಕ ಕಾರಣಗಳಿಂದಾಗಿ ವಿದ್ಯಾರ್ಥಿಗಳ ಈ ಒಂದು ಸಭೆಯು, ಈ ರೀತಿಯ ಇತರ ವಿದ್ಯಾರ್ಥಿಗಳ ಸಭೆಗಳಿಗಿಂತ ಭಿನ್ನವಾಗಿತ್ತು. ಸಭೆಯಲ್ಲಿ ಹಂಚಿಕೊಳ್ಳಲಾದ ಮಾಹಿತಿಯನ್ನು ವಿದ್ಯಾರ್ಥಿಗಳು ತಾವೇ ಸಂಗ್ರಹಿಸಿದ್ದರು. ಅವರ ತಿಳುವಳಿಕೆಯು ಅವರದ್ದೇ ಆದ ಅನುಭವದ ಭಾಗವಾಗಿತ್ತು. ಹೀಗಾಗಿ ತಾವು ಮಂಡಿಸಿದ ಹಾಗೂ ಚರ್ಚಿಸಿದ ವಿಷಯಗಳ ಮೇಲೆ ಅವರಿಗೆ ಪ್ರಭುತ್ವವಿತ್ತು. ಇತರ ವಿಷಯಗಳ ಜೊತೆಯಲ್ಲಿ ವಿದ್ಯಾರ್ಥಿಗಳು ನೀರಿನ ಸಂರಕ್ಷಣೆಯ ಸಮಸ್ಯೆಗಳ ಬಗ್ಗೆ ಚರ್ಚಿಸಿದರು ಮತ್ತು ಈ ಮುಖ್ಯ ಸಂಪನ್ಮೂಲದ ಸದುಪಯೋಗದ ಬಗ್ಗೆ ಅಮೂಲ್ಯ ಸಲಹೆಗಳನ್ನು ನೀಡಿದರು. ಹಳ್ಳಿಯ ಜನರು ತಮಗೇ ಗೊತ್ತಿಲ್ಲದಂತಹ ಕೆಲವೊಂದು ವಿಷಯಗಳನ್ನು ಮಕ್ಕಳಿಂದ ಕೇಳಿ ಪ್ರಭಾವಿತರಾದರು ಮತ್ತು ಸಂತೋಷಪಟ್ಟರು. ಚರ್ಚೆಯನ್ನು ಸಂಪದ್ಭರಿತಗೊಳಿಸಲು ಅವರೂ ಸಹ ತಮ್ಮ ವಿಚಾರಗಳನ್ನು ಮುಂದಿಟ್ಟರು. ಮಕ್ಕಳಿಗೆ ಈ ಕಾರ್ಯಯೋಜನೆಗಳನ್ನು ನಿಗದಿಪಡಿಸಿದಾಗ ನಮಗೆ ಒಂದಿಷ್ಟು ಹಿಂಜರಿಕೆಯಿತ್ತು. ಅಂತಹ ಕೆಲಸವನ್ನು ನಿರ್ವಹಿಸಲು ಅವರಿಗೆ ಸಾಮರ್ಥ್ಯವಿದೆಯೇ ಎಂಬ ಬಗ್ಗೆ ನಮಗೆ ನಮ್ಮದೇ ಆದ ಅನುಮಾನಗಳಿದ್ದವು. ಆದರೆ ಮಾಹಿತಿಯನ್ನು ಮತ್ತು ದತ್ತಾಂಶಗಳನ್ನು ಸಂಗ್ರಹಿಸುವುದರಲ್ಲಿ ಮತ್ತು ತಮ್ಮ ವಿಚಾರಗಳನ್ನು ಮಂಡಿಸುವುದರಲ್ಲಿ ಅವರಿಗಿದ್ದ ಉತ್ಸಾಹವನ್ನು ನೋಡಿ ನಮಗೆ ಅವರ ಬಗ್ಗೆ ಹೆಮ್ಮೆ ಮೂಡಿಸಿತು. ವಿದ್ಯಾರ್ಥಿಗಳು ತಾವು ಏನನ್ನು ಕಲಿಯುತ್ತಾರೋ ಅದರಲ್ಲಿ ಅವರನ್ನು ತೊಡಗಿಸುವುದು ಎಷ್ಟು ಪರಿಣಾಮಕಾರಿ ಎಂಬುದನ್ನು ಮತ್ತು ನಮ್ಮ ಬೋಧನಾ ವಿಧಾನದಲ್ಲಿ ವಿದ್ಯಾರ್ಥಿ ಕೇಂದ್ರಿತ ಕಲಿಕಾ ಅಭ್ಯಾಸಗಳನ್ನು ಸೇರಿಸುವುದು ಎಷ್ಟು ಮುಖ್ಯ ಎಂಬುದನ್ನು ಈ ಅನುಭವವು ನಮಗೆ ಕಲಿಸಿತು. ಈ ಕಾರ್ಯಯೋಜನೆಯಲ್ಲಿ ವಿದ್ಯಾರ್ಥಿಗಳ ಭಾಗವಹಿಸುವಿಕೆಯನ್ನು ನೋಡಿದ ಶಿಕ್ಷಕರು ಈಗ ವಿದ್ಯಾರ್ಥಿಗಳ ಕ್ರಿಯಾಶೀಲ ಭಾಗವಹಿಸುವಿಕೆಯನ್ನು ಪಡೆದುಕೊಳ್ಳಲು ಈ ವಿಧಾನಕ್ಕೆ ಮಹತ್ವವನ್ನು ನೀಡುತ್ತಿದ್ದಾರೆ.

ಈ ಲೇಖನವನ್ನು ಬರೆಯುವುದಕ್ಕೂ ಸ್ವಲ್ಪ ಮುಂಚೆ, ಈ ಕಾರ್ಯಯೋಜನೆಯಿಂದ ಅವರೇನು ಕಲಿತಿದ್ದಾರೆ ಎಂಬುದನ್ನು ತಿಳಿದುಕೊಳ್ಳಲು ನಾನು ವಿದ್ಯಾರ್ಥಿಗಳೊಂದಿಗೆ ಮಾತನಾಡಿದೆ. ಅನೇಕ ತಿಂಗಳುಗಳು ಉರುಳಿಹೋಗಿದ್ದರೂ ವಿದ್ಯಾರ್ಥಿಗಳು ತಾವು ಕಲಿತದ್ದನ್ನು ಮರೆತಿರಲಿಲ್ಲ ಎಂಬುದನ್ನು ಕಂಡು ನನಗೆ ಅಚ್ಚರಿಯಾಯಿತು. ಅವರು ಅಷ್ಟೊಂದು ಚೆನ್ನಾಗಿ ವಿವರಗಳನ್ನು ಹೇಗೆ ನೆನಪಿನಲ್ಲಿಟ್ಟುಕೊಂಡಿದ್ದಾರೆ ಎಂದು ನಾನು ಕೇಳಿದಾಗ ಅವರು, "ಸರ್, ನಾವೇ ಮಾಡಿದ್ದನ್ನು ನಾವೇ ಹೇಗೆ ಮರೆಯಲು ಸಾಧ್ಯ? ಎಂದರು. ವಿದ್ಯಾರ್ಥಿಗಳ ಅನುಭವ, ಶಿಕ್ಷಕರ ಪ್ರತಿಕ್ರಿಯೆ ಮತ್ತು ಇದರಿಂದಾಗಿ ನನಗೆ ದೊರಕಿದ ಒಳನೋಟಗಳು ಇವೆಲ್ಲವೂ ಕೂಡ, ವಿದ್ಯಾರ್ಥಿಗಳಲ್ಲಿ ಸಾಮಾಜಿಕ ಹಾಗೂ ಭಾವನಾತ್ಮಕ ಕಲಿಕೆಯನ್ನು ಬೆಳೆಸಲು ಕಾರ್ಯಯೋಜನೆ ಆಧಾರಿತ ವಿಧಾನವೇ ಅತ್ಯುತ್ತಮ ಮಾರ್ಗ ಎಂಬ ತೀರ್ಮಾನಕ್ಕೆ ಬರಲು ನನಗೆ ನೆರವಾಗಿವೆ.

## ಯೋಜನಾ ಮೇಳದಲ್ಲಿ ಸಮಾಜೋ ಭಾವನಾತ್ಮಕ ಕಲಿಕೆಗೆ ಇರುವ ಅವಕಾಶ

### ವಿದ್ಯಾರ್ಥಿಗಳ ಸಭೆಗಳು

ಯೋಜನಾ ಕಾರ್ಯವನ್ನು ನೀಡಲು, ಜವಾಬ್ದಾರಿಗಳನ್ನು ಹಂಚಿಕೊಳ್ಳಲು ಮತ್ತು ದತ್ತಾಂಶ ಹಾಗೂ ಮಾಹಿತಿಗಳನ್ನು ಕುರಿತು ಚರ್ಚಿಸಲು ವಿದ್ಯಾರ್ಥಿಗಳ ಸಭೆಗಳನ್ನು ನಿಯಮಿತವಾಗಿ ನಡೆಸಲಾಯಿತು. ಈ ಸಭೆಗಳು, ಯಾವ ಹಿಂಜರಿಕೆಯೂ ಇಲ್ಲದೆ, ತಮ್ಮ ಅಭಿಪ್ರಾಯ ಸರಿಯೋ, ತಪ್ಪೋ ಎಂಬ ನ್ಯಾಯನಿರ್ಣಯಗಳ ಭಯವಿಲ್ಲದೆ ಅವರು ವಿಚಾರಗಳನ್ನು ಹೇಳಿಕೊಳ್ಳಲು ವಿದ್ಯಾರ್ಥಿಗಳಿಗೆ ವೇದಿಕೆಯನ್ನು ಒದಗಿಸಿದವು. ಇದು, ತಮ್ಮನ್ನೇ ಅಭಿವ್ಯಕ್ತಿಗೊಳಿಸಿಕೊಳ್ಳುವ ಸಾಮರ್ಥ್ಯ, ನಾಯಕತ್ವ, ತೀರ್ಮಾನ ಮಾಡುವ ಶಕ್ತಿ, ಸಮಸ್ಯೆಗಳಿಗೆ ಪರಿಹಾರಗಳನ್ನು ಹುಡುಕುವಲ್ಲಿ ಆತ್ಮವಿಶ್ವಾಸ ಮತ್ತು ಒಂದು ಉದ್ದೇಶಕ್ಕೆ ಬದ್ಧರಾಗಿರುವುದು ಇಂತಹ ಗುಣಗಳನ್ನು ಅವರಲ್ಲಿ ಬೆಳೆಸಲು ನೆರವಾಯಿತು.

### ಗುಂಪು ಚಟುವಟಿಕೆ

ಮಕ್ಕಳು 5–6 ಜನರ ತಂಡದಲ್ಲಿ ಕೆಲಸ ಮಾಡಿದರು. ಪ್ರತಿಯೊಂದು ಗುಂಪಿನಲ್ಲೂ ವಿಭಿನ್ನ ಕಲಿಕಾ ಸಾಮರ್ಥ್ಯಗಳಿದ್ದ ಮಕ್ಕಳಿದ್ದರು. ಆದರೆ ಅವರು ಸಹಕಾರಿ ಮನೋಭಾವ, ಭಾಗವಹಿಸುವಿಕೆ ಮತ್ತು ಜವಾಬ್ದಾರಿ ಪ್ರಜ್ಞೆಗಳೊಂದಿಗೆ ಕೆಲಸ ಮಾಡಿದರು. ಇದು ಪರಸ್ಪರ ಕಲಿಕೆಯ ತತ್ವವನ್ನು ಆಚರಣೆಗೆ ತರಲು ವೇದಿಕೆಯಾಯಿತು. ಏಳನೇ ತರಗತಿಯ ಮಕ್ಕಳು 5

ಮತ್ತು 6ನೇ ತರಗತಿಯ ಮಕ್ಕಳಿಗೆ ಮಾರ್ಗದರ್ಶನ ಮಾಡಿದರು. ಹಿರಿಯ ವಿದ್ಯಾರ್ಥಿಗಳೊಂದಿಗೆ ವಿಚಾರ ವಿನಿಮಯ ಮಾಡಿ–ಕೊಳ್ಳುವುದನ್ನು ಕಿರಿಯ ವಿದ್ಯಾರ್ಥಿಗಳು ಇಷ್ಟಪಟ್ಟರು. 'ತರಗತಿ ತಡೆಗೋಡೆ'ಗಳನ್ನು (grade barriers') ಮೀರಿ ಬೇರೆ ತರಗತಿಗಳ ವಿದ್ಯಾರ್ಥಿಗಳೊಂದಿಗೆ ಬೆರೆತು ಕಲಿಯುವುದು ಎಲ್ಲರಿಗೂ ಒಂದು ಮಹತ್ವದ ಅನುಭವವಾಯಿತು. ತಂಡಗಳಲ್ಲಿ ಕೆಲಸ ಮಾಡುವುದು ಮತ್ತು ತಂಡದ ಯಶಸ್ಸಿಗೆ ಸಾಕ್ಷಿಯಾಗುವುದು ಅವರನ್ನು ಪುಳಕಿತರನ್ನಾಗಿಸಿತು. ಅವರ ಪುಳಕವು ನನ್ನ ಮನಸ್ಸಿನಲ್ಲಿ ಅಚ್ಚಳಿಯದಂತೆ ಮುದ್ರೆಯೊತ್ತಿದೆ.

### ಸ್ವತಂತ್ರವಾಗಿ ಬರೆಯುವುದು

ಬೇರೆಯವರೊಂದಿಗೆ ಚರ್ಚಿಸಿದ್ದನ್ನು ಮತ್ತು ತಾವೇ ವೀಕ್ಷಿಸಿದ್ದನ್ನು ಬರೆದಿಡಲು ಮಕ್ಕಳಿಗೆ ಪ್ರೋತ್ಸಾಹ ನೀಡಲಾಯಿತು. ಇದು ಅವರಿಗೆ ತಮ್ಮ ವಿಚಾರಗಳು, ಭಾವನೆಗಳು ಮತ್ತು ಒಳನೋಟಗಳನ್ನು ರೂಪಿಸಿಕೊಳ್ಳಲು, ಒಟ್ಟಾರೆ ತಮ್ಮನ್ನೇ ಅಭಿವ್ಯಕ್ತಿಸಿಕೊಳ್ಳಲು ಅವಕಾಶ ನೀಡಿತು ಮತ್ತು ಇದು ಅವರಿಗೆ ನೆಮ್ಮದಿ ನೀಡುವ ಮತ್ತು ಅವರ ತಿಳುವಳಿಕೆಯನ್ನು ಸಮೃದ್ಧಗೊಳಿಸುವ ಅನುಭವ ಎನ್ನಿಸಿತು.

### ಗಟ್ಟಿಯಾಗಿ ಓದುವುದು

ತಮ್ಮ ತಂಡಗಳಿಗಾಗಿ ಅವರು ಏನನ್ನು ಬರೆದಿದ್ದರು ಮತ್ತು ಬೇರೆಯ ತಂಡಗಳಿಗಾಗಿ ಏನು ಬರೆದಿದ್ದರು ಅದನ್ನು ಗಟ್ಟಿಯಾಗಿ ಓದಲು ಹೇಳಲಾಯಿತು. ಇದು ಅವರಿಗೆ ಆತ್ಮವಿಶ್ವಾಸದಿಂದ ಓದಲು ಮಾತ್ರವಲ್ಲದೆ, ಬೇರೆಯವರನ್ನು ಕೇಳಿಸಿಕೊಳ್ಳಲು ಮತ್ತು ಇತರರ ವಿಚಾರಗಳು, ಭಾವನೆಗಳು ಮತ್ತು ದೃಷ್ಟಿಕೋನಗಳನ್ನು ಅರ್ಥಮಾಡಿಕೊಳ್ಳಲಿಕ್ಕೆ ಸಂವೇದನಾಶೀಲರಾಗಲು ಒಂದು ಅವಕಾಶವನ್ನು ನೀಡಿತು.

### ಸಮುದಾಯದೊಂದಿಗೆ ವಿಚಾರ ವಿನಿಮಯ

ನೀರಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಸಮುದಾಯದ ಅನುಭವಗಳ ಕುರಿತು (ಅವರಿಗಿರುವ ಸೌಲಭ್ಯಗಳು ಮತ್ತು ಅವರು ಎದುರಿಸುವ ಸಮಸ್ಯೆಗಳು ಇತ್ಯಾದಿ) ಸಮುದಾಯ–ದೊಂದಿಗೆ ವಿಚಾರ ವಿನಿಮಯ ಮಾಡಿಕೊಳ್ಳುವುದರಿಂದ, ನೀರಿನ ಬಿಕ್ಕಟ್ಟಿನ ಕುರಿತಾಗಿ ಮಕ್ಕಳನ್ನು ಸಂವೇದನಾಶೀಲರನ್ನಾಗಿ ಮಾಡಲಾಯಿತು ಮತ್ತು ತಮ್ಮ ಸುತ್ತಲಿನ ಜಗತ್ತಿನ ಕುರಿತು ಅವರು ತಿಳುವಳಿಕೆಯನ್ನು ಬೆಳೆಸಿಕೊಳ್ಳಲು ಸಾಧ್ಯವಾಯಿತು. ಸಮುದಾಯದ ಸದಸ್ಯರೊಂದಿಗೆ ವಿಚಾರ ವಿನಿಮಯ ಮಾಡಿಕೊಂಡಿದ್ದರಿಂದ ಅದು ಅವರೊಂದಿಗೆ ಸಾಮಾಜಿಕ ಸಂಬಂಧಗಳನ್ನು ಬೆಳೆಸಿಕೊಳ್ಳಲು ಮಕ್ಕಳಿಗೆ ಸಹಾಯಕ–ವಾಯಿತು. ಸಕ್ರಿಯವಾಗಿ ಕೇಳಿಸಿಕೊಳ್ಳುವುದು, ಸಹಕಾರ ಮತ್ತು ಪರಸ್ಪರ ಬೆಂಬಲ ನೀಡುವಿಕೆ ಇವುಗಳ ಪ್ರಾಮುಖ್ಯತೆಯನ್ನು ಅವರು ಮನವರಿಕೆ ಮಾಡಿಕೊಂಡರು.

### ಕಾಲಮಿತಿಯಲ್ಲಿ ಕೆಲಸ ಮಾಡುವುದಕ್ಕೆ ಮೆಚ್ಚುಗೆ

ಯಾವುದೇ ಕೆಲಸವನ್ನು ಮಾಡಲು ಮಕ್ಕಳಿಗೆ ಕಾಲಮಿತಿಯನ್ನು ನಿಗದಿಪಡಿಸಲಾಗುತ್ತಿತ್ತು ಮತ್ತು ಸಕಾಲದಲ್ಲಿ ಅವರು ಕೆಲಸ ಮಾಡಿ ಮುಗಿಸಿದಾಗ ಅದನ್ನು ಮೆಚ್ಚಿಕೊಳ್ಳಲಾಗುತ್ತಿತ್ತು. ತಮ್ಮ ಸಾಧನೆಗಳನ್ನು ತಾವೇ ವಿಶ್ಲೇಷಿಸಿ ಅದನ್ನು ಉತ್ತಮಪಡಿಸಿಕೊಳ್ಳಲು ಅವರಿಗೆ ಹೇಳಲಾಯಿತು. ನಂತರ ಕ್ರಮೇಣ ಅವರಿಗೆ ಹೆಚ್ಚು ಸಂಕೀರ್ಣವಾದ ಕೆಲಸಗಳನ್ನು ನೀಡಿ, ಅದನ್ನು ಸಾಧಿಸಲು ಮಾರ್ಗದರ್ಶನ, ಪ್ರೋತ್ಸಾಹ ಮತ್ತು ಬೆಂಬಲವನ್ನು ಒದಗಿಸಲಾಯಿತು. ಹೀಗೆ ಒಂದು ಗುರಿಯನ್ನು ನಿಗದಿಪಡಿಸುವುದು, ಅವರ ಸಾಧನೆಯನ್ನು ಉತ್ತಮಪಡಿಸುವುದು ಮತ್ತು ನಂತರ ಇನ್ನೂ ಉನ್ನತ ಮಟ್ಟದ ಗುರಿಯನ್ನು ನಿಗದಿಪಡಿಸುವುದು ಅವರಿಗೆ ಆತ್ಮವಿಶ್ವಾಸವನ್ನು ಮತ್ತು ದೃಢತೆ, ಸ್ಥೈರ್ಯ, ಭದ್ರತೆಯನ್ನು ಒದಗಿಸಿತು. ಅವರಿಗೆ ದೊರೆತ ಪ್ರೋತ್ಸಾಹವು ಅವರು ಇನ್ನೂ ಚೆನ್ನಾಗಿ ಕೆಲಸ ಮಾಡಲು ಪ್ರೇರಣೆ ನೀಡಿತು.

### ಕಾರ್ಯ ಯೋಜನೆಯನ್ನು ಪ್ರಸ್ತುತಿಪಡಿಸುವುದು

ತಮ್ಮ ಕಾರ್ಯಯೋಜನೆಯನ್ನು ಮುಗಿಸಿದ ನಂತರ, ತಾವು ಮುಗಿಸಿದ ಚಟುವಟಿಕೆಯ ಬಗ್ಗೆ ಚಿತ್ರಿಪತ್ರಗಳನ್ನು ತಯಾರಿಸಬೇಕೆಂದೂ ಮತ್ತು ಅದನ್ನು ಪ್ರೇಕ್ಷಕರ ಮುಂದೆ ಪ್ರದರ್ಶಿಸಬೇಕೆಂದೂ ಅವರಿಗೆ ತಿಳಿಸಲಾಯಿತು. ಪ್ರೇಕ್ಷಕರ ಪ್ರಶ್ನೆಗಳನ್ನು ಗಮನಕೊಟ್ಟು ಕೇಳಿಸಿಕೊಳ್ಳುವುದು, ಅದಕ್ಕೆ ತಾಳ್ಮೆಯಿಂದ ಪ್ರತಿಕ್ರಿಯಿಸುವುದು ಮತ್ತು ಸಮಂಜಸವಾದ ಟೀಕೆಯನ್ನು ಒಪ್ಪಿಕೊಳ್ಳುವುದು ಈ ಅಂಶಗಳು ಅವರ ಪ್ರಸ್ತುತಿ ಕೌಶಲಗಳನ್ನು ಸಾಣೆ ಹಿಡಿದಂತೆ ಉತ್ತಮಪಡಿಸಿದವು.

## ನೀರು ಮತ್ತು ಮಾನವ ಮೌಲ್ಯಗಳು

ಈಗಾಗಲೇ ಹೇಳಿದಂತೆ ನೀರಿಗೆ ಸಂಬಂಧಿಸಿದಂತೆ ಅನೇಕ ವಿಷಯಗಳ ಬಗ್ಗೆ ಚರ್ಚೆಗಳನ್ನು ನಡೆಸಲಾಯಿತು; ಉದಾ: ನೀರಿನ ಮೂಲಗಳು, ಉಪಯೋಗ ಮತ್ತು ದುರುಪಯೋಗ, ಒಂದು ಮನೆಯಲ್ಲಿ ಅಥವಾ ಹಳ್ಳಿಯಲ್ಲಿ ಪ್ರತಿದಿನ, ತಿಂಗಳು ಅಥವಾ ವರ್ಷದಲ್ಲಿ ಉಪಯೋಗಿಸುವ ನೀರಿನ ಪ್ರಮಾಣ; ಶೌಚಾಲಯದಲ್ಲಿ ಉಪಯೋಗಿಸುವ ನೀರು; ಮತ್ತು ನೀರನ್ನು ಉಳಿಸುವ ಸಾಧ್ಯತೆಗಳು. ಈ ಚರ್ಚೆಗಳು ಬದುಕಿಗೆ ನೀರು ಎಷ್ಟು ಮುಖ್ಯ ಎಂಬ ಅರಿವನ್ನು ಮಕ್ಕಳಲ್ಲಿ ಬೆಳೆಸಲು ಮತ್ತು ನೀರಿನ ಜೊತೆ ಸಂಬಂಧ ಹೊಂದಿದ ಮಾನವ ಮೌಲ್ಯಗಳನ್ನು ಗುರುತಿಸಲು ನೆರವಾದವು. ಕೆಳಗೆ ಪಟ್ಟಿ ಮಾಡಿದಂತೆ ಅನೇಕ ವಿಷಯಗಳ ಕುರಿತಾದಂತೆ ಅವರ ತಿಳುವಳಿಕೆಯಲ್ಲಿ ಅಭಿವೃದ್ಧಿಯುಂಟಾಯಿತು.

- ಎಲ್ಲ ಜೀವಿಗಳ ನಡುವೆ ಇರುವ ಸಂಬಂಧ ಮತ್ತು ಅವುಗಳಿಗೆ

ನೀರಿನ ಮೇಲೆ ಇರುವ ಅವಲಂಬನೆ.

- ಶುಚಿತ್ವ ಮತ್ತು ನೈರ್ಮಲ್ಯದ ಬಗ್ಗೆ ಕಲಿಯಬೇಕಾದ ಅಗತ್ಯತೆ.
- ನೀರಿಗೆ ಸಂಬಂಧಿಸಿದ ನೈರ್ಮಲ್ಯ, ನೀರಿನ ಮೂಲಗಳು ಮತ್ತು ನೀರಿನ ವಿತರಣಾ ವ್ಯವಸ್ಥೆಯ ಕುರಿತಾದ ಅರಿವಿನ ಪ್ರಾಮುಖ್ಯತೆ.
- ಎಲ್ಲಾ ವರ್ಗಗಳ ಜನರಿಗೂ ಸಮಾನವಾಗಿ ನ್ಯಾಯಯುತವಾಗಿ ನೀರು ದೊರಕುವಂತೆ ಮಾಡಲು ನೀರಿನ ವಿತರಣೆಯನ್ನು ಪ್ರಜಾತಾಂತ್ರಿಕಗೊಳಿಸುವುದು ಮತ್ತು ನೀರಿನ ಮೂಲಗಳನ್ನು ಪಡೆದುಕೊಳ್ಳುವಲ್ಲಿ ಕೆಲವರಿಗಿರುವ ಸವಲತ್ತುಗಾರ ಪದ್ಧತಿಗಳನ್ನು ತಿರಸ್ಕರಿಸುವುದು.
- ನೀರಿನ ಮೂಲಗಳ ಸರಿಯಾದ ಉಪಯೋಗ ಮತ್ತು ದುರುಪಯೋಗವನ್ನು ನಿಲ್ಲಿಸುವುದು.
- ನೀರಿಗೆ ಸಂಬಂಧಿಸಿದಂತೆ ಸಂರಕ್ಷಣೆ, ಪ್ರಕೃತಿಯ ಕುರಿತು ಗೌರವ ಮತ್ತು ಸರಿಯಾದ ಹಾಗೂ ತಪ್ಪಾದ ನಡವಳಿಕೆ.
- ನೀರಿಗೆ ಸಂಬಂಧಿಸಿದಂತೆ ವಿವೇಕಯುತ ಮತ್ತು ನ್ಯಾಯಬದ್ಧ ನಡವಳಿಕೆ. ಉದಾ: ಕಾನೂನಾತ್ಮಕವಾಗಿ ನೀರಿನ ಸೌಲಭ್ಯವನ್ನು ಪಡೆದುಕೊಳ್ಳುವುದು ಮತ್ತು ನೀರಿನ ಶುಲ್ಕವನ್ನು ಪಾವತಿ ಮಾಡಬೇಕಾದ ಸಾಮಾಜಿಕ ಜವಾಬ್ದಾರಿಯನ್ನು ಗೌರವಿಸುವುದು.

## ಸಿಂಹಾವಲೋಕನ

ಹಿಂದಿರುಗಿ ನೋಡಿದಾಗ ಇಡೀ ಕಾರ್ಯಯೋಜನೆಯಲ್ಲಿ ನನ್ನ ಪಾತ್ರವು ಎಷ್ಟು ಕಿರಿದಾಗಿತ್ತು ಎಂಬುದು ನನಗೆ ಮನವರಿಕೆಯಾಗುತ್ತದೆ. ಕೆಲವೊಂದು ಪ್ರಶ್ನೆಗಳನ್ನು ಎತ್ತುವುದು ಮಾತ್ರ ನನ್ನ ಕೆಲಸವಾಗಿತ್ತು. ವಿದ್ಯಾರ್ಥಿಗಳು ಅದನ್ನು ಆಧರಿಸಿಕೊಂಡು ತಾವಾಗಿಯೇ ನೀರಿನ ಮೂಲಗಳು ಮತ್ತಿತರ ಜಲಸಂಬಂಧಿ ವಿಷಯಗಳ ಕುರಿತಾಗಿ ಕಾರ್ಯ-ಯೋಜನೆಯನ್ನು ಕೈಗೆತ್ತಿಕೊಂಡರು ಮತ್ತು ಗಮನಾರ್ಹ ಮಾಹಿತಿಯನ್ನು ಸಂಗ್ರಹಿಸಿ ತಮ್ಮ ಶೋಧನೆಯನ್ನು ಮುಂದಿಟ್ಟರು. ಪ್ರಶ್ನೆಗಳನ್ನು ಕೇಳುವುದು, ಪ್ರತಿಕ್ರಿಯೆಗಳನ್ನು ಪಡೆದುಕೊಳ್ಳುವುದು, ಮಾಹಿತಿಯನ್ನು ವಿಶ್ಲೇಷಿಸುವುದು ಮತ್ತು ಅದನ್ನು ಕೇಳುಗರ ಎದುರು ಮಂಡಿಸುವುದು ಮುಂತಾದ ಕೌಶಲ್ಯಗಳನ್ನು ಅವರು ಕಲಿತುಕೊಂಡರು. ವಿದ್ಯಾರ್ಥಿಗಳ ಸಭೆಗಳಲ್ಲಿ ಮತ್ತು ಗುಂಪು ಚಟುವಟಿಕೆಗಳಲ್ಲಿ ಭಾಗವಹಿಸುವುದು, ಸ್ವತಂತ್ರವಾಗಿ ಬರೆಯುವ ಪ್ರಯತ್ನ, ಜೋರಾಗಿ ಓದುವುದು ಮತ್ತು ಸಮುದಾಯದೊಂದಿಗೆ ವಿಚಾರ ವಿನಿಮಯ ಮಾಡಿಕೊಳ್ಳುವುದು ಮತ್ತು ಗಡುವಿನೊಳಗೆ ಕೆಲಸವನ್ನು ಮುಗಿಸುವುದು ಈ ಎಲ್ಲಾ ವಿಷಯಗಳಿಗೂ ಸಂಬಂಧಿಸಿದಂತೆ ಅವರ ತೊಡಗಿಸಿಕೊಳ್ಳುವಿಕೆ ಬಹಳ ಪ್ರಶಂಸನೀಯವಾದದ್ದು. ಪ್ರಸ್ತುತಿ ಪಡಿಸುವ ಕಲೆ ಮತ್ತು ನಿರ್ಣಯ ಮಾಡುವ ಶಕ್ತಿಯಲ್ಲದೆ ಅವರು ಸ್ವಯಂ ಅರಿವನ್ನು ಮತ್ತು ಸಾಮಾಜಿಕ ಸಂಬಂಧಗಳ ಪ್ರಜ್ಞೆಯನ್ನು ಬೆಳೆಸಿಕೊಂಡರು. ಚಿಂತನೆ, ಅನ್ವೇಷಣೆ, ತೀರ್ಮಾನಕ್ಕೆ ಬರುವುದು – ಇವುಗಳನ್ನು ಅವರು ಕಲಿತರು; ಮತ್ತು ಈ ರೀತಿಯಲ್ಲಿ ಅವರು ನಾವು ಯಾವುದನ್ನು ಮೇಲಿನ ಮಟ್ಟದ ಕಲಿಕಾ ಕೌಶಲಗಳು ಎಂದು ಕರೆಯುತ್ತೇವೆಯೋ ಅದಕ್ಕೆ ಪರಿಚಯಿಸಲ್ಪಟ್ಟರು. ಅವರ ಚಟುವಟಿಕೆಗಳಲ್ಲಿ ಅಂಕಗಣಿತ ಮತ್ತು ಭಾಷಾ ಕೌಶಲಗಳು, ಪರಿಸರದ ಕುರಿತಾದ ಅರಿವು ಇವೆಲ್ಲವೂ ಸೇರಿದ್ದವು; ಅವರ ಕಲಿಕೆಗೆ ಸಾಮಾಜಿಕ ಮತ್ತು ಭಾವನಾತ್ಮಕ ಆಯಾಮಗಳಿದ್ದವು ಮತ್ತು ಎಲ್ಲಕ್ಕೂ ಮಿಗಿಲಾಗಿ ಅದರಲ್ಲಿ ನೀರಿನ ಪ್ರಾಮುಖ್ಯತೆ ಮತ್ತು ಪರಿಸರ ಪ್ರಜ್ಞೆಯನ್ನು ಕೇಂದ್ರವಾಗಿರಿಸಿಕೊಂಡ ಮಾನವ ಮೌಲ್ಯಗಳ ತಿಳುವಳಿಕೆಯೂ ಇತ್ತು. ತರಗತಿಯು ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ ಅತ್ಯಂತ ಸೂಕ್ತ ತಾಣವಾಯಿತು. ಹೀಗಾಗಿ ಉತ್ತಮವಾಗಿ ರೂಪಿಸಲ್ಪಟ್ಟ ಕಾರ್ಯಯೋಜನೆಯು, ಕಲಿಕೆಯ ಅನೇಕ ಅಂಶಗಳಲ್ಲಿ ವಿದ್ಯಾರ್ಥಿಗಳನ್ನು ಹೇಗೆ ತೊಡಗಿಸಿಕೊಳ್ಳಬಹುದು ಎಂಬುದಕ್ಕೆ, ಈ ವಿದ್ಯಾರ್ಥಿ-ಕೇಂದ್ರಿತ ಸಾಮುದಾಯಿಕ



**ಚಿತ್ರ 1. ಒಬ್ಬ ವಿದ್ಯಾರ್ಥಿಯು ನೀರಿಗೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಅಜ್ಜಿಯಿಂದ ಮಾಹಿತಿ ಕಲೆಹಾಕುತ್ತಿರುವುದು**



ಚಿತ್ರ 2. ಯೋಜನಾ ಮೇಳದ ಸಮಯದಲ್ಲಿ ವಿದ್ಯಾರ್ಥಿಗಳು ತಮ್ಮ ಕಾರ್ಯಯೋಜನೆಯನ್ನು ಪ್ರಸ್ತುತಿಪಡಿಸುತ್ತಿರುವುದು



**ಚಿಕ್ಕವೀರೇಶ ಎಸ್.ವಿ** ಅವರು ಇಂಜಿನಿಯರಿಂಗ್‌ನಲ್ಲಿ ಪದವಿಯನ್ನು ಪಡೆದಿದ್ದಾರೆ. ಪ್ರಸ್ತುತ ಅವರು ಕರ್ನಾಟಕದ ಬಾಗಲಕೋಟೆ ಜಿಲ್ಲೆಯ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ವಿಜ್ಞಾನ ಮತ್ತು ಗಣಿತ ವಿಷಯದಲ್ಲಿ ಅವರು ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಶಾಲೆಗಳಲ್ಲಿ ಕಲಿಕಾ ಗಣಿತವನ್ನು ಅಭಿವೃದ್ಧಿಪಡಿಸಲು ಸಂಪನ್ಮೂಲಗಳನ್ನು ರಚಿಸುವ ಉದ್ದೇಶದಿಂದ ಅವರು ಕಲಿಕಾ ಚೇತರಿಕೆ ಸಂಪನ್ಮೂಲ ತಂಡದೊಂದಿಗೆ ಕಾರ್ಯನಿರ್ವಹಿಸಿದ್ದಾರೆ. ಅವರಿಗೆ ಓದುವುದು, ಬರೆಯುವುದು ಮತ್ತು ಶಾಲಾ ಶಿಕ್ಷಕರ ವೃತ್ತಿಪರ ಅಭಿವೃದ್ಧಿಯಲ್ಲಿ ತೊಡಗಿಸಿಕೊಳ್ಳುವುದೆಂದರೆ ಅಚ್ಚುಮೆಚ್ಚು. ಅವರನ್ನು chikkaveeresha.v@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಮಂಜುನಾಥ್ ಬಿ. ಆರ್.** | ಪರಿಶೀಲನೆ: **ಲತಾ ಕೆ.ಸಿ.**

# ಲಿಂಗ ಅಸಮಾನತೆಯಿಂದ ಸಮಾನತೆಯೆಡೆಗೆ | ‘ಸದ್ಭಾವನಾ ವಿದ್ಯಾಲಯ’ದ ಕಡೆಗೆ

ದೀಪ್ತಿ ಸಿಂಗ್ ರಾಥೋಡ್



ಸಮಾಜದಲ್ಲಿ ಪುರುಷರು ಮತ್ತು ಮಹಿಳೆಯರ ನಡುವೆ ಇರುವ ಅಸಮಾನತೆಯನ್ನು ಲಿಂಗ ಅಸಮಾನತೆಯು (Gender inequality) ಎತ್ತಿ ಹಿಡಿಯುತ್ತದೆ. ಈ ವಿಭಜನೆಯು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದು, 21ನೇ ಶತಮಾನದಲ್ಲಿಯೂ ಸಾಮಾಜಿಕ, ಆರ್ಥಿಕ, ರಾಜಕೀಯ, ವೈಜ್ಞಾನಿಕ, ಮನರಂಜನೆ ಮತ್ತು ಕ್ರೀಡಾ ಕ್ಷೇತ್ರಗಳಲ್ಲಿ ಇನ್ನೂ ಇದನ್ನು ನೋಡಬಹುದಾಗಿದೆ. ಮಹಿಳೆಯರ ವಿರುದ್ಧದ ತಾರತಮ್ಯವು ಲಿಂಗವನ್ನಾಧರಿಸಿ ತೆಗೆದುಕೊಳ್ಳುವ ಕ್ರಮಗಳು ಮತ್ತು ನಡವಳಿಕೆಗಳ ಪ್ರಮುಖ ಫಲಿತಾಂಶವಾಗಿದೆ. ಇದರಿಂದಾಗಿ ಹೆಣ್ಣು ಭ್ರೂಣ ಹತ್ಯೆಗಳು ಇಂದಿಗೂ ನಡೆಯುತ್ತಲೇ ಇವೆ. ಹಲವಾರು ಕಾರಣಗಳಿಂದಾಗಿ, ನೂರಾರು ಹುಡುಗಿಯರು ಇಂದಿಗೂ ಶಾಲೆಗೆ ಹೋಗುವ ಅವಕಾಶದಿಂದ ವಂಚಿತರಾಗಿದ್ದಾರೆ. ವರ್ಷಗಳು ಉರುಳಿದಂತೆ ಸಾಕಷ್ಟು ಬದಲಾವಣೆ ಕಂಡುಬಂದಿದ್ದರೂ ಮತ್ತು ಮಹಿಳೆಯರು ವಿವಿಧ ವೃತ್ತಿಗಳಲ್ಲಿ ಕೊಡುಗೆಗಳನ್ನು ನೀಡುತ್ತಿದ್ದರೂ, ಈ ಅಸಮತೋಲನವು ಸಮಾಜದ ಗಮನಾರ್ಹ ಭಾಗದ ಮೇಲೆ ಇನ್ನೂ ಪರಿಣಾಮ ಬೀರುತ್ತಿದೆ. ಇದರ ಪರಿಣಾಮವಾಗಿ, ಈಗಲೂ ಸಮಾಜದಲ್ಲಿ ನಾವು ನಡೆಸುವ ದಿನನಿತ್ಯದ ಸಂವಹನಗಳಲ್ಲಿ ಲಿಂಗ ತಾರತಮ್ಯವು ವ್ಯಾಪಕವಾಗಿದೆ–ಯಾದರೂ, ಅದು ನಮ್ಮನ್ನು ತಟ್ಟಿದಂತೆ ಕಾಣುವುದಿಲ್ಲ. ಈ ನಡವಳಿಕೆಗಳನ್ನು ಸಾಧ್ಯವಾದಷ್ಟು ಬೇಗ ಬದಲಾಯಿಸ–ಬೇಕಾಗಿದೆ; ಆಗ ಮಾತ್ರ ನಾವು ಸಾಂವಿಧಾನಿಕವಾಗಿ ಖಾತರಿಪಡಿಸಿದ ಮೂಲಭೂತ ಹಕ್ಕುಗಳ ನಿಜವಾದ ಮಹತ್ವವನ್ನು ನೋಡಲು ಮತ್ತು ನಿಜವಾದ ಸಮಾನತೆಯತ್ತ ಮುನ್ನಡೆಯನ್ನು ಸಾಧಿಸಲು ಸಾಧ್ಯವಾಗುತ್ತದೆ. ಲಿಂಗ ಅಸಮಾನತೆಯು ಹಲವಾರು ಸಣ್ಣ ಕ್ರಿಯೆಗಳ ಮತ್ತು ನಡವಳಿಕೆಗಳ ಪರಿಣಾಮವಾಗಿದೆ. ನಾವು ಎಲ್ಲಾ ವಿದ್ಯಾರ್ಥಿಗಳನ್ನು ಸಮಾನವಾಗಿ ಪರಿಗಣಿಸುತ್ತೇವೆ ಮತ್ತು ಲಿಂಗ ತಾರತಮ್ಯ ಮಾಡುವುದಿಲ್ಲ ಎಂದು ಅನೇಕ ಶಾಲೆಗಳು ಪ್ರತಿಪಾದಿಸುತ್ತವೆ. ಆದರೆ ನನ್ನ 12 ವರ್ಷಗಳ ಶಿಕ್ಷಕ ವೃತ್ತಿಯಲ್ಲಿ, ಶಾಲಾ ಹಂತದಲ್ಲಿ ಲಿಂಗ ಅಸಮಾನತೆಗಳನ್ನು ನಾನು ಕಣ್ಣಾರೆ ಕಂಡಿದ್ದೇನೆ ಮತ್ತು ಅನುಭವಿಸಿದ್ದೇನೆ ಕೂಡ.

ಒಂದು ದಿನ, ನನಗೆ ಒಬ್ಬ ವಿದ್ಯಾರ್ಥಿನಿ ಕಡೆಯಿಂದ ದೂರವಾಣಿ ಕರೆ ಬಂದಿತು. ಅವಳು ಕೆಲವು ಹಿಂದಿ ಪಠ್ಯದ ಪ್ರಶ್ನೆಗಳನ್ನು ಅರ್ಥ ಮಾಡಿಸಬೇಕೆಂದು ಕೇಳಿದಳು. ನಮ್ಮ ಫೋನಿನ ಸಂಭಾಷಣೆಯ ಮಧ್ಯದಲ್ಲಿ, ಅವಳು ತನ್ನ ಸಹೋದರ ಕೆಲಸದಿಂದ ಮನೆಗೆ ಹಿಂದಿರುಗಿರುವುದಾಗಿಯೂ ಮತ್ತು ಅವನಿಗೆ ಊಟ ಬಡಿಸಬೇಕಾಗಿರುವುದರಿಂದ ಸ್ವಲ್ಪ ಸಮಯ ನಮ್ಮ ಸಂಭಾಷಣೆಯನ್ನು ಸ್ಥಗಿತಗೊಳ್ಳುತ್ತೇನೆ ಎಂದು ಹೇಳಿದಳು. ಆಧುನಿಕ ಸಮಾಜದಲ್ಲಿ ಹುಡುಗಿಯರನ್ನು ಇನ್ನೂ ಮನೆಯ ಕೆಲಸಗಳಿಗೆ ಮಾತ್ರ ಸೀಮಿತವೆಂದು ಪರಿಗಣಿಸಲಾಗಿದೆಯೇ ಎಂದು ಇದು ನನ್ನನ್ನು ಪ್ರಶ್ನಿಸುವಂತೆ ಮಾಡಿತು. ಮನೆಯಲ್ಲಿ ಸಹೋದರಿ ಇದ್ದರೆ ಮತ್ತು ಸಹೋದರ ಹೊರಗಿನಿಂದ ಬಂದರೆ, ತಾಯಿಯ ಅನುಪಸ್ಥಿತಿಯಲ್ಲಿ, ಸಹೋದರಿಯೇ ಅವನಿಗೆ ಊಟ ಬಡಿಸಬೇಕೇ? ಮತ್ತು ತಾಯಂದಿರು ಮತ್ತು ಸಹೋದರಿಯರು ಮಾತ್ರ ಏಕೆ ಊಟವನ್ನು ಬಡಿಸಬೇಕು? ಚಿಕ್ಕಂದಿನಿಂದಲೇ, ಹುಡುಗರು ಮತ್ತು ಹುಡುಗಿಯರಿಗೆಂದೇ ವಿವಿಧ ಮನೆಕೆಲಸಗಳನ್ನು ನಿಗದಿಪಡಿಸಲಾಗಿದೆ.

ಭಾಷೆ, ಚಿತ್ರಗಳು ಮತ್ತು ಕಥೆಗಳ ಮೂಲಕ, ಮನೆಕೆಲಸಗಳ ವಿಭಜನೆಯು ಲಿಂಗವನ್ನು ಆಧರಿಸಿದೆ. ಈ ರೀತಿಯಾದ ವ್ಯತ್ಯಾಸವನ್ನು ಉತ್ತೇಜಿಸುವಲ್ಲಿ ಶಾಲೆಗಳು ಪ್ರಮುಖ ಪಾತ್ರವಹಿಸುತ್ತವೆ. ಮನೆ ಕೆಲಸವು ಕೇವಲ ಹೆಣ್ಣುಮಕ್ಕಳು ಮತ್ತು ಮಹಿಳೆಯರ ಜವಾಬ್ದಾರಿಯಾಗಿದ್ದು, ಮನೆಯ ಹೊರಗಿನ ಕೆಲಸವು ಹುಡುಗರು ಮತ್ತು ಪುರುಷರ ಜವಾಬ್ದಾರಿಯಾಗಿದೆ ಎಂಬುದು ನಮ್ಮ ಬಲವಾದ ನಂಬಿಕೆಯಾಗಿದೆ. ಇಂತಹ ನಂಬಿಕೆಗಳ ಬಗ್ಗೆ ನಾವು ಆಳವಾದ ಚರ್ಚೆಗಳನ್ನು ಕೈಗೊಂಡರೆ ಮತ್ತು ಶಾಲಾ ಕೆಲಸ ಕಾರ್ಯಕ್ರಮಗಳಲ್ಲಿ ಹುಡುಗ ಮತ್ತು ಹುಡುಗಿಯರ ಭಾಗವಹಿಸುವಿಕೆಯನ್ನು ಖಚಿತಪಡಿಸಿದರೆ ಮಾತ್ರ ಇದರಲ್ಲಿ ಬದಲಾವಣೆ ಕಾಣಲು ಪ್ರಾರಂಭವಾಗುತ್ತದೆ.

ಹುಡುಗರು ಮತ್ತು ಹುಡುಗಿಯರನ್ನು ಅವರ ಕನಸುಗಳ ಬಗ್ಗೆ ತರಗತಿಯಲ್ಲಿ ಯಾವಾಗ ಕೇಳಿದರೂ, ಹುಡುಗರು ಸೇನೆ ಅಥವಾ ಪೊಲೀಸ್ ಪಡೆಗೆ ಸೇರುವುದಾಗಿಯೂ ಅಥವಾ ವೈದ್ಯರಾಗುವ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸುತ್ತಾರೆ. ಆದರೆ, ಹೆಚ್ಚಿನ ಸಂಖ್ಯೆಯ ಹುಡುಗಿಯರು ಬೋಧನಾ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ ಅಥವಾ ಮುಂದಿನ ದಿನಗಳಲ್ಲಿ ಅವರು ಕೇವಲ ಮನೆಯ ಕೆಲಸವನ್ನು ಮಾತ್ರ ಮಾಡಬೇಕಾದ ಅನಿವಾರ್ಯತೆ ಬಂದೊದಗುವುದರಿಂದ ಅವರು ತಮ್ಮ ಶಿಕ್ಷಣವನ್ನು ಏಕೆ ಮುಂದುವರಿಸಬೇಕು? ಎಂದು ಸಹ ಪ್ರಶ್ನಿಸುತ್ತಾರೆ.

ನಾನು ನನ್ನ ವಿದ್ಯಾರ್ಥಿಗಳನ್ನು ಅವರ ವೃತ್ತಿಯ ಬಗ್ಗೆ ಕೇಳಿದಾಗಲೆಲ್ಲಾ, ಹೆಚ್ಚಿನ ಹುಡುಗಿಯರು ಇದೇ ರೀತಿಯ ಉತ್ತರಗಳನ್ನು ನೀಡುತ್ತಾರೆ. ಇಂದು ಮಹಿಳೆಯರು ಪುರುಷರೊಂದಿಗೆ ಹೊರಗೆ ಕೆಲಸ ಮಾಡಲು ಹೋದರೂ, ಸಾಮಾಜಿಕ ಆಚರಣೆಗಳಿಂದಾಗಿ, ಕೆಲವು ವೃತ್ತಿಗಳು ಮಹಿಳೆಯರಿಗೆ ಮಾತ್ರ ಸೂಕ್ತವೆಂದು ಪರಿಗಣಿಸಲ್ಪಟ್ಟಿವೆ, ಅದರಲ್ಲಿ

ಶಿಕ್ಷಕ ವೃತ್ತಿಯೂ ಸಹ ಒಂದಾಗಿದೆ ಎಂದು ಯೋಚಿಸಲು ಇದು ನಮ್ಮನ್ನು ಬಲವಂತಪಡಿಸುತ್ತದೆ. ನಾನು ಸಹ ಒಬ್ಬ ಶಿಕ್ಷಕಿ. ಕುಟುಂಬದವರೊಂದಿಗೆಯೋ ಅಥವಾ ಇತರರೊಂದಿಗೆಯೋ ಸಾಮಾನ್ಯವಾಗಿ ಮಾತನಾಡುವ ಸಂದರ್ಭದಲ್ಲಿ, ನಾನು ವೃತ್ತಿಯಲ್ಲಿ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದೇನೆ ಎಂದು ಹೇಳಿದಾಗಲೆಲ್ಲಾ, ಎಲ್ಲರೂ ಶಿಕ್ಷಕರ ವೃತ್ತಿಯು ಮಹಿಳೆಯರಿಗೆ ಉತ್ತಮವಾದ ಕೆಲಸ ಎಂದು ನನ್ನನ್ನು ಹೊಗಳುತ್ತಾರೆ ಏಕೆಂದರೆ, ಈ ವೃತ್ತಿಯು ನಿಗದಿತ ಸಮಯವನ್ನು ಹೊಂದಿರುವ ಕಾರಣದಿಂದಾಗಿ, ತಮ್ಮ ಕೆಲಸದ ಜೊತೆಗೆ, ಅವರು ತಮ್ಮ ಕುಟುಂಬಗಳಿಗೂ ಸಹ ಸಮಯವನ್ನು ನೀಡಬಹುದೆಂದು. ಮಹಿಳೆಯರು ಯಾವ ರೀತಿಯ ಕೆಲಸಗಳನ್ನು ಮಾಡಬೇಕೆಂದು ಸಮಾಜವು ಈಗಾಗಲೇ ನಿರ್ಧರಿಸಿರುವುದರಿಂದ ಹೆಣ್ಣುಮಕ್ಕಳು ಈ ವೃತ್ತಿಗಳನ್ನು ಮೀರಿ ಯೋಚಿಸಲು ಸಾಧ್ಯವಾವಿಲ್ಲ-ದಂತಾಗಿದೆ. ಶಾಲೆಗಳಲ್ಲಿ ಲಿಂಗ ತಾರತಮ್ಯವನ್ನು ಉತ್ತೇಜಿಸುವ ಆಚರಣೆಗಳ ಕೆಲವು ಉದಾಹರಣೆಗಳು ಈ ಕೆಳಕಂಡಂತಿವೆ:

- ಲಿಂಗ ಅಸಮಾನತೆಯನ್ನು ಉತ್ತೇಜಿಸುವಂತಹ ಭಾಷೆಯನ್ನು ಬಳಕೆ ಮಾಡುವುದು. ಒಬ್ಬ ಹುಡುಗ ಸಹಜವಾಗಿ ಅಳುತ್ತಿದ್ದರೆ 'ನೀನೇಕೆ ಹುಡುಗಿಯರಂತೆ ಅಳುತ್ತಿದ್ದೀಯಾ?' ಎಂದು ಕೇಳುವುದು. ಇನ್ನು, ಕೆಲವು ಹುಡುಗರು ಸ್ವಾಭಾವಿಕವಾಗಿಯೇ ನಾಚಿಕೆಯ ಸ್ವಭಾವದವರಾಗಿರುತ್ತಾರೆ ಹಾಗೂ ಅವರಿಗೆಂದೇ ನಿಯೋಜಿಸಲಾದ ಕೆಲವು ಕೆಲಸಗಳನ್ನು ಮಾಡಲು ಹೆಣಗಾಡುತ್ತಿರುತ್ತಾರೆ. ಅಂತಹ ಹುಡುಗರಿಗೆ 'ಹೆಣ್ಣುಮಕ್ಕಳಂತೆ ನೀನೇಕೆ ಸಂಕೋಚಪಡುತ್ತೀಯಾ?' ಎಂದು ಮೂದಲಿಸುವುದು.

- ತರಗತಿಯಲ್ಲಿ, ಪ್ರಾಥಮಿಕ ಶಾಲೆಯಿಂದಲೇ ಹುಡುಗರು ಮತ್ತು ಹುಡುಗಿಯರು ಪ್ರತ್ಯೇಕವಾಗಿ ಕುಳಿತುಕೊಳ್ಳಲು ಆಸನ ವ್ಯವಸ್ಥೆಯನ್ನು ಮಾಡಲಾಗಿದೆ. ಚಿಕ್ಕ ವಯಸ್ಸಿನಲ್ಲಿ ಅವರ ನಡವಳಿಕೆಯಲ್ಲಿನ ವ್ಯತ್ಯಾಸವು ಹೆಚ್ಚು ಗೋಚರವಾಗುವುದಿಲ್ಲ, ಆದರೆ ಅವರು ಉನ್ನತ ಪ್ರಾಥಮಿಕ ತರಗತಿಯನ್ನು ತಲುಪುವ ಹೊತ್ತಿಗೆ, ಅಂತಹ ವ್ಯತ್ಯಾಸವನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ.

- ಶಾಲೆಯಲ್ಲಿ ಬೆಳಗ್ಗೆ ನಡೆಸುವ ಅಸೆಂಬ್ಲಿಯಲ್ಲಿ ಹುಡುಗರು ಮತ್ತು ಹುಡುಗಿಯರಿಗಾಗಿಯೇ ಪ್ರತ್ಯೇಕ ಸಾಲುಗಳಿವೆ.

- ಎಲ್ಲರನ್ನು ಸರತಿ ಸಾಲಿನಲ್ಲಿ ನಿಲ್ಲಿಸಿದಾಗ, ಹುಡುಗಿಯರನ್ನು ಯಾವಾಗಲೂ ಮುಂದೆ ನಿಲ್ಲಿಸುತ್ತಾರೆ ಮತ್ತು ಹುಡುಗರು ಅವರ ಹಿಂದೆ ನಿಲ್ಲುತ್ತಾರೆ.

- ಸಾಂಪ್ರದಾಯಿಕವಾಗಿ, ಬೆಳಗ್ಗಿನ ಅಸೆಂಬ್ಲಿಯ ನೇತೃತ್ವವನ್ನು ಸಾಮಾನ್ಯವಾಗಿ ಹುಡುಗಿಯರಿಗೆ ವಹಿಸಲಾಗುತ್ತದೆ.

- ಕಲೆ, ಗಾಯನ, ರಂಗೋಲಿ ಮತ್ತು ಅಲಂಕಾರದಂತಹ ಚಟುವಟಿಕೆಗಳನ್ನು ಹುಡುಗಿಯರಿಗೆ ವಹಿಸಿದರೆ, ಹುಡುಗರು ಭಾಷಣ, ಚರ್ಚೆ ಮತ್ತು ಕವನ ವಾಚನದ ಕಡೆಗೆ ಹೆಚ್ಚು ಒಲವು ತೋರುತ್ತಾರೆ.

- ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹೆಣ್ಣುಮಕ್ಕಳೇ ಹೆಚ್ಚಾಗಿ ಭಾಗವಹಿಸುತ್ತಾರೆ.

- ಓಟ, ಕ್ರಿಕೆಟ್ ಮತ್ತು ಫುಟ್ಬಾಲ್‌ನಂತಹ ಕ್ರೀಡೆಗಳಲ್ಲಿ ಹುಡುಗರು ಭಾಗವಹಿಸಿದರೆ, ಹುಡುಗಿಯರಿಗೆ ಕೇರಂ, ಲೂಡೋ, ಖೋ-ಖೋ, ಕಬಡ್ಡಿ ಮತ್ತು ಬ್ಯಾಡ್ಮಿಂಟನ್-ನಂತಹ ಆಟಗಳನ್ನು ಆಯೋಜಿಸಲಾಗುತ್ತದೆ.

- ತರಗತಿಯನ್ನು ಶುಚಿಗೊಳಿಸುವುದು, ಕಪ್ಪುಹಲಗೆಯನ್ನು ಸ್ವಚ್ಛಗೊಳಿಸುವುದು ಮತ್ತು ಇತರೆ ಹುಡುಗಿಯರನ್ನು ಸುಮ್ಮನಿರಿಸುವುದು ಇತ್ಯಾದಿ ಕೆಲಸಗಳನ್ನು ಹುಡುಗಿಯರಿಗೆ ವಹಿಸಿದರೆ, ಹುಡುಗರಿಗೆ ಇಡೀ ತರಗತಿಯನ್ನು ಶಾಂತಚಿತ್ತದಿಂದಿಡುವುದು, ಬಕೆಟ್‌ನಿಂದ ನೀರು ಎತ್ತಿ ತರುವುದು, ಟೇಬಲ್ ಬೆಂಚುಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಎತ್ತಿ ಇಡುವುದು ಅಥವಾ ಅವುಗಳನ್ನು ಅಲ್ಲಿಂದ ತೆಗೆಯುವುದು ಇತ್ಯಾದಿ ಜವಾಬ್ದಾರಿಗಳನ್ನು ವಹಿಸಲಾಗುತ್ತದೆ.

ನಾನು ಬನಾರಿಯ ಸರ್ಕಾರಿ ಮಾಧ್ಯಮಿಕ ಶಾಲೆಗೆ ಸೇರಿಕೊಂಡಾಗ, ಲಿಂಗ ಅಸಮಾನತೆಯನ್ನು ಉತ್ತೇಜಿಸಲು ತಿಳಿದೋ ಅಥವಾ ತಿಳಿಯದೆಯೋ ಕೊಡುಗೆ ನೀಡುತ್ತಿರುವ ಅನೇಕ ವಿಷಯಗಳು ನನ್ನ ಕಣ್ಣಿಗೆ ಬಿದ್ದವು. ನಾವು ಸ್ವಲ್ಪ ಯೋಚಿಸಿದರೆ ಶಾಲೆಯಲ್ಲಿನ ಈ ಅಸಮಾನತೆಯನ್ನು ಹೋಗಲಾಡಿಸಲು ಪ್ರಯತ್ನ ಮಾಡಬಹುದು ಎನಿಸಿತು. ನಾನು ಶಿಕ್ಷಕಿಯಾಗಿರುವುದರಿಂದ, ಇಂತಹ ಅಸಮಾನತೆಯ ಅಂತರವನ್ನು ನಿವಾರಿಸುವ ನಿಟ್ಟಿನಲ್ಲಿ ಮಹತ್ವದ ಪಾತ್ರ ವಹಿಸುವಂತಹ ಬೋಧನ ವಿಧಾನವನ್ನು ಬಳಸಬೇಕಿರುವುದು ನನ್ನ ಕರ್ತವ್ಯವೂ ಆಗಿದೆ.

- ಕೆಲವು ಕ್ರೀಡೆಗಳು ಹುಡುಗಿಯರಿಗೆ ಮಾತ್ರ ಅಥವಾ ಕೆಲವು ಹುಡುಗರಿಗೆ ಮಾತ್ರ ಎಂಬ ಗಾಢನಂಬಿಕೆಯನ್ನು ಮುರಿಯಲು ನಾವು, ಇಡೀ ಸಿಬ್ಬಂದಿಯೊಂದಿಗೆ ಕೆಲವು ಸಣ್ಣ ಪ್ರಯತ್ನಗಳನ್ನು ಮಾಡಿದ್ದೇವೆ. ನಾವು ಹುಡುಗಿಯರಿಗೆ ಹುಡುಗರ ಜೊತೆಯಲ್ಲಿ ಕ್ರಿಕೆಟ್ ಮತ್ತು ಫುಟ್ಬಾಲ್ ಆಡುವ ಅವಕಾಶವನ್ನು ಒದಗಿಸಿದ್ದೇವೆ.

- ಮಧ್ಯಾಹ್ನದ ಊಟವನ್ನು ಎಲ್ಲರೂ ಒಟ್ಟಿಗೆ ಕುಳಿತು ಮಾಡುವ ವ್ಯವಸ್ಥೆಯನ್ನು ಮಾಡಲಾಗಿದ್ದು, ಊಟ ಬಡಿಸುವ ಕೆಲಸದಲ್ಲಿ ಹುಡುಗರೂ ಕೂಡ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

- ಶಾಲೆಯ ಹಿಂಭಾಗದಲ್ಲಿರುವ ಖಾಲಿ ಜಾಗದಲ್ಲಿ ಒಂದು ಉದ್ಯಾನವನವನ್ನು ಬೆಳೆಸಬೇಕೆಂದು ನಾವು ನಿರ್ಧರಿಸಿದೆವು. ಆ ಜಾಗವು ತುಂಬಾ ಗಲೀಜಿನಿಂದ ಕೂಡಿದ್ದು – ಮಿತಿಮೀರಿ ಬೆಳೆದ ಕಳೆ ಕಸದಿಂದ ತುಂಬಿತ್ತು. ಹಾಗಾಗಿ ಶಿಕ್ಷಕರು ಮತ್ತು ಮಕ್ಕಳೆಲ್ಲರೂ ಸೇರಿ ಆ ಜಾಗವನ್ನು ಶುಚಿಗೊಳಿಸಿದೆವು. ಈ ಕೆಲಸದಲ್ಲಿ ಮಹಿಳಾ ಮತ್ತು ಪುರುಷ ಶಿಕ್ಷಕರಿಬ್ಬರೂ ಸಮಾನ ಜವಾಬ್ದಾರಿಯನ್ನು ವಹಿಸಿಕೊಂಡರು. ಇದರಿಂದ ಮಕ್ಕಳೂ ಪ್ರೇರಿತರಾಗಿ ಹುಡುಗರು ಮತ್ತು ಹುಡುಗಿಯರು ಇಬ್ಬರೂ ಸಮಾನವಾಗಿ ಭಾಗವಹಿಸಿದರು.

- ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹೆಚ್ಚಾಗಿ ಹುಡುಗಿಯರು ಮಾತ್ರ ನೃತ್ಯದಲ್ಲಿ ಭಾಗವಹಿಸುವುದನ್ನು ಗಮನಿಸಿದ್ದೇನೆ. ಹುಡುಗರನ್ನೂ ನೃತ್ಯದಲ್ಲಿ ತೊಡಗಿಸುವ ಪ್ರಯತ್ನ ಆರಂಭಿಸಿದ್ದೇನೆ. ನೃತ್ಯದಲ್ಲಿ ಭಾಗವಹಿಸುವಂತೆ ಅವರನ್ನು ಎಂದಿಗೂ ಕರೆಯದ ಕಾರಣ ಅವರು ನೃತ್ಯದ ಬಗ್ಗೆ ನಾಚಿಕೆಪಡುತ್ತಾರೆ ಎಂದು ನನಗೆ ತಿಳಿದಿತ್ತು. ಹಾಗಾಗಿ ನಾನು ಅವರೊಂದಿಗೆ ಇದರ ಬಗ್ಗೆ ಮಾತನಾಡಿ ನೃತ್ಯವನ್ನು ಕೇವಲ ಒಂದು ಕಲೆಯಾಗಿ ನೋಡಬೇಕು ಹಾಗೂ ತಮ್ಮಲ್ಲಿರುವ ಕೌಶಲವನ್ನು ಎಲ್ಲರಿಗೂ ತೋರಿಸಬೇಕು ಎಂದು ತಿಳಿಹೇಳಿದೆನು. ನಂತರ, ಹುಡುಗರು ನೃತ್ಯ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಪ್ರಾರಂಭಿಸಿದರು. ಕೆಲವು ಹುಡುಗರು ನಾನು ಅವರ ಶಾಲೆಗೆ ಶಿಕ್ಷಕಿಯಾಗಿ ಬರದೇ ಇದ್ದಿದ್ದರೆ, ಅವರಿಗೆ ನೃತ್ಯದಲ್ಲಿ ಭಾಗವಹಿಸುವ ಅವಕಾಶವೇ ಸಿಗುತ್ತಿರಲಿಲ್ಲ ಎಂದು ಹೇಳುತ್ತಿದ್ದರು.

- ತರಗತಿಯಲ್ಲೂ, ಲಿಂಗ ಅಸಮಾನತೆಯನ್ನು ಹೋಗಲಾಡಿಸಲು ನಾನು ಕೆಲವು ಮಾರ್ಪಾಡುಗಳನ್ನು ಮಾಡಿದ್ದೇನೆ: ಹುಡುಗರು ಮತ್ತು ಹುಡುಗಿಯರಿಗಾಗಿ ತರಗತಿಯಲ್ಲಿ ಪ್ರಜಾಪ್ರಭುತ್ವ ಮಾದರಿಯ ಆಸನದ ವ್ಯವಸ್ಥೆ ಮಾಡಿರುವುದು

- ಸಹಪಾಠಿಗಳೊಂದಿಗೆ ಕೂಡಿ ಕಲಿಯುವ ಸಮಯದಲ್ಲಿ, ಗುಂಪು ಕಲಿಕೆ, ಚಟುವಟಿಕೆಗಳಿಗಾಗಿ ಹುಡುಗರು ಮತ್ತು ಹುಡುಗಿಯರನ್ನು ಜೋಡಿಗಳಾಗಿ ಅಥವಾ ಗುಂಪು–ಗಳನ್ನಾಗಿ ರಚಿಸುವುದು

- ಭಾಷೆಯನ್ನು ಕಲಿಸುವಾಗ ಹುಡುಗರು ಮತ್ತು ಹುಡುಗಿಯರನ್ನು ಪಾತ್ರಾಭಿನಯಗಳಲ್ಲಿ ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವಂತೆ ಮಾಡುವುದು

- ತರಗತಿಗಳನ್ನು ಸ್ವಚ್ಛಗೊಳಿಸುವ ಜವಾಬ್ದಾರಿಯನ್ನು ಹುಡುಗರು ಮತ್ತು ಹುಡುಗಿಯರಿಗೆ ಇಬ್ಬರಿಗೂ ನೀಡುವುದು

- ವಿಜ್ಞಾನ ಮಾದರಿಗಳನ್ನು ತಯಾರಿಸುವಲ್ಲಿ ಹುಡುಗಿಯರನ್ನು ತೊಡಗಿಸಿಕೊಳ್ಳುವುದು
- ಅಸೆಂಬ್ಲಿ ಕಾರ್ಯಕ್ರಮಗಳಲ್ಲಿ ಹುಡುಗರು ಮತ್ತು ಹುಡುಗಿಯರಿಬ್ಬರೂ ಸಮಾನವಾಗಿ ಭಾಗವಹಿಸುವುದನ್ನು ಖಚಿತಪಡಿಸಿಕೊಳ್ಳುವುದು

- ಒಂದು ಹುಡುಗಿಯಾಗಿರುವುದು ಅಥವಾ ಹುಡುಗನಾಗಿ–ರುವುದರ ಅರ್ಥವೇನು ಎಂದು ಅವರೊಂದಿಗೆ ಮಾತನಾಡುವುದು; ಕೆಲಸಗಳ ವಿಷಯದಲ್ಲಿ ಅವರ ಅಭಿಪ್ರಾಯಗಳನ್ನು ವಿಂಗಡಿಸುವುದು ಮತ್ತು ನನ್ನ ದೃಷ್ಟಿಕೋನವನ್ನು ಅವರೊಂದಿಗೆ ಹಂಚಿಕೊಳ್ಳುವುದು; ಮನೆಯಲ್ಲಿ ಮನೆಕೆಲಸಗಳಲ್ಲಿ ತಮ್ಮ ತಾಯಂದಿರಿಗೆ ಸಹಾಯ ಮಾಡಲು ಹುಡುಗರಿಗೆ ಹೇಳುವುದು.



**ದೀಪ್ತಿ ಸಿಂಗ್ ರಾಥೋಡ್** ಅವರು ಬನಾರಿಯ (ಜಂಜ್ಗೀರ್ ಜಿಲ್ಲೆ, ಛತ್ತೀಸ್ಗಢ) ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ಬೋಧಿಸುತ್ತಿದ್ದಾರೆ. ಬಿ. ಎಡ್, (B Ed,)ನೊಂದಿಗೆ ಕಲಾ ಪದವೀಧರರಾಗಿರುವ ಅವರು ಕಾನೂನಿನಲ್ಲಿ ಪದವಿಯನ್ನೂ ಸಹ ಪಡೆದಿದ್ದಾರೆ. ಬೋಧನೆಯು ಅವರ ಮೆಚ್ಚಿನ ಉದ್ಯೋಗವಾಗಿದೆ ಹಾಗೂ ವಿದ್ಯಾರ್ಥಿಗಳೊಂದಿಗೆ ಸಂವಹನ ನಡೆಸುವುದು ಮತ್ತು ಅವರನ್ನು ಅರ್ಥಮಾಡಿಕೊಳ್ಳುವುದು, ಅವರಿಗೆ ಬೋಧಿಸುವುದು ನೆಚ್ಚಿನ ಹವ್ಯಾಸಗಳಾಗಿವೆ. ಇದಲ್ಲದೆ, ಅವರು ಹಾಡುವುದು, ನೃತ್ಯ ಮಾಡುವುದು ಮತ್ತು ಪೇಂಟಿಂಗ್ ಮಾಡುವುದನ್ನು ಸಹ ಹೆಚ್ಚು ಇಷ್ಟಪಡುತ್ತಾರೆ. ಅವರನ್ನು dipti.rathore87@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: ಲತಾ ಕೆ.ಸಿ. | ಪರಿಶೀಲನೆ: ನಾಗಮಣಿ ಎಸ್. ಎನ್.

# ಸಮಾಜೋ-ಭಾವನಾತ್ಮಕ ಕಲಿಕೆಯ ಮೇಲೆ ಒತ್ತು | ಅಜೀಂ ಪ್ರೇಮ್‌ಜಿ ಶಾಲೆ, ಕಲಬುರಗಿ

ಫರ್ಝಾನಾ ಬೇಗಂ

ಮಕ್ಕಳಲ್ಲಿ ಸಮಾಜೋ–ಭಾವನಾತ್ಮಕ ಬುದ್ಧಿಮತ್ತೆಯು (Social-emotional intelligence) ಅಂತರ್ಗತವಾಗಿಯೇ ಇರುತ್ತದೆ. ಸಾಮಾಜಿಕ–ಭಾವನಾತ್ಮಕ ಸಾಮರ್ಥ್ಯಗಳು ನಮ್ಮನ್ನೇ ನಾವು ವ್ಯಕ್ತಪಡಿಸಿಕೊಳ್ಳಲು, ಇತರರನ್ನು ಅರ್ಥ ಮಾಡಿಕೊಳ್ಳಲು, ಬದಲಾವಣೆಗಳಿಗೆ ಹೊಂದಿಕೊಳ್ಳಲು, ದೈನಂದಿನ ಅಗತ್ಯಗಳನ್ನು, ಸವಾಲುಗಳನ್ನು ಮತ್ತು ಒತ್ತಡಗಳನ್ನು ನಿಭಾಯಿಸಲು ನಮಗೆ ಸಹಾಯ ಮಾಡುತ್ತವೆ. ಶಾಲೆಯಲ್ಲಿ ಪರಿಚಯಿಸುವ ಸಾಮಾಜಿಕ – ಭಾವನಾತ್ಮಕ ಕಲಿಕೆಯ ಕಾರ್ಯತಂತ್ರಗಳು ಮಕ್ಕಳ ನೈತಿಕತೆ ಮತ್ತು ನೈತಿಕ ಮೌಲ್ಯಗಳ ಮೇಲೆ ದೀರ್ಘಕಾಲೀನ ಪರಿಣಾಮಗಳನ್ನು ಬೀರುತ್ತವೆ. ಜೊತೆಗೆ ಅವರ ಶೈಕ್ಷಣಿಕ ಪ್ರಗತಿಯನ್ನು ಸದ್ದಿಲ್ಲದೆ ವರ್ಧಿಸುತ್ತವೆ. ಬಹುಬೇಗನೆ ಮೊದಲನಂತಾಗುವ ಗುಣವುಳ್ಳ ಹಾಗೂ ಸಾಮಾಜಿಕ ಮತ್ತು ಭಾವನಾತ್ಮಕ ಬುದ್ಧಿಮತ್ತೆಯನ್ನು ಹೊಂದಿರುವ ಮಕ್ಕಳನ್ನು ಬೆಳೆಸುವುದು ಪಾಲಕರಿಗೆ ಒಂದು ಸವಾಲಾಗಿದೆ. ಮಗುವಿನ ಮೆದುಳಿಗೆ, ಸಾಮಾಜಿಕ–ಭಾವನಾತ್ಮಕ ಕೌಶಲಗಳ ಬೆಳವಣಿಗೆಗೆ ಹುಟ್ಟಿನಿಂದ ಐದು ವರ್ಷಗಳವರೆಗಿನ ಅವಧಿಯು ಅತ್ಯಂತ ಮುಖ್ಯವಾದುದು. ಮಗುವಿನ ಜೀವಮಾನದುದ್ದದ ಪ್ರಗತಿ ಮತ್ತು ಯಶಸ್ಸುಗಳು ಬಹುಮಟ್ಟಿಗೆ ಈ ಅವಧಿಯಲ್ಲಿನ ಅದರ ಸಹಜ ಗುಣ (ಆನುವಂಶಿಕತೆ) ಹಾಗೂ ಅದಕ್ಕೆ ದೊರಕಿದ ಪೋಷಣೆಯನ್ನು (ಆರೈಕೆ, ಪೌಷ್ಟಿಕತೆ, ಪ್ರಚೋದನೆ, ಉತ್ತೇಜನ, ಸುತ್ತಮುತ್ತಲಿನ ಪರಿಸರ ಮತ್ತು ಬೋಧನೆ) ಅವಲಂಬಿಸಿದೆ. ಮಗು ತನ್ನ ಆರಂಭಿಕ ಬದುಕಿನ ಬಹುತೇಕ ಹದಿನೈದು ವರ್ಷಗಳನ್ನು ಶಾಲೆಯಲ್ಲಿ ಕಳೆಯುತ್ತದೆ. ಆದ್ದರಿಂದ ಮಗುವಿನ ಸಾಮಾಜಿಕ–ಭಾವನಾತ್ಮಕ ಬೆಳವಣಿಗೆಗೆ ಬೇಕಾದಷ್ಟು ಬೆಂಬಲ ಹಾಗೂ ಅವಕಾಶಗಳನ್ನು ಶಾಲೆಯು ಒದಗಿಸಬೇಕು. ಸಾಮಾಜಿಕ – ಭಾವನಾತ್ಮಕ ಕಲಿಕೆಯು ಸ್ವ–ಅರಿವು (ನಾನು ಯಾರು?), ಸ್ವ–ನಿರ್ವಹಣೆ (ನಾನು ಏನನ್ನು ಮಾಡಬೇಕು? ಅದನ್ನು ನಾನು ಹೇಗೆ ಮಾಡಬೇಕು?), ಜವಾಬ್ದಾರಿಯುತವಾಗಿ ನಿರ್ಧಾರವನ್ನು ತೆಗೆದುಕೊಳ್ಳುವುದು (ಯಾವುದು ಸರಿ? ಯಾವುದು ತಪ್ಪು? ಯಾವುದು ಒಳ್ಳೆಯದು ಅಥವಾ ಕೆಟ್ಟದ್ದು?), ಸಾಮಾಜಿಕ ಅರಿವುಗಳಂತಹ (ತನ್ನ ವ್ಯಕ್ತಿತ್ವವನ್ನು ಗುರುತಿಸಿ–ಕೊಳ್ಳುವುದು, ಇತರರ ವ್ಯಕ್ತಿತ್ವವನ್ನು ಗುರುತಿಸುವುದು) ಸಂಬಂಧದ ಕೌಶಲಗಳು (ಆರೈಕೆ, ಪರಿಗಣನೆ, ಅನುಕಂಪ, ಸಹಾನುಭೂತಿ) ಹಲವಾರು ಅಂಶಗಳನ್ನು ಒಳಗೊಳ್ಳುತ್ತದೆ. ಈ ಅಂಶಗಳಲ್ಲಿನ ನಿಪುಣತೆಯು ವಿದ್ಯಾರ್ಥಿಗಳಿಗೆ ವಿಚಾರ–ವಂತರಾಗಲು, ನೀತಿವಂತರಾಗಲು ಅನುವು ಮಾಡಿಕೊಡುತ್ತದೆ. ಆದ್ದರಿಂದ ಶಾಲೆಯಲ್ಲಿ ಪ್ರತಿಯೊಂದು ಮಗುವನ್ನು ಅರ್ಥ–ಮಾಡಿಕೊಳ್ಳುವಲ್ಲಿ ಮತ್ತು ಮಕ್ಕಳಿಗೆ ಈ ಸಂಬಂಧವಾಗಿ ನೆರವು ನೀಡುವಲ್ಲಿ ಶಿಕ್ಷಕರು ಪರಸ್ಪರ ಸಹಯೋಗದಿಂದ ಒಟ್ಟಾಗಿ ಕೆಲಸ ಮಾಡಬೇಕು. ಇದರಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸುವ ಇನ್ನಿತರ ಭಾಗೀದಾರರು ಇದ್ದಾರೆ ಎಂದು ಯೂರಿ ಬ್ರೋನ್ಫೆನ್ ಬ್ರನ್ನರ್ ಅವರು ತಮ್ಮ ಪರಿಸರ ಮಾದರಿಯಲ್ಲಿ ಉಲ್ಲೇಖಿಸುತ್ತಾರೆ.




ಚಿತ್ರ 1. ಬ್ರೋನ್‌ಫೆನ್‌ಬ್ರನ್ನರ್ (1979) ಅವರ ಮಾದರಿಯನ್ನು ಆಧರಿಸಿ ಜೋಲ್ ಗಿಬ್ಸ್ ಅವರು ರಚಿಸಿದ ರೇಖಾಕೃತಿ i

ಶಾಲೆಯೆನ್ನುವುದೊಂದು ಚಿಕ್ಕ ಸಮಾಜ. ನಮ್ಮ ಶಾಲೆಯಲ್ಲಿ ಮಕ್ಕಳ ಸಾಮಾಜಿಕ-ಭಾವನಾತ್ಮಕ ಕಲಿಕೆ ಮತ್ತು ಬೆಳವಣಿಗೆಯನ್ನು ಪ್ರೋತ್ಸಾಹಿಸಲು ನಾವು ಶಿಕ್ಷಕರು ಅವರ ದಿನಚರಿಯಲ್ಲಿ ವಿವಿಧ ಚಟುವಟಿಕೆಗಳನ್ನು ಅಳವಡಿಸುತ್ತೇವೆ. ತರಗತಿ ಕೊಠಡಿಯೊಂದರಲ್ಲಿ ಮಕ್ಕಳು ಪರಸ್ಪರ ದೂರುತ್ತಾರೆ, ಅಳುತ್ತಾರೆ, ಛೇಡಿಸುತ್ತಾರೆ, ಹೊಡೆದಾಡುತ್ತಾರೆ, ತೊಂದರೆ ಕೊಡುತ್ತಾರೆ. ಸಾಮಾಜಿಕ-ಭಾವನಾತ್ಮಕ ಕಲಿಕೆಯು ಅವರಿಗೆ ತಮ್ಮ ಭಾವನೆಗಳನ್ನು ಗುರುತಿಸಲು, ನಿಭಾಯಿಸಲು ಸಹಾಯ ಮಾಡುತ್ತದೆ. ಶಿಕ್ಷಕರಾಗಿ ನಾವು ಅವರಿಗೆ ಧನಾತ್ಮಕ ಗುರಿಗಳನ್ನು ಸಾಧಿಸಲು ನೆರವು ನೀಡುತ್ತೇವೆ. ಈ ಧನಾತ್ಮಕ ಗುರಿಗಳು, ಸಹಾನುಭೂತಿ ತೋರಿಸುವುದು (showing empathy), ಪರಸ್ಪರರೊಡನೆ ಸಕಾರಾತ್ಮಕ ಸಂಬಂಧವನ್ನು ಕಾಪಾಡಿಕೊಳ್ಳುವುದು, ಜವಾಬ್ದಾರಿಯುತ ನಿರ್ಧಾರಗಳನ್ನು ತೆಗೆದುಕೊಳ್ಳುವಂತಹ ಪ್ರಮುಖ ಸಾಮಾಜಿಕ-ಭಾವನಾತ್ಮಕ ಮೌಲ್ಯಗಳನ್ನು ಆಧರಿಸಿವೆ. ಅನುಭವ, ಘಟನೆ ಮತ್ತು ಬದುಕಿನ ಸಂದರ್ಭಗಳನ್ನು ಹಂಚಿಕೊಳ್ಳುವುದನ್ನು ನಾವು ಉತ್ತೇಜಿಸುತ್ತೇವೆ. ಕೇವಲ ಮಹಾನ್ ವ್ಯಕ್ತಿಗಳ ಕಥೆಗಳನ್ನು ಓದುವುದರ ಬದಲಾಗಿ ನಾವು ನಮ್ಮದೇ ಬದುಕಿನಿಂದ ಕಥೆಗಳನ್ನು ಹೆಕ್ಕಿ, ಹಂಚಿಕೊಳ್ಳುತ್ತೇವೆ. ಮಕ್ಕಳಿಗೆ ಸುರಕ್ಷಿತವಾದ ಹಾಗೂ ಸುಭದ್ರವಾದ ಒಂದು ಪರಿಸರವನ್ನು ನಿರ್ಮಿಸುವುದರ ಮೂಲಕ ಅವರಿಗೆ ದೈಹಿಕ ಮತ್ತು ಭಾವನಾತ್ಮಕ ಆರಾಮವನ್ನು, ಕಾಳಜಿಯನ್ನು ನೀಡಲು ಪ್ರಯತ್ನಿಸುತ್ತೇವೆ. ಇದರಿಂದ ಅವರು ತಮ್ಮ ಆಲೋಚನೆ, ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಮತ್ತು ತಮ್ಮ ತೊಂದರೆ, ಕಷ್ಟಗಳನ್ನು ಹಂಚಿಕೊಳ್ಳಲು ಸಾಧ್ಯವಾಗುತ್ತದೆ. ಅವರವರ ಅಗತ್ಯ ಮತ್ತು ಸನ್ನಿವೇಶವನ್ನು ಅವಲಂಬಿಸಿ, ನಾವು ಪ್ರತಿ ವಿದ್ಯಾರ್ಥಿಯೊಡನೆ ಮಾತುಕತೆಯನ್ನು ನಡೆಸುತ್ತೇವೆ. ಎಲ್ಲರನ್ನೂ ಸಮಾನವಾಗಿ ನೋಡುವುದರ ಮೂಲಕ ಮತ್ತು ಎಲ್ಲರಿಗೂ ಸಮಾನ ಅವಕಾಶಗಳನ್ನು ನೀಡುವುದರ ಮೂಲಕ ಶಾಲೆಯ ಆವರಣದೊಳಗೆ ನಾವು ಜಾತ್ಯತೀತತೆಯನ್ನು (secularism) ಅಳವಡಿಸಿಕೊಳ್ಳುತ್ತೇವೆ.


Pledge

- We the students and teachers of Azim Premji school, take this pledge.
- we will always keep ourselves clean
- we will keep the surrounding of our home and school clean
- we will follow the rules of the school.
- This is our school. we will come to school everyday. we will listen to our teachers and friends.
- we will respect the birds, animals & plants around us. we will respect the food we eat and the things we use.

we will help each other and learn together.



ಚಿತ್ರ 2. ತಮ್ಮ ಸುತ್ತಲಿರುವ ಪ್ರತಿಯೊಬ್ಬರನ್ನು ಮತ್ತು ಎಲ್ಲವುಗಳನ್ನು ಗೌರವಿಸುತ್ತೇವೆ ಎಂದು ಬೆಳಗಿನ ಸಮಯದಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಒಟ್ಟಾಗಿಯೇ ಪ್ರತಿಜ್ಞೆಯನ್ನು ಸ್ವೀಕರಿಸುತ್ತಿರುವುದು (ಪ್ರಮಾಣ ಮಾಡುತ್ತಿರುವುದು).



**ಚಿತ್ರ 3. ತರಗತಿಯನ್ನು ಪ್ರವೇಶಿಸುತ್ತಿರುವ ಮಗುವನ್ನು ಖುಷಿಯಿಂದ ಬರಮಾಡಿಕೊಳ್ಳುತ್ತಿರುವ ಶಿಕ್ಷಕಿ.**

## ಸ್ವ-ಅರಿವು ಹಾಗೂ ಸಾಮಾಜಿಕ ಅರಿವು

ಉಲ್ಲಾಸಮಯ ವಾತಾವರಣವನ್ನು ಸೃಷ್ಟಿಸಲು ಶಿಕ್ಷಕರು ಮಕ್ಕಳೊಂದಿಗೆ ನೃತ್ಯ, ನಾಟಕ ಅಭಿನಯ, ಗುಂಪು ಚರ್ಚೆ (circle time) ಇವುಗಳನ್ನು ಒಳಗೊಂಡಂತಹ ಮೋಜಿನ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಾರೆ. ಆಲಂಗಿಸುವುದು, ಪರಸ್ಪರ ಕೈಗಳನ್ನೆತ್ತಿ ತಟ್ಟುವುದರ (high-fives) ಜೊತೆಗೆ ಸ್ವಾಗತಿಸುವ ಇನ್ನಿತರ ಕೆಲವು ನಿರ್ದಿಷ್ಟ ಹಾವಭಾವಗಳಲ್ಲಿ ಮಕ್ಕಳು ಆಯ್ದುಕೊಳ್ಳುವ ಯಾವುದಾದರೊಂದು ಸನ್ನೆಯನ್ನು ಬಳಸಿ ಅವರನ್ನು ಬರಮಾಡಿಕೊಳ್ಳುತ್ತೇವೆ. ಆ ಮೂಲಕ ನಾವು ವಾತಾವರಣವನ್ನು ಉತ್ಸಾಹಭರಿತವನ್ನಾಗಿಡುತ್ತೇವೆ. ಅವರ ದಿನವು ಹೇಗೆ ಸಾಗುತ್ತಿದೆ, ಅವರಿಗೆ ಏನು ಅನ್ನಿಸುತ್ತಿದೆ, ಅವರ ಮನಸ್ಥಿತಿ ಬದಲಾಗಿದ್ದರೆ ಅದಕ್ಕೆ ಕಾರಣ ಏನು ಇತ್ಯಾದಿಗಳನ್ನು ನಾವು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತೇವೆ. ಇದು ಮಕ್ಕಳಿಗೆ ತಮ್ಮನ್ನು ತಾವು ಅರ್ಥ ಮಾಡಿಕೊಳ್ಳಲು ಕೂಡ ನೆರವಾಗುತ್ತದೆ. ಅವರಲ್ಲಿ ಸ್ವಯಂ-ಅರಿವು ಮತ್ತು ಸ್ವಯಂ ಪ್ರೇರಣೆಯು ಮೂಡುವಂತೆ ಮಾಡಲು, ಪರೀಕ್ಷೆಗಳನ್ನು ನಡೆಸಿದ ಮೇಲೆ ಉತ್ತರ ಪತ್ರಿಕೆಗಳನ್ನು ಅವರಿಗೆ ಮರಳ ನೀಡಲಾಗುತ್ತದೆ. ಇದರಿಂದ ಅವರಿಗೆ ಪರೀಕ್ಷೆಯಲ್ಲಿ ತಾವು ಹೇಗೆ ಮಾಡಿದ್ದೇವೆ, ಏನು ಮಾಡಬಹುದಿತ್ತು, ಇನ್ನಷ್ಟು ಚೆನ್ನಾಗಿ ಕಲಿಯಲು ಏನನ್ನು ಮಾಡಬೇಕು, ಮುಂಬರುವ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಅವರು ತಾವೇ ಯಾವ ಗುರಿಗಳನ್ನು ನಿರ್ಧರಿಸಿಕೊಳ್ಳಬಹುದು ಇತ್ಯಾದಿ ಸ್ಪಷ್ಟ ಚಿತ್ರಣ ಸಿಗುತ್ತದೆ.

## ಸ್ವ-ನಿರ್ವಹಣೆ

ಭಾವನೆಗಳ ನಿರ್ವಹಣೆ ಅಥವಾ ನಿಭಾವಣೆ ಎಂದರೆ ಅವುಗಳನ್ನು ಅದುಮಿಡುವುದಲ್ಲ. ಇದು ಭಾವನಾತ್ಮಕ ಆರೋಗ್ಯವು ಚೆನ್ನಾಗಿರುವುದರ ಸೂಚಕವಾಗಿದೆ. ಎರಡನೇ ತರಗತಿಯ ಬಾಲಕಿಯೊಬ್ಬಳ ನೀರಿನ ಬಾಟಲಿಯು ತರಗತಿ ಕೋಣೆಯಲ್ಲಿಯೇ ಕಳೆದುಹೋಯಿತು. ಅವಳು ಜೋರಾಗಿ ಅಳುತ್ತಿದ್ದಳು. ತಾನು ಕಲಿತಿದ್ದ ನಡವಳಿಕೆಯಂತೆ ತನ್ನ ಭಾವನೆಯನ್ನು ವ್ಯಕ್ತಪಡಿಸುವ ರೀತಿ ಅವಳದಾಗಿತ್ತು. ಈಗ, ಶಿಕ್ಷಕರು ಈ ಸನ್ನಿವೇಶವನ್ನು ನಿಭಾಯಿಸಬೇಕಿತ್ತು. ಇಂತಹ ಸನ್ನಿವೇಶಗಳಲ್ಲಿ ಶಿಕ್ಷಕರು ವಿದ್ಯಾರ್ಥಿಗಳಿಗೆ ತಮ್ಮ ಭಾವನೆಗಳನ್ನು ನಿಯಂತ್ರಿಸಲು ಹಾಗೂ ಸದ್ಯ ಎದುರಿಗಿರುವ ಸಮಸ್ಯೆಗೆ ಪರಿಹಾರವೊಂದನ್ನು ಕಂಡುಕೊಳ್ಳಲು ನೆರವಾಗಬೇಕು. ಈ ಪ್ರಕರಣದಲ್ಲಿ, ಶಿಕ್ಷಕರು ಮೊದಲು ಅವಳಿಗೆ ಅಳುವುದನ್ನು ನಿಲ್ಲಿಸಲು ನೆರವಾದರು. ನಂತರ, ಅವರು ಬಾಟಲಿಯನ್ನು ಹುಡುಕಲು ಆರಂಭಿಸಿದರು. ಹುಡುಕಾಟದ ನಂತರ ನೀರಿನ ಬಾಟಲಿಯು ಅವರಿಗೆ ಸಿಕ್ಕಿತು. ಹೀಗೆ ಮಾಡುವ ಮೂಲಕ ಶಿಕ್ಷಕರು ಆ ಮಗುವಿಗೆ ಮತ್ತು ತರಗತಿಯ ಉಳಿದೆಲ್ಲ ಮಕ್ಕಳಿಗೆ, ಸಮಸ್ಯೆ ಎದುರಾದಾಗ, ಅಳುವುದರ ಬದಲಾಗಿ ಆ ಸಮಸ್ಯೆಗೆ ಪರಿಹಾರವನ್ನು ಹೇಗೆ ಕಂಡುಕೊಳ್ಳಬೇಕು ಎಂಬುದಾಗಿ ಅವರು ಆಲೋಚಿಸಬೇಕು ಎನ್ನುವುದನ್ನು ತೋರಿಸಿಕೊಟ್ಟರು.

## ಹೊಣೆಗಾರಿಕೆಯ ಪ್ರಜ್ಞೆ

ಆರು ಮತ್ತು ಏಳನೇ ತರಗತಿಯ ವಿದ್ಯಾರ್ಥಿಗಳು, ವಿವಿಧ ಚಟುವಟಿಕೆಗಳನ್ನು ನಡೆಸುವಾಗ ಶಿಕ್ಷಕರ ನೆರವಿಲ್ಲದೇ ಪರಸ್ಪರರ ಸಹಯೋಗ ಮತ್ತು ಸಹಕಾರದಲ್ಲಿ ಹೇಗೆ ಕೆಲಸ ಮಾಡಬೇಕೆಂಬುದನ್ನು ಕಲಿತಿದ್ದಾರೆ. ಶಿಕ್ಷಕರ ದಿನವಾದ ಸೆಪ್ಟಂಬರ್ 5ರಂದು, ವಿದ್ಯಾರ್ಥಿಗಳು ಶಿಕ್ಷಕರಿಗಾಗಿ ಸಾಂಸ್ಕೃತಿಕ ಕಾರ್ಯಕ್ರಮವೊಂದನ್ನು ಆಯೋಜಿಸಿದರು. ತಾವು ಯೋಜಿಸಿದಂತೆ ಎಲ್ಲ ಕಾರ್ಯಕ್ರಮಗಳನ್ನು ನಡೆಸಲು ಬೇಕಾದಷ್ಟು ಸಮಯ ಉಳಿದಿಲ್ಲ ಎಂದು ಮನವರಿಕೆಯಾದಾಗ ಅವರು ಗಾಬರಿಗೊಳ್ಳಲಿಲ್ಲ. ಬದಲಾಗಿ, ಹಲವಾರು ಚಟುವಟಿಕೆಗಳನ್ನು ಚುಟುಕಾಗಿ ಮುಗಿಸುವುದರ ಮೂಲಕ ಸನ್ನಿವೇಶವನ್ನು ಬುದ್ಧಿವಂತಿಕೆಯಿಂದ ನಿಭಾಯಿಸಿದರು ಮತ್ತು ಕಾರ್ಯಕ್ರಮವನ್ನು ಯೋಜಿತ ರೀತಿಯಲ್ಲಿ ಮಾಡಿ ಮುಗಿಸಿದರು.

ಇದು, ಅಭ್ಯಾಸ ಹಾಗೂ ಭಾಗವಹಿಸುವಿಕೆಯ ಮೂಲಕ ಕಾಲಾನಂತರದಲ್ಲಿ ಅವರು ಬೆಳೆಸಿಕೊಂಡ ಪ್ರಬುದ್ಧತೆ ಮತ್ತು ಶಾಂತತೆಯನ್ನು ತೋರಿಸುತ್ತಿತ್ತು.

ವಿದ್ಯಾರ್ಥಿಗಳದೇ ಮುಂದಾಳತ್ವವಿರುವ ಸಮಿತಿಗಳಲ್ಲಿ ಸಭೆ, ಚರ್ಚೆಗಳು ನಡೆಯುತ್ತವೆ, ಅಲ್ಲಿ ವಿದ್ಯಾರ್ಥಿಗಳು ತಮ್ಮ ಆಲೋಚನೆ, ಅಭಿಪ್ರಾಯ ಮತ್ತು ವಿಚಾರಗಳನ್ನು ವ್ಯಕ್ತಪಡಿಸುತ್ತಾರೆ. ಈ ಸಮಿತಿಗಳು ವಿದ್ಯಾರ್ಥಿಗಳಲ್ಲಿ ತಾವು ಒಬ್ಬರಿಗೊಬ್ಬರು ಸೇರಿದವರು, ಸಂಬಂಧಿಸಿದವರು, ಒಟ್ಟಾಗಿ ಕೆಲಸದಲ್ಲಿ ತೊಡಗಿಕೊಳ್ಳಬೇಕಾದವರು ಎಂಬ ಪ್ರಜ್ಞೆಯನ್ನು ಉಂಟುಮಾಡುವುದರ ಜೊತೆಗೆ ಹೊಣೆಗಾರಿಕೆಯ ಭಾವವನ್ನು ಕೂಡ ಪೋಷಿಸುತ್ತವೆ. ಇದು, ಧನಾತ್ಮಕ ಶಾಲಾ ಸಂಸ್ಕೃತಿಯನ್ನು ಬೆಳೆಸಲು ವಿಶೇಷವಾಗಿ ಮುಖ್ಯ. ಆಗ ವಿದ್ಯಾರ್ಥಿಗಳಿಗೆ ತಮಗೂ ಒಂದು ಬೆಲೆಯಿದೆ, ಗೌರವವಿದೆ ಎಂದೆನಿಸುತ್ತದೆ.

## ಜವಾಬ್ದಾರಿಯುತವಾಗಿ ನಿರ್ಧಾರವನ್ನು ತೆಗೆದುಕೊಳ್ಳುವುದು

ಶಾಲೆಯಲ್ಲಿ ಹಲವಾರು ಸಮಿತಿಗಳು ಮತ್ತು ಗುಂಪುಗಳಿವೆ. ಇವುಗಳನ್ನು ಸ್ಪಂದನಶೀಲವಾಗಿರುವಂತೆ ಹಾಗೂ ಕ್ರಿಯಾ-ಶೀಲವಾಗಿರುವಂತೆ ಮಾಡುವ ನಿಟ್ಟಿನಲ್ಲಿ ಸಲಹೆಗಳನ್ನು ನೀಡಲು ವಿದ್ಯಾರ್ಥಿಗಳನ್ನು ಉತ್ತೇಜಿಸಲಾಗುತ್ತದೆ. ಬುನಾದಿ ಸಾಕ್ಷರತೆ ಮತ್ತು ಸಂಖ್ಯಾಜ್ಞಾನ (FLN - Foundational Literacy and Numeracy) ಗುಂಪಿನಲ್ಲಿ ಇದ್ದ ಅರವಿಂದ ಎಂಬ ಹುಡುಗ ಗಣಿತದಲ್ಲಿ ಚೆನ್ನಾಗಿದ್ದ. ಆದರೆ ಇಂಗ್ಲಿಷ್ ನಲ್ಲಿ ಅಷ್ಟೇನೂ ಚೆನ್ನಾಗಿರಲಿಲ್ಲ. ಅವನು ಇಂಗ್ಲಿಷ್ನಲ್ಲಿ ಕಡಿಮೆ ಅಂಕವನ್ನು ತೆಗೆದುಕೊಂಡಾಗ, ಅವನ ಇಂಗ್ಲಿಷ್ ಶಿಕ್ಷಕರು ಉತ್ತರಪತ್ರಿಕೆಯ ಮೇಲೆ ತರಗತಿ ಶಿಕ್ಷಕರ ಸಹಿಯನ್ನು ಹಾಕಿಸಿಕೊಂಡು ಬರುವಂತೆ ಹೇಳಿದರು. ತರಗತಿ ಶಿಕ್ಷಕರು ಇಂಗ್ಲಿಷ್ನಲ್ಲಿ ಕೂಡ ಹೇಗೆ ಚೆನ್ನಾಗಿ ಮಾಡಬಹುದೆಂದು ಅವನೊಂದಿಗೆ ಚರ್ಚಿಸಿದರು. ಮಕ್ಕಳೊಂದಿಗೆ ಆಪ್ತವಾಗಿ ಮಾತನಾಡುವುದು ಕೂಡ ಅವರಿಗೆ ಯಾವುದೇ ಸಂಗತಿಯನ್ನು ಅರ್ಥಮಾಡಿಕೊಳ್ಳಲು, ಜವಾಬ್ದಾರಿಯುತ ನಿರ್ಧಾರಗಳನ್ನು ತೆಗೆದುಕೊಳ್ಳಲು ಸಹಾಯ ಮಾಡುತ್ತದೆ. ಆ ಹುಡುಗನು ಶಿಕ್ಷಕರ ಮಾತನ್ನು ಸಕಾರಾತ್ಮಕವಾಗಿ ತೆಗೆದುಕೊಂಡಿದ್ದಾನೆ. ಈಗ ಇಂಗ್ಲಿಷ್ ತರಗತಿಯಲ್ಲಿ ಕೂಡ ಚೆನ್ನಾಗಿ ಭಾಗವಹಿಸುತ್ತಿದ್ದಾನೆ.

## ಉಪಸಂಹಾರ

ನಮ್ಮ ಶಾಲೆಯಲ್ಲಿ ನಾವು ಸುರಕ್ಷಿತ ಹಾಗೂ ಭಯಮುಕ್ತ ವಾತಾವರಣವನ್ನು ನಿರ್ಮಿಸುತ್ತೇವೆ. ಇದರಿಂದಾಗಿ ವಿದ್ಯಾರ್ಥಿಗಳು ಮತ್ತು ಶಿಕ್ಷಕರ ನಡುವೆ ಹಾಗೂ ಇತರ ಸಹಾಯಕ ಸಿಬ್ಬಂದಿಗಳ ಜೊತೆಗೆ ಕೂಡ ಪರಸ್ಪರ ಹಿತಕರವಾದ ರೀತಿಯಲ್ಲಿ ಅನುಸಂಧಾನ ನಡೆಯಲು ಸಾಧ್ಯವಾಗುತ್ತದೆ. ನಾವು ಒಟ್ಟಾಗಿ ಆಟವಾಡುತ್ತೇವೆ, ನಮ್ಮ ಸಂತೋಷ, ದುಃಖಗಳನ್ನು ಹಂಚಿಕೊಳ್ಳುತ್ತೇವೆ, ನಮ್ಮ ಭಾವನೆಗಳನ್ನು ವ್ಯಕ್ತಪಡಿಸುತ್ತೇವೆ ಹಾಗೂ ಒಬ್ಬರನ್ನೊಬ್ಬರು ಬೆಂಬಲಿಸುತ್ತೇವೆ.

ಮಕ್ಕಳಿಗೆ ಸಾಮಾಜಿಕ-ಭಾವನಾತ್ಮಕ ಕಲಿಕೆಯು ಕೇವಲ ಸಫಲ ಹಾಗೂ ಸಂತೃಪ್ತ ಜೀವನವನ್ನು ನಡೆಸಲು ಮಾತ್ರವಲ್ಲ ಅವರ ಶೈಕ್ಷಣಿಕ ಯಶಸ್ಸಿಗೂ ಅದು ಅತ್ಯಂತ ನಿರ್ಣಾಯಕ ಎನ್ನುವುದನ್ನು ಪ್ರಮುಖವಾಗಿ ಗಮನಿಸಬೇಕು. ಸಕಾರಾತ್ಮಕ ಹಾಗೂ ಬೆಂಬಲಪೂರಕ ಕಲಿಕೆಯ ವಾತಾವರಣವನ್ನು ಪೋಷಿಸುವುದರ ಮೂಲಕ ಹಾಗೂ ಅಗತ್ಯವಾದ ಸಂಪನ್ಮೂಲಗಳನ್ನು, ಬೆಂಬಲವನ್ನು ಒದಗಿಸುವುದರ ಮೂಲಕ ವಿದ್ಯಾರ್ಥಿಗಳು ಬದುಕಿನಲ್ಲಿ ಯಶಸ್ಸು ಪಡೆಯುವಂತಾಗಲು ಬೇಕಾದ ಸಾಮಾಜಿಕ-ಭಾವನಾತ್ಮಕ ಕೌಶಲಗಳನ್ನು ಪಡೆದು-ಕೊಳ್ಳುವ ಹಾಗೆ ನಮ್ಮ ಶಾಲೆಯು ಸತತವಾಗಿ ಪ್ರಯತ್ನಿಸುತ್ತಿದೆ.

* ವಿದ್ಯಾರ್ಥಿಗಳ ಗುರುತನ್ನು ರಕ್ಷಿಸಲು ಅವರ ಹೆಸರುಗಳನ್ನು ಬದಲಾಯಿಸಲಾಗಿದೆ.

**ಅಂತಿಮ ಟಿಪ್ಪಣಿ :**


i Housing Children: South Auckland, The Housing Pathways Longitudinal Study - Scientific Figure on ResearchGate. https://www.researchgate.net/figure/Bronfenbrenners-ecological-model-Diagram-by-Joel-Gibbs-based-on-Bronfenbrenners-1979_fig1_311843438





**ಫರ್ಝಾನಾ ಬೇಗಂ** ಅವರು ಕರ್ನಾಟಕದ ಕಲಬುರಗಿಯ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕಿಯಾಗಿದ್ದಾರೆ. ಅಜೀಂ ಪ್ರೇಮ್‌ಜಿ ಶಾಲೆಯನ್ನು ಸೇರುವುದಕ್ಕೂ ಮೊದಲು ಅವರು ಕಲಬುರಗಿಯ ಕೇಂದ್ರೀಯ ವಿದ್ಯಾಲಯದಲ್ಲಿ ಕೆಲಸ ಮಾಡುತ್ತಿದ್ದರು. ಅವರಿಗೆ ಪ್ರಾಥಮಿಕ ತರಗತಿಗಳಿಗೆ ಪರಿಸರ ವಿಜ್ಞಾನ, ಇಂಗ್ಲಿಷ್ ಮತ್ತು ಗಣಿತವನ್ನು ಬೋಧಿಸಿದ ಅನುಭವವಿದೆ. ಅವರು ವಿಜಯಪುರದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯದಿಂದ ವಿಜ್ಞಾನ ವಿಷಯದಲ್ಲಿ (PCM) ಪದವಿ ಪಡೆದಿದ್ದಾರೆ. ಅವರಿಗೆ ಪುಸ್ತಕಗಳನ್ನು ಓದುವುದರಲ್ಲಿ ಮತ್ತು ಹೊರಾಂಗಣ ಆಟಗಳನ್ನು ಆಡುವುದರಲ್ಲಿ ಆಸಕ್ತಿಯಿದೆ. ಅವರನ್ನು farzana.begum@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** | ಪರಿಶೀಲನೆ: **ಲತಾ ಕೆ.ಸಿ.**

# ನೆಮ್ಮದಿಯಿರುವ ಮಕ್ಕಳು ಚೆನ್ನಾಗಿ ಕಲಿಯುತ್ತಾರೆ

ಲಲಿತಾ ಯದುವಂಶಿ

ವಿಶ್ವಾಸವನ್ನು ಅವಲಂಬಿಸಿದ ಅನುಭವವೊಂದು ಹಲವು ಸಂಬಂಧಗಳನ್ನು ಗಟ್ಟಿಗೊಳಿಸಿತಲ್ಲದೆ, ಮಕ್ಕಳು ತಮ್ಮ ವರ್ತನೆಗಳನ್ನು ಬದಲಿಸಿಕೊಳ್ಳಬೇಕೆನ್ನುವ ನಮ್ಮ ನಿರೀಕ್ಷೆಗಳನ್ನು ಕುರಿತು ಚಿಂತನೆಯಲ್ಲಿ ತೊಡಗಲು ಅವಕಾಶ ಕಲ್ಪಿಸಿಕೊಟ್ಟಿತು. ಇದರಿಂದ ಶಾಲೆ ಎಂಬುದು ಹೇಗೆ ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಬ್ಬರನ್ನೂ ಬೆಂಬಲಿಸುವ ಕಲಿಕಾ- ವಾತಾವರಣವನ್ನು ನಮಗೆ ದೊರಕಿಸಿಕೊಡುತ್ತದೆ ಎಂಬುದನ್ನು ಅರಿಯು-ವಂತಾಯಿತು. ಶಾಲಾ-ವಾತಾವರಣದಲ್ಲಿ ಸುರಕ್ಷಿತ ಭಾವವನ್ನು ಅನುಭವಿಸುತ್ತಿರುವಂತೆಯೇ ಪ್ರತಿನಿತ್ಯವೂ ಬೆಳೆಯಲು, ಉತ್ತಮತರ ಜೀವನ ಮೌಲ್ಯಗಳನ್ನು ಹೀರಿಕೊಳ್ಳಲು ಅವಕಾಶಗಳು ಎದುರಾಗುತ್ತಲೇ ಇರುತ್ತವೆ. ಇವು ಚಿಂತನೆಗೆ ಪೂರಕವಾದ ಬುನಾದಿಯನ್ನು ಕಲ್ಪಿಸಿಕೊಟ್ಟು, ಅರ್ಥಪೂರ್ಣ ಬದುಕನ್ನು ಕಟ್ಟಿಕೊಳ್ಳಲು ನೆರವಾಗುತ್ತವೆ. ನಾನು ಇಲ್ಲಿ ಎರಡನೇ ತರಗತಿಯ ವಿದ್ಯಾರ್ಥಿಯೊಂದಿಗಿನ ನನ್ನ ಅನುಭವವನ್ನು ಹಂಚಿಕೊಳ್ಳಲು ಬಯಸುತ್ತೇನೆ. ಕೋವಿಡ್ ಮಹಾಮಾರಿಯ ಅಲೆಗಳು ತಗ್ಗಿದ ಬಳಿಕ, ಅಂದರೆ, ಕಳೆದ ವರ್ಷದ ಸೆಪ್ಟೆಂಬರ್ ತಿಂಗಳಿಂದ, ಅವಳು ಶಾಲೆಗೆ ಬರಲು ಕಲಿಯುತ್ತಿರುವಲ್ಲಿಂದ ನಮ್ಮ ಕಥೆ ಮೊದಲಾಗುತ್ತದೆ. ಅವಳು ಶೈಕ್ಷಣಿಕ ವರ್ಷದ ಬಹುತೇಕ ಅವಧಿ ಶಾಲೆಗೆ ಗೈರುಹಾಜರಾಗಿದ್ದುದು ಶಿಕ್ಷಕರಾದ ನಮ್ಮೆಲ್ಲರಿಗೂ ಆತಂಕದ ಸಂಗತಿಯಾಗಿತ್ತು. ಏಕೆಂದರೆ, ಶಾಲೆಗೆ ಬರದೆ, ಕ್ರಮಬದ್ಧ ಕಲಿಕೆ ನಡೆಯದೆ, ಅವಳು ಹಿಂದೆ ಉಳಿದುಬಿಡುತ್ತಾಳೆ ಎಂಬುದು ನಮ್ಮ ಆತಂಕಕ್ಕೆ ಕಾರಣವಾಗಿತ್ತು. ಅವಳ ತರಗತಿಯ ಶಿಕ್ಷಕಿ ಹಾಗೂ ಇತರ ಶಿಕ್ಷಕರು ಮೇಲಿಂದ ಮೇಲೆ ಅವಳೊಂದಿಗೆ ಮಾತನಾಡಿ, ಕ್ರಮಬದ್ಧವಾಗಿ ಶಾಲೆಗೆ ಹಾಜರಾಗುವ ಮಹತ್ವವನ್ನು ಅವಳಿಗೆ ಮನದಟ್ಟು ಮಾಡಿಕೊಡಲು ನಡೆಸಿದ ಪ್ರಯತ್ನ ವಿಫಲವಾಗಿತ್ತು. ಕಳೆದ ಶೈಕ್ಷಣಿಕ ವರ್ಷದ ಜೂನ್ ತಿಂಗಳಲ್ಲಿ ಅವಳು ಎರಡನೇ ತರಗತಿಗೆ ಪಾದಾರ್ಪಣೆ ಮಾಡಿದ್ದಳು. ನಾನು ಅವಳ ಕೈ ಹಿಡಿದು, ದಿನವೂ ತಪ್ಪದೆ ಶಾಲೆಗೆ ಬರುವ ವಾಗ್ದಾನವನ್ನು ಅವಳಿಂದ ಪಡೆದೆ. ಮುಖದ ಮೇಲೆ ಸದಾ ನಲಿಯುತ್ತಿದ್ದ ಮುಗ್ಧ ಮುಗುಳ್ನಗೆ ಬೀರುತ್ತಾ ಅವಳು ಇದಕ್ಕೆ ಒಪ್ಪಿದ್ದಳು. ಬಾಚದ ತಲೆಕೂದಲು, ಒಗೆಯದ ಸಮವಸ್ತ್ರ, ಶಾಲೆಗೆ ತರದ ಪಠ್ಯಸಾಮಗ್ರಿ – ಇವಳನ್ನು ಸರಿಪಡಿಸುವ ಕೆಲಸ ಎಲ್ಲಿಂದ ಆರಂಭಿಸಬೇಕು ಎಂಬುದು ನನಗೆ ತಿಳಿಯದಾಗಿತ್ತು. ಒಳ್ಳೆಯ ಅಭ್ಯಾಸಗಳನ್ನು ರೂಡಿಸಿಕೊಳ್ಳದೆ, ಶಾಲೆಯ ಅಧ್ಯಯನದ ಗತಿಗೆ ತಕ್ಕಂತೆ ಹೆಜ್ಜೆಹಾಕದಿದ್ದರೆ ಅವಳಿಗೆಷ್ಟು ನಷ್ಟವಾಗುತ್ತದೆ ಎಂದು ಅವಳಿಗೆ ತಿಳಿಹೇಳುವುದು ಹೇಗೆ ಎಂಬುದೇ ನನಗೆ ತಿಳಿಯದಾಗಿತ್ತು. ನಾನು ಅವಳ ತಂದೆಯೊಂದಿಗೆ ಸಹ ಮಾತನಾಡಿ ನೋಡಿದೆ. ಶಾಲಾ ಪ್ರಾರ್ಥನಾ ಸಭೆಯಲ್ಲಿ ಕಥೆಹೇಳುವ ಚಟುವಟಿಕೆಯನ್ನು ವಿನೂತನವಾಗಿ ಈ ವರ್ಷದಿಂದ ನಡೆಸಲಾಗುತ್ತಿತ್ತು. ಬೊಂಬೆಗಳ ಸಹಾಯ ಪಡೆದು ಕಥೆಗಳನ್ನು ಹೇಳಲಾಗುತ್ತಿತ್ತು. ತರಗತಿಯಲ್ಲಿ ಮಕ್ಕಳಿಗೆ "ಗೊಂಬೆಮೂಲೆ"ಯೊಂದನ್ನು (puppet corner) ಸಹ ಕಲ್ಪಿಸಿಕೊಡಲಾಗಿತ್ತು. ಗೊಂಬೆ ಆಟ ಆರಂಭಗೊಂಡ ತರುವಾಯ ಅವಳು ಶಾಲೆಗೆ ಹೆಚ್ಚು-ಹೆಚ್ಚಾಗಿ ಹಾಜರಾಗುತ್ತಿರು-ವುದನ್ನು ನಾನು ಗಮನಿಸಿದೆ. ಕೆಲವೊಮ್ಮೆ ಅವಳು ಹಕ್ಕಿಗಳೊಡನೆ ಆಡುತ್ತಿದ್ದರೆ, ಮತ್ತೆ ಕೆಲವೊಮ್ಮೆ ತರಗತಿಯಲ್ಲಿ ವಸ್ತುಗಳನ್ನು ಒಪ್ಪಮಾಡುವುದರಲ್ಲಿ ತೊಡಗಿರುವುದನ್ನು ಕಾಣಬಹುದಿತ್ತು. ಕೆಲವೊಮ್ಮೆ, ಗೊಂಬೆಗಳನ್ನು ಸರಿಯಾಗಿ ನೋಡಿಕೊಳ್ಳದ ಇತರ ವಿದ್ಯಾರ್ಥಿಗಳ ಬಗ್ಗೆ ಅವಳು ದೂರುತ್ತಿದ್ದಳು. ಅನತಿ ಕಾಲದಲ್ಲಿ ಅವಳು ಪ್ರತಿದಿನವೂ ಶಾಲೆಗೆ ಬರುವುದನ್ನು ರೂಢಿಸಿಕೊಂಡಳು. ಈಗ, ಓದಿ-ಬರೆದು ಮಾಡುವಂತೆ ಅವಳ ಮನವೊಲಿಸುವು-ದಾದರೂ ಹೇಗೆ ಎಂಬ ಪ್ರಶ್ನೆ ನಮ್ಮಲ್ಲಿ ಮೂಡಿತು. ನಮ್ಮಲ್ಲಿ ಇದಕ್ಕೆ ಯಾವುದೇ ಸಿದ್ಧವಾದ ಉತ್ತರಗಳಿರಲಿಲ್ಲ. ಆದರೆ ಏನನ್ನಾದರೂ ಮಾಡಿ ತೀರಬೇಕಿತ್ತು. ಮಕ್ಕಳನ್ನು ಪ್ರೇರೇಪಿಸಿಲು, ಓದುವುದು ಮತ್ತು ಬರೆಯುವುದರ ಜೊತೆಗೆ, ನಾವು ಅನೌಪಚಾರಿಕ ಸಂವಹನಕ್ಕಾಗಿ ಎರಡು ತಂಡಗಳನ್ನು ರಚಿಸಿಕೊಂಡೆವು. ಇದರಿಂದ ನಾವು ಅವರನ್ನು ಚೆನ್ನಾಗಿ ಅರಿಯುವಂತಾಗಿ, ಕಾಲ ಕಳೆದಂತೆ, ಅವರ ಕಲಿಕೆಯ ಪ್ರಯತ್ನದಲ್ಲಿ ಗುಣಾತ್ಮಕ ಬದಲಾವಣೆಗಳನ್ನು ನೋಡುವುದು ಸಾಧ್ಯವಾಗುತ್ತದೆ ಎಂದು ಬಗೆದೆವು. ಆ ಸಮಯದಲ್ಲಿ ಅವಳು ಸರಳ ಕಥೆ ಹಾಗೂ ಪದ್ಯವೊಂದನ್ನು ಓದಲು ಕಲಿತಳು. ದಿನನಿತ್ಯವೂ ಮನೆಗೆಲಸ ಮಾಡಿಕೊಂಡು ಬರುವುದನ್ನು ರೂಢಿಸಿಕೊಂಡಳು. ಮನೆಗೆಲಸಕ್ಕಾಗಿ ನಾವು ಕೊಡುವ ಅಭ್ಯಾಸಗಳನ್ನು ಇಷ್ಟಪಡತೊಡಗಿದಳು. ಅತಿ ಮಹತ್ವದ ವಿಷಯವೆಂದರೆ, ನಮ್ಮಿಬ್ಬರ ಮುಂದುವರಿದ ಒಡನಾಟದಿಂದ ನಮ್ಮ ನಡುವೆ ಆತ್ಮೀಯ ಸಂಬಂಧವೊಂದು ಮೊಳೆಯಿತು.

ಕೊಂಚ ಕಾಲದ ಬಳಿಕ ಅವಳು ಉಳಿದೆಲ್ಲಾ ಮಕ್ಕಳೊಡನೆ ಕಲಿಯಲು ತೊಡಗಿದಳು. ಮೊದಲಿಗೆ ಅವಳ ಓದುವಿಕೆ ನಿಧಾನಗತಿಯಲ್ಲಿ ಸಾಗಿತ್ತು. ಮುಂದೊಂದು ದಿನ, ಸ್ಮೈಲಿ ಹೂವಿನ ಪ್ರಸಂಗವೊಂದು ಮಕ್ಕಳ ನಡುವೆ ಗಡಿಬಿಡಿಗೆ ಕಾರಣವಾಯಿತು. ಸರ್ವಾಂಗೀಣ ಅಭಿವೃದ್ಧಿಗಾಗಿ 'ಉತ್ತಮ ಪ್ರಯತ್ನ'ದಲ್ಲಿ ತೊಡಗುವ ಮಕ್ಕಳಿಗೆ ಸ್ಮೈಲಿ ಹೂವಿನ ಚಿತ್ರವನ್ನು ನೀಡಲಾಗುತ್ತಿತ್ತು. ಅವರ 'ಉತ್ತಮ ಪ್ರಯತ್ನ'ಗಳನ್ನು ಒಂದೆರಡು ವಾಕ್ಯಗಳಲ್ಲಿ ಬಣ್ಣಿಸಿ, ಸ್ಮೈಲಿ ಹೂವಿನ ಚಿತ್ರವನ್ನು ಅವರಿಗೆ ಇಡೀ ತರಗತಿಯ ಎದುರು ನೀಡಲಾಗುತ್ತಿತ್ತು. "ನನಗೂ ಹೂ ಸಿಗುತ್ತದೆಯೆ?" ಎಂದೊಮ್ಮೆ ಅವಳು ನನ್ನನ್ನು ಕೇಳಿದಾಗ, "ಹೌದು, ಯಾರು ಬೇಕಾದರೂ ಪಡೆಯಬಹುದು. ಒಂದಲ್ಲ

ಒಂದು ವಿಷಯದಲ್ಲಿ ಪ್ರತಿಯೊಬ್ಬರೂ ಉತ್ತಮ ಸಾಧನೆ ಮಾಡಬಹುದು. ನೀನು ಸಹ ಮಾಡಬಹುದು" ಎಂದೆ. ಅಂದಿನಿಂದ ಅವಳ ಪ್ರಯತ್ನದಲ್ಲಿ ಸುಧಾರಣೆ ಕಂಡುಬಂದಿತು. ಇಷ್ಟೆಲ್ಲ ಆಗುತ್ತಿರುವಂತೆಯೇ ಮತ್ತೊಂದು ಪ್ರಸಂಗ ನಡೆಯಿತು. ಇದುವರೆಗೂ ಅವಳು ತಲೆಬಾಚಿಕೊಂಡು ಬಂದದ್ದು ವಿರಳವೆನ್ನಬಹುದಿತ್ತು. ನಾನು ಅವಳಿಗೆ, "ನೀನು ಪ್ರತಿನಿತ್ಯ ಶಾಲೆಗೆ ಬರುವ ಮೊದಲು ಅಂದವಾಗಿ ತಲೆಬಾಚಿಕೊಂಡು ಬರಬೇಕು" ಎಂದೆ. ಅದಕ್ಕವಳು, "ನನ್ನ ಅಮ್ಮ ತಲೆಬಾಚುವುದಿಲ್ಲ" ಎಂದಳು. "ಸರಿ, ನಾನು ಅಮ್ಮನೊಂದಿಗೆ ಮಾತನಾಡುತ್ತೇನೆ" ಎಂದು ಹೇಳಿದೆ. ಅಂದು ನಾನು ಹಿರಿಯ ವಿದ್ಯಾರ್ಥಿನಿ-ಯೊಬ್ಬಳಿಂದ ಬಾಚಣಿಗೆಯನ್ನು ಕೇಳಿ ಪಡೆದು, ಅವಳ ತಲೆಯನ್ನು ಬಾಚಿ, ಪೋನಿ ಟೇಲ್ ಕೇಶವಿನ್ಯಾಸ ಮಾಡಿದೆ. "ಮನೆಗೆ ಹೋಗಿ ನಿನ್ನ ಅಮ್ಮನಿಗೆ ಇದನ್ನು ತೋರಿಸಿ, ದಿನವೂ ಇದೇ ರೀತಿ ತಲೆಬಾಚಿ ಕಳಿಸುವಂತೆ ಹೇಳು" ಎಂದು ನಾನು ಅವಳಿಗೆ ತಿಳಿಸಿದೆ. ಅಂದಿನ ದಿನ ಶಾಲೆಯಲ್ಲಿ ಅವಳು ತನ್ನ ಪೋನಿ ಟೇಲ್‌ಅನ್ನು ತಿರುಗಿಸುತ್ತ, ಕನ್ನಡಿಯಲ್ಲಿ ಪದೇಪದೇ ಮುಖ ನೋಡಿಕೊಳ್ಳುತ್ತಾ ಕಳೆದಳು. ಅವಳ ತಲೆಯಲ್ಲಿ ಏನು ಯೋಚಿಸುತ್ತಿದ್ದಳೋ ನನಗೆ ತಿಳಿಯದು, ಆದರೆ, ಅವಳ ಮುಖದ ಮೇಲೆ ಮುಗುಳ್ನಗೆ ಆಡುತ್ತಿದ್ದುದಂತೂ ನಿಜ. ಮರುದಿನ ಶಾಲೆಗೆ ಬಂದಾಗ ಅವಳು ಬದಲಾದ ವ್ಯಕ್ತಿಯಾಗಿದ್ದಳು! ಮುನ್ನಡೆಯುವ ಹಾಗೂ ನಲಿವಿನಿಂದ ಕಲಿಯುವ ಭರವಸೆಯೊಂದನ್ನು ಅವಳು ತನ್ನೊಂದಿಗೆ ಹೊತ್ತುತಂದಂತೆ ತೋರಿತು. ಈಗ ಪ್ರತಿದಿನ ಊಟದ ಬಳಿಕ ನಾನಿರುವಲ್ಲಿಗೆ ಬಂದು ಹಲವು ವಿಚಾರಗಳನ್ನು ನನ್ನೊಂದಿಗೆ ಹರಟುತ್ತಾಳೆ, ಓದುತ್ತಾಳೆ ಹಾಗೂ ಒಂದೆರಡು ಕಥೆಗಳನ್ನು ಹೇಳುತ್ತಾಳೆ ಕೂಡ. ಅವಳು ತನ್ನ ಕಲಿಕೆಯ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದ್ದಾಳೆ. ಬಿಡುವಿನ ಸಮಯದಲ್ಲಿ ಅವಳು ಇಂಗ್ಲಿಷ್ ಕೋಣೆಗೆ ಹೋಗಿ ಅಲ್ಲಿ ಏನನ್ನಾದರೂ ಓದಲು ಪ್ರಯತ್ನಿಸುತ್ತಿರುತ್ತಾಳೆ. ಉಳಿದ ಮಕ್ಕಳು ಅವಳ ಬಗ್ಗೆ ಆಡಿಕೊಳ್ಳುವುದನ್ನು ಕೈಬಿಟ್ಟಿದ್ದಾರೆ; ಅವರೆಲ್ಲ ತಂಡದಲ್ಲಿ ಕಾರ್ಯನಿರತರಾದಾಗ ಮನಃಪೂರ್ವಕವಾಗಿ ಒಬ್ಬರಿಗೊಬ್ಬರು ಭಾವನಾತ್ಮಕ ಬೆಂಬಲವೀಯುತ್ತಾರೆ. ನನ್ನ ಪಾಲಿಗೆ ಇದೊಂದು ಅನುಭವ ಮಾತ್ರವೇ ಆಗಿರಲಿಲ್ಲ; ಕಲಿಕೆಗೆ ಒಂದು ಅವಕಾಶವಾಗಿ ಮಾರ್ಪಟ್ಟಿತ್ತು. ಶಾಲಾ-ವಾತಾವರಣದಲ್ಲಿ ಯೋಗಕ್ಷೇಮದ ಮುಖಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವಾಗ ಉತ್ತಮ ಸ್ವಾಸ್ಥ್ಯ ಮತ್ತು ಸಂತಸಗಳ ಅನುಭವ ಮಹತ್ವದ್ದಾಗುತ್ತದೆ. ಸ್ವಾಸ್ಥ್ಯವೆಂಬುದು ಮಾನಸಿಕ ಹಾಗೂ ಭೌತಿಕ ಆರೋಗ್ಯ, ಭೌತಿಕ ಹಾಗೂ ಭಾವನಾತ್ಮಕ ಸುರಕ್ಷೆ ಮತ್ತು ತಾನು ಶಾಲೆಯ ಅಂಗ ಎಂಬ ಭಾವನೆ, ಉದ್ದೇಶಪೂರ್ಣತೆ, ಸಾಧನೆ ಹಾಗೂ ಸಾಫಲ್ಯದ ಸಂವೇದನೆಯನ್ನು ಒಳಗೊಂಡಿರುತ್ತದೆ. ಇದರಿಂದ ನಾವು ಮುಂದೆ ಸಾಗಲು ಪ್ರೇರಣೆ ದೊರಕಿ, ಪರಸ್ಪರ ಸಂಬಂಧಗಳನ್ನು ಬೆಸೆಯುವಲ್ಲಿ ನೆರವಾಗುತ್ತದೆ. ಇದರಿಂದ ಕೆಲಸದಲ್ಲಿ ಹಿತಕರವಾದ ವಾತಾವರಣ ಏರ್ಪಡುತ್ತದೆ. ಈ ಕಾರಣಕ್ಕಾಗಿ, ಪ್ರಧಾನ ವಿಷಯಗಳನ್ನು ಕುರಿತಂತೆ ಶಾಲಾ ತಂಡದೊಂದಿಗೆ ನಡೆಸುವ ಔಪಚಾರಿಕ ಹಾಗೂ ಅನೌಪಚಾರಿಕ ಸಂವಹನ ಅತಿ ಮುಖ್ಯವಾಗುತ್ತದೆ. ಶಾಲೆಯ ಒಳಗೆ ಮತ್ತು ಹೊರಗೆ ಮಕ್ಕಳು ಪ್ರಜಾಸತ್ತಾತ್ಮಕ ಸಂಸ್ಕೃತಿಯೊಂದರಲ್ಲಿ ತಮ್ಮ ಸಾಮರ್ಥ್ಯಗಳನ್ನು ಬಳಸಲು ಇರುವ ಯೋಗ್ಯತೆಯನ್ನು ಅವರ ಯಶಸ್ಸು ಅವಲಂಬಿಸಿರುತ್ತದೆ. ಹೀಗಾಗಿ, ಶೈಕ್ಷಣಿಕ ಸಾಧನೆ, ವರ್ತನೆ ಹಾಗೂ ಶಾಲಾ- ವಾತಾವರಣದಲ್ಲಿ ಮಕ್ಕಳ ಸಾಮಾಜಿಕ ಹೊಂದಾಣಿಕೆಗಳಲ್ಲಿ ಸುಧಾರಣೆ ತರುವ ಪ್ರಯತ್ನಗಳು ನಡೆಯಬೇಕು. ಜೊತೆಗೆ, ಶಿಕ್ಷಕರು ಮತ್ತು ಶಾಲಾ ಸಿಬ್ಬಂದಿ ಇವನ್ನೂ ಸಹ ಮಾಡಬೇಕಿದೆ:

- ಮಕ್ಕಳೊಡನೆ ಮಾತುಕತೆ ನಡೆಸುವುದು
- ಪರಿಕಲ್ಪನೆಗಳನ್ನು ಬೋಧಿಸುವ ಪರಿಣಾಮಕಾರಿ ಹಾಗೂ ಹೊಸತನ ತರುವ ವಿಧಾನಗಳ ಬಗ್ಗೆ ಅರಿತಿರುವುದು
- ವಿದ್ಯಾರ್ಥಿಗಳು ಸವಾಲುಗಳನ್ನು ಎದುರಿಸಲು ಹಾಗೂ ಬೇಸರವನ್ನು ನೀಗಲು ಅಗತ್ಯವಿರುವ ಅವರ ಮಾನಸಿಕ ಹಾಗೂ ಭೌತಿಕ ಸಾಮರ್ಥ್ಯಗಳ ಸುಧಾರಣೆಯಲ್ಲಿ ನೆರವಾಗುವುದು
- ವಿದ್ಯಾರ್ಥಿಗಳಿಗೆ ಭಾವನಾತ್ಮಕ ಬೆಂಬಲ ನೀಡುವುದು
- ಭೌತಿಕ ಸಾಮರ್ಥ್ಯಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಸೂಕ್ತ ತೀರ್ಮಾನಗಳನ್ನು ಕೈಗೊಳ್ಳುವುದು
- ವಿದ್ಯಾರ್ಥಿಗಳು ಸಂವಹನ ಸಾಮರ್ಥ್ಯವನ್ನು ಬೆಳೆಸಿಕೊಳ್ಳಲು ನೆರವಾಗುವುದು
- ಅರ್ಥಪೂರ್ಣವೂ, ವಿಶ್ವಾಸಾರ್ಹವೂ ಆದ ಸಂಬಂಧಗಳನ್ನು ಕಟ್ಟಿಕೊಳ್ಳುವಂತೆ ವಿದ್ಯಾರ್ಥಿಗಳಿಗೆ ನೆರವಾಗುವುದು
- ಶಾಲಾ ಪ್ರಕ್ರಿಯೆಗಳಲ್ಲಿ ಕೊಂಚ ನಮ್ಯತೆಯನ್ನು ತರುವುದು
- ಜೊತೆಗೂಡಿ ಮಾಡುವ ಕೆಲಸಕ್ಕೆ ಅವಕಾಶಗಳನ್ನು ಕಲ್ಪಿಸಿಕೊಡುವುದು

ಶಿಕ್ಷಕರು ಪ್ರೇರೇಪಿತರು, ಕೌಶಲಪೂರ್ಣರು, ಗಾಢ ಅನುರಕ್ತಿಯುಳ್ಳವರು, ಪ್ರಾಮಾಣಿಕರು ಹಾಗೂ ತಮ್ಮ ಕೆಲಸದ ವಿಷಯದಲ್ಲಿ ಚಿಂತನಶೀಲರೂ ಆಗಿರುವುದು ಬಹು ಮುಖ್ಯ ಎಂದು, ಓರ್ವ ಶಿಕ್ಷಕಳಾಗಿ ನಾನು ಭಾವಿಸುತ್ತೇನೆ. ನಮ್ಮ ಕೆಲಸದ ಸ್ಥಳಕ್ಕೆ ಅರ್ಥ ತಂದುಕೊಡುವಲ್ಲಿ ಶಾಲೆಯ ಆರೋಗ್ಯಪೂರ್ಣ ಸಂಸ್ಕೃತಿಯು ಮಹತ್ವದ ಪಾತ್ರ ವಹಿಸುತ್ತದೆ. ಅದರಿಂದ ಎಲ್ಲರ ಶಕ್ತಿ ಹಾಗೂ ಪರಿಣಾಮಕತ್ವಗಳು ಬೆಳೆಯಲು ಸಹಾಯ-ವಾಗುತ್ತದೆ. ಮಕ್ಕಳ ಯೋಗಕ್ಷೇಮ ಮತ್ತು ಶೈಕ್ಷಣಿಕ ಸಾಧನೆಗಳ ನಡುವೆ ನೇರ ಸಂಬಂಧವೊಂದಿದೆ. ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಅವರ ಸಾಧನೆಗೆ ಒಂದು ಮುಖ್ಯ ನಿಯಮವಾಗಿರುವಂತೆಯೇ, ಸಾಧನೆಯೂ ಯೋಗಕ್ಷೇಮಕ್ಕೆ ಆವಶ್ಯಕವಾಗುತ್ತದೆ.

ಶಾಲಾ ವಾತಾವರಣವನ್ನು ಪೋಷಿಸಲು ಕೆಲವು ನಿರ್ದಿಷ್ಟ ಕಾರ್ಯವಿಧಾನಗಳನ್ನು ಕೆಳಗೆ ನೀಡಲಾಗಿದೆ; ಇವನ್ನು ನಮ್ಮ ಶಾಲೆಯಲ್ಲಿ ಸ್ಥಾಪಿಸಲು ಎಲ್ಲ ಶಿಕ್ಷಕರು ಹಾಗೂ ಶಾಲಾ ನಿರ್ವಾಹಕರು ಒಟ್ಟಾಗಿ ಶ್ರಮಿಸುತ್ತಿದ್ದೇವೆ. ಅವರು ಕಟ್ಟಿಕೊಳ್ಳುವ ಗಟ್ಟಿಯಾದ ಸಹಾಯಕ ಸಂಬಂಧಗಳು ಮಕ್ಕಳು ತಮ್ಮ ಭೌತಿಕ

ಆರಾಮದ ವಲಯಗಳಿಂದ ದೂರಸರಿದು, ಶೈಕ್ಷಣಿಕ ಸಾಧನೆಗೆ ಮೂಲಭೂತವಾದ ಹೊಸ ವಿಚಾರಗಳನ್ನು, ಚಿಂತನೆಯ ಹೊಸ ವಿಧಾನಗಳನ್ನು ಅನ್ವೇಷಿಸಲು ಬೇಕಿರುವ ಭಾವನಾತ್ಮಕ ಸಂಪನ್ಮೂಲಗಳನ್ನು ಪೂರೈಸುತ್ತವೆ.

ಅಂತಹ ಪೋಷಕ ವಾತಾವರಣದ ನಿರ್ಮಾಣಕ್ಕಾಗಿ ನಮ್ಮ ಪ್ರಯತ್ನಗಳಲ್ಲಿ ಕೆಲವೆಂದರೆ:

ಮಕ್ಕಳು ಪ್ರಸ್ತುತಪಡಿಸಲಿರುವುದನ್ನು ಕೇಳಲು ಎಲ್ಲರೂ ಒಂದೆಡೆ ಕಲೆಯುವ ಮೂಲಕ ದಿನದ ಶುಭಾರಂಭ. ಜೊತೆಗೆ, ಅವರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಗೌರವಪೂರ್ಣ ಅವಕಾಶ ದೊರೆತ ಭಾವನೆಯಲ್ಲಿ ನಡೆದುಕೊಳ್ಳುತ್ತಾರೆ.

ನಮ್ಮ ಮತ್ತು ಮಕ್ಕಳ ನಡುವಿನ ಹಾಗೂ ಪರಸ್ಪರ ಸಂಬಂಧವು ಗಟ್ಟಿಗೊಳ್ಳುವುದಕ್ಕಾಗಿ ಶಾಲಾ ಸಮಯವನ್ನು ವಿನಿಯೋಗಿ-ಸಲಾಗುತ್ತಿದೆ – ಅದು ತರಗತಿಯಲ್ಲಿ, ಆಟದ ಮೈದಾನದಲ್ಲಿ, ಗ್ರಂಥಾಲಯದಲ್ಲಿ ಅಥವಾ ಮಧ್ಯಾಹ್ನದ ಬಿಸಿಯೂಟದ ವೇಳೆಯಲ್ಲಿ ಹಾಗೂ ಸಮುದಾಯ ಭೇಟಿ, ಇತ್ಯಾದಿ ಯಾವುದೇ ಸಮಯದಲ್ಲಾದರೂ ಆಗಿರಬಹುದು. ಶಿಕ್ಷಕರು ಮತ್ತು ಮಕ್ಕಳ ನಡುವಿನ ಅನೌಪಚಾರಿಕ ಮಾತುಕಥೆಯ ಸಮಯವೆಂದರೆ ಅದು ಎಲ್ಲರಿಗೂ ವಿರಮಿಸಲು, ತಿನ್ನಲು ಹಾಗೂ ಗೆಳೆಯ / ಗೆಳತಿಯರೊಂದಿಗೆ ಹರಟಲು, ಕಲೆತು ಅಧ್ಯಯನ ನಿರತರಾಗಲು, ಪರಸ್ಪರ ನೆರವಾಗಲು, ಕೌಟುಂಬಿಕ ಸನ್ನಿವೇಶಗಳ ಬಗ್ಗೆ ತಿಳಿಯಲು, ಇವೇ ಮೊದಲಾದ ಸಂಗತಿಗಳಿಗೆ ಅವಕಾಶ ಮಾಡಿಕೊಡುತ್ತದೆ.

ಮಕ್ಕಳು ತಮ್ಮ ಅಂತರಂಗವನ್ನು ಯಾರೊಡನೆಯಾದರೂ ತೆರೆದುಕೊಳ್ಳಲು ಬಯಸುತ್ತಾರೆ; ಅವರು ಶಿಕ್ಷಕರೊಬ್ಬರನ್ನು ಅದಕ್ಕಾಗಿ ಆಯ್ದುಕೊಂಡರೆ ಆ ಶಿಕ್ಷಕರು ಹಿತಚಿಂತಕರ ಪಾತ್ರವನ್ನು ವಹಿಸುವುದು ಅನಿವಾರ್ಯವಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಅರ್ಥಪೂರ್ಣ ಸಂವಾದದ ಅಗತ್ಯ ಕಂಡುಬರುತ್ತದೆ. ಇದನ್ನು, ತಂಡದಲ್ಲಿ ಅಥವಾ ವೈಯಕ್ತಿಕವಾಗಿ, ಸಂದರ್ಭಕ್ಕೆ ತಕ್ಕಂತೆ ಮಾಡಬೇಕಾಗುತ್ತದೆ. ಇದಕ್ಕಾಗಿ ಶಾಲೆಯಲ್ಲಿ ತಂಡವೊಂದನ್ನು ಸಹ ರಚಿಸಲಾಗಿದೆ.

ಪ್ರಾಥಮಿಕ ತರಗತಿಗಳಲ್ಲಿ ತರಗತಿಗಳ ಅವಧಿಯನ್ನು ವಿಸ್ತರಿಸಲಾಯಿತು. ಮಕ್ಕಳಿಗೆ ಕಡಿಮೆ ಅವಧಿಯ ತರಗತಿಗಳಿದ್ದಾಗ ಅವರು ಹಲವು ವಿಧಗಳ ಬೋಧನೆ ಮತ್ತು ಕಲಿಕೆಗಳನ್ನು ಅನುಭವಿಸುವ, ಪ್ರಶ್ನೆಗಳನ್ನು ಕೇಳುವ, ಕಲಿಕೆಯ ಬಗ್ಗೆ ಚಿಂತನೆ ನಡೆಸುವ ಹಾಗೂ ಮನಬಿಚ್ಚಿ ಹಂಚಿಕೊಳ್ಳುವ ಸಂಭವ ಕಡಿಮೆ ಇರುತ್ತದೆ. ಈ ಕಾರಣದಿಂದ ಶೈಕ್ಷಣಿಕವಾಗಿ ತೊಡಗಿಸಿಕೊಳ್ಳುವಿಕೆಯ ಉದ್ದೇಶಕ್ಕೆ ಧಕ್ಕೆ ಉಂಟಾಗುತ್ತದೆ. ಆದ್ದರಿಂದ, ದೀರ್ಘಾವಧಿ ತರಗತಿಗಳ ಬುನಾದಿಯ ಮೇಲೆ ಮಕ್ಕಳೊಡನೆ ಕಲಿಯುವ ಹಲವು ವಿಧಾನಗಳನ್ನು ಪರಿಶೀಲಿಸುವ ಕಾರ್ಯ ನಡೆಯುತ್ತಿದೆ.

ಓದುವ ಸಂಸ್ಕೃತಿಯನ್ನು ಹುಟ್ಟುಹಾಕುವ ಪ್ರಯತ್ನಗಳು ಚಾಲನೆಯಲ್ಲಿವೆ. ಎಲ್ಲ ತರಗತಿಗಳ ಬಹುತೇಕ ಮಕ್ಕಳು ಓದಿನೊಂದಿಗೆ ಸಂಬಂಧ ಕಟ್ಟಿಕೊಳ್ಳಲು ಸಮರ್ಥರಾಗಿದ್ದಾರೆ. ಅವರ ಅಗತ್ಯಗಳಿಗೆ ಹಾಗೂ ಆಸಕ್ತಿಗಳಿಗೆ ಸಂಬಂಧಿಸಿದಂತೆ ಅವರು ಓದಿಗಾಗಿ ಪುಸ್ತಕಗಳನ್ನು ಆಯ್ದು, ವಿವಿಧ ವೇದಿಕೆಗಳಲ್ಲಿ ಅವನ್ನು ಹಂಚಿಕೊಳ್ಳುತ್ತಾರೆ. ಇದರ ಪರಿಣಾಮವೆಂದರೆ, ಅವರ ಪರಿಕಲ್ಪನಾತ್ಮಕ ಹಾಗೂ ಪ್ರಾಯೋಗಿಕ ಸಾಮರ್ಥ್ಯಗಳಿಗೆ ಪ್ರೋತ್ಸಾಹ ದೊರೆಯುವಂತಾಗಿ, ಅವರು ನೆಮ್ಮದಿ ಅನುಭವಿಸುವಂತಾಗುತ್ತದೆ. ಅವರು ದಿನಚರಿ ಬರೆಯುವ ಹವ್ಯಾಸವನ್ನೂ ರೂಢಿಸಿಕೊಂಡಿದ್ದಾರೆ.

ಸರಳವಾಗಿ ಹೇಳಬೇಕೆಂದರೆ: ನೆಮ್ಮದಿಯಿಂದ ಇರುವವರು ಉತ್ತಮವಾಗಿ ಕಲಿಯಬಲ್ಲರು.



**ಚಿತ್ರ 1. ಟೋಂಕ್ ಪಟ್ಟಣದ ಅಜೀಂ ಪ್ರೇಮ್‌ಜಿ ಶಾಲೆಯ ವಿದ್ಯಾರ್ಥಿಗಳು ತರಗತಿಯ ಚಟುವಟಿಕೆಗಳಲ್ಲಿ ತೊಡಗಿರುವುದು**



**ಚಿತ್ರ 2. ಆಟದ ಮೈದಾನದಲ್ಲಿ ಟೋಂಕ್ ಪಟ್ಟಣದ ಅಜೀಂ ಪ್ರೇಮ್‌ಜಿ ಶಾಲೆಯ ವಿದ್ಯಾರ್ಥಿಗಳು**




**ಲಲಿತಾ ಯದುವಂಶಿ** ಅವರು ರಾಜಸ್ಥಾನದ ಟೋಂಕ್ ಪಟ್ಟಣದ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಭಾಷಾ ಶಿಕ್ಷಕರಾಗಿದ್ದಾರೆ. ಅವರು ಶಿಕ್ಷಣ ಮತ್ತು ಹಿಂದಿ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಓದುವುದು, ಸಂಗೀತವನ್ನಾಲಿಸುವುದು, ಚಲನಚಿತ್ರಗಳನ್ನು ನೋಡುವುದು, ಹೊಸ ಜಾಗಗಳಿಗೆ ಭೇಟಿ ನೀಡುವುದು ಹಾಗೂ ಮಕ್ಕಳೊಂದಿಗೆ ಸಂಭಾಷಣೆಯಲ್ಲಿ ತೊಡಗುವುದು ಇವರ ಆಸಕ್ತಿಯ ವಿಷಯಗಳಾಗಿವೆ. ಇವರನ್ನು lalita.yaduvanshi@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಕುಶಾಲ್ ಬಿ.ಎಸ್.** | ಪರಿಶೀಲನೆ: **ನಾಗಮಣಿ ಎಸ್. ಎನ್.**

# ಸಮನ್ವಯನದ ನಿಜವಾದ ಅರ್ಥ | 'ಸದ್ಭಾವನಾ ವಿದ್ಯಾಲಯ'ದೆಡೆಗೆ

ಸಂಧ್ಯಾದೇವಿ

ಸಮನ್ವಯ ಶಾಲೆಯ (inclusive school) ಬಗ್ಗೆ ಮಾತಾಡುವಾಗ, ವಿಶೇಷ ಅಗತ್ಯಗಳಿರುವ ಮಕ್ಕಳು, 'ನಿರೀಕ್ಷಿತ ಬೆಳವಣಿಗೆ' ಹೊಂದುತ್ತಿರುವ ಮಕ್ಕಳ ಜೊತೆಗೆ ಓದುವ ಶಾಲೆ ಎಂಬರ್ಥದಲ್ಲಿ ಮಾತನಾಡಲಾಗುತ್ತದೆ. ಆದರೆ ಸಮನ್ವಯ ಶಾಲೆಯ ಅರ್ಥ ಇಷ್ಟಕ್ಕೆ ಸೀಮಿತವಾಗಬೇಕೇ? ಯಾವುದೇ ವಿಶೇಷ ಅಗತ್ಯಗಳಿರುವ ಮಕ್ಕಳಿಲ್ಲದೆಯೂ ಸಮನ್ವಯತೆ ಸಾಧಿಸಬೇಕಾದ ಶಾಲೆಗಳ ಕಥೆ ಏನು? ನಮ್ಮನ್ನೇ ನಾವು ಕೇಳಿಕೊಳ್ಳೋಣ: ಶಾಲಾ ಅಸೆಂಬ್ಲಿಯಲ್ಲಿ ಶಾಲೆಯ ಪ್ರತಿಯೊಂದು ಮಗುವಿಗೂ ಭಾಗವಹಿಸುವ ಅವಕಾಶ ಸಿಗುತ್ತದೆಯೇ? ತರಗತಿಯಲ್ಲಿ ಪ್ರತಿ ಮಗುವಿಗೂ ಎದ್ದು ಮಾತನಾಡಲು ಅವಕಾಶವಿದೆಯೇ? ಶಾಲಾ ತರಗತಿಯನ್ನು ಅಲಂಕರಿಸುವ ಕೆಲಸವನ್ನು ಹುಡುಗರು ಮತ್ತು ಹುಡುಗಿಯರು ಸಮವಾಗಿ ಹಂಚಿಕೊಳ್ಳುತ್ತಾರೆಯೇ? ನಮ್ಮಲ್ಲಿ ಬಹಳಷ್ಟು ಜನ ಈ ಪ್ರಶ್ನೆಗಳಿಗೆ 'ಇಲ್ಲ' ಎಂದೇ ಉತ್ತರಿಸುತ್ತೇವೆ. ನಾವೆಲ್ಲ ಒಟ್ಟಾಗಿ ಕೆಲಸ ಮಾಡಿದರೆ, ಇಂಥ ಹಲವು ಸಮಸ್ಯೆಗಳನ್ನು ಎದುರಿಸಬಹುದು ಹಾಗೂ ನಮ್ಮ ಶಾಲೆಗಳನ್ನು ನಿಜವಾದ ಅರ್ಥದಲ್ಲಿ ಸಮನ್ವಯಗೊಳಿಸಬಹುದು.

ನಮ್ಮ ತರಗತಿಗಳಲ್ಲಿ, ನಾವು ಪದೇಪದೇ ಗಮನಿಸಬಹುದಾದ ಸಂಗತಿ ಏನೆಂದರೆ, ಕೆಲವು ಕೆಲಸಗಳನ್ನು ಒಂದು ಗುಂಪಿನ ಮಕ್ಕಳಿಗೆ ಮಾತ್ರ ವಹಿಸಿಕೊಟ್ಟು ಉಳಿದವರನ್ನು ಹೊರಗಿಡಲಾಗುತ್ತದೆ. ನಮಗೆ ಇದರ ಅರಿವಿದೆಯೋ ಇಲ್ಲವೋ, ಆದರೆ ಹೀಗೆ ಕೆಲವರನ್ನು ಹೊರಗಿಡುವುದು ಎಂದರೆ ಅವರನ್ನು ಅವಕಾಶದಿಂದ ವಂಚಿತಗೊಳಿಸುವುದು ಎಂದೇ ಅರ್ಥ. ನಾವು ಶಿಕ್ಷಕರೇ 'ಜಾಣ' ಮಕ್ಕಳು ಮತ್ತು 'ದಡ್ಡ' ಮಕ್ಕಳು ಎಂಬ ಎರಡು ಗುಂಪುಗಳನ್ನು ಸೃಷ್ಟಿಸುತ್ತೇವೆ. ಕೇವಲ ಬುದ್ಧಿವಂತ ಮಕ್ಕಳು ಮಾತ್ರ ಎಲ್ಲ ಚಟುವಟಿಕೆಗಳನ್ನು ಚೆನ್ನಾಗಿ ನಿಭಾಯಿಸಬಲ್ಲರು ಹಾಗೂ ಶೈಕ್ಷಣಿಕವಾಗಿ ಅಷ್ಟೇನೂ ಪ್ರಗತಿ ಹೊಂದದ ಮಕ್ಕಳು ಇತರ ಚಟುವಟಿಕೆಗಳನ್ನೂ ನಿಭಾಯಿಸಲಾರರು ಎಂದು ನಾವು ಭಾವಿಸುತ್ತೇವೆ. ಈ ಮಕ್ಕಳ ಬೆಳವಣಿಗೆಯೂ ಸೇರಿದಂತೆ ಇಡೀ ಶಾಲೆಯ ಬೆಳವಣಿಗೆಯೇ ಇಂಥ ಮನಸ್ಥಿತಿಯ ಕಾರಣದಿಂದ ಕುಂಠಿತಗೊಳ್ಳುತ್ತದೆ.

ಹೀಗೆ ಪ್ರತಿಯೊಂದು ಮಗುವಿನ ಅನನ್ಯತೆಯನ್ನು, ಅಸಾಧಾರಣ ಕಾರ್ಯಗಳನ್ನು ನಿರ್ವಹಿಸುವಲ್ಲಿನ ಅವರ ಸಾಮರ್ಥ್ಯವನ್ನು ಗುರುತಿಸುವಲ್ಲಿ ನಾವು ಏಕೆ ವಿಫಲರಾಗುತ್ತೇವೆ? ಈ ಪ್ರಶ್ನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ನಾವು ಗಿದ್ದಾದ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ (ನವಘರ್ ಬ್ಲಾಕ್, ಜಂಜಗಿರ್ ಚಂಪಾ ಜಿಲ್ಲೆ, ಛತ್ತೀಸ್ಗಢ) ಒಂದು ಸಮನ್ವಯ ಪರಿಸರವನ್ನು ಸೃಷ್ಟಿಸಲು ಹೊರಟೆವು. ಇದಕ್ಕೆ ಕೇವಲ ಶಾಲೆಯಷ್ಟೇ ಅಲ್ಲ, ಈ ಉಪಕ್ರಮಕ್ಕೆ ಇಡೀ ಸಮುದಾಯವೇ ನಮಗೆ ಬೆಂಬಲ ನೀಡಲು ಮುಂದಾಯಿತು. ನಾವು ಕೈಗೊಂಡ ಕಾರ್ಯ ಚಟುವಟಿಕೆಗಳು ಈ ಕೆಳಕಂಡಂತಿವೆ.

## ಸಂವಿಧಾನ ದಿನಾಚರಣೆ

ನಮ್ಮ ಶಾಲೆಯನ್ನು ಸಮನ್ವಯ ಶಾಲೆಯನ್ನಾಗಿ ಮಾಡಲು, ಮಕ್ಕಳು ತಮ್ಮ ಬದುಕಿನಲ್ಲಿ ಹೊಸಹೊಸ ವಿಚಾರಗಳನ್ನು ಅಳವಡಿಸಿಕೊಳ್ಳಲು ಅನುವಾಗುವಂತೆ 'ಮುಕ್ತ ವೈಚಾರಿಕತೆ'ಯ (open in Thoughts) ಒಂದು ಅಡಿಪಾಯ ಹಾಕುವುದು ಅವಶ್ಯಕವಾಗಿತ್ತು.

- ಸಂವಿಧಾನ ದಿನದಂದು, ಮಕ್ಕಳು ನೋಡಿ ಓದಲು ಅಪೇಕ್ಷಿಸುವಂತಹ ರೀತಿಯಲ್ಲಿ ಸಾಂವಿಧಾನಿಕ ಮೌಲ್ಯಗಳನ್ನು ಬರೆದು ಗೋಡೆಗಳ ಮೇಲೆ ಅಂಟಿಸಿದೆವು. ಈ ಮೌಲ್ಯಗಳ ಬಗ್ಗೆ ನಾವು ಚರ್ಚೆಯನ್ನು ಮಾಡಿ ಮಕ್ಕಳು ಅವರ ಅನಿಸಿಕೆಗಳನ್ನು ಹಂಚಿಕೊಳ್ಳಲು ಸಾಧ್ಯವಾಗುವಂಥ ಒಂದು ಮುಕ್ತ ವೇದಿಕೆಯನ್ನು ಕಲ್ಪಿಸಿಕೊಟ್ಟೆವು.

- ಸಿದ್ಧಮಾದರಿಗಳ ಬಗೆಗೂ ನಾವು ಚರ್ಚೆ ಮಾಡಿದೆವು ಹಾಗೂ ಹುಡುಗರು ಮತ್ತು ಹುಡುಗಿಯರು ಮಾಡಬೇಕಾದಂತಹ ಕೆಲಸಗಳ ಬಗ್ಗೆ ವಿವರವಾಗಿ ಅಭಿಪ್ರಾಯಗಳನ್ನು ಹಂಚಿಕೊಂಡೆವು. ಈ ಚರ್ಚೆಯಲ್ಲಿ ಬಹುತೇಕ ಎಲ್ಲಾ ಮಕ್ಕಳೂ ಲಿಂಗಾಧಾರಿತವಾಗಿ ಕೆಲಸವನ್ನು ಹಚ್ಚಬಾರದು ಎಂದೇ ಅಭಿಪ್ರಾಯಪಟ್ಟರು.

- ಕಾನೂನಿನ ನೀತಿ ಸಂಹಿತೆಯಾಧಾರಿತ ನಿಯಮಗಳನ್ನು ಚರ್ಚಿಸುವ ಮೂಲಕ ಮಕ್ಕಳಿಗೆ ತಮ್ಮ ಶಾಲೆಗೋಸ್ಕರ ನಿಯಮಗಳನ್ನು ರೂಪಿಸುವ ಸ್ವಾತಂತ್ರ್ಯ ಕೊಡಲಾಯಿತು. ಮಕ್ಕಳು ತಮ್ಮತಮ್ಮಲ್ಲೇ ಅವುಗಳನ್ನು ಚರ್ಚಿಸಿದ ನಂತರ, ನಿಯಮಗಳನ್ನು ರೂಪಿಸಿ, ಎಲ್ಲರ ಹಸ್ತಾಕ್ಷರಗಳನ್ನೊಳಗೊಂಡ ಆ ನಿಯಮಗಳನ್ನು ಶಾಲೆಯ ಗೋಡೆಗಳ ಮೇಲೆ ಅಂಟಿಸಿದರು.

- ಎಲ್ಲ ಧರ್ಮಗಳನ್ನೂ ಗೌರವಿಸಬೇಕೆನ್ನುವ ಅರಿವನ್ನು ಬೆಳೆಸಲು ಬೆಳಗಿನ ಅಸೆಂಬ್ಲಿಯಲ್ಲಿ ಅಂತರ್ಧರ್ಮೀಯ ಪ್ರಾರ್ಥನೆಯನ್ನು ಸೇರಿಸಲಾಯಿತು. ಹಾಗೂ ಪ್ರತಿ ದಿನ ಅಸೆಂಬ್ಲಿಯ ಜವಾಬ್ದಾರಿ ಹೊರಿಸಿ ಮಕ್ಕಳನ್ನು

ಗುಂಪುಗಳನ್ನಾಗಿ ವಿಂಗಡಿಸಲಾಯಿತು. ಪ್ರತಿ ಮಗುವಿಗೂ ಆ ದಿನದ ಒಳ್ಳೆಯ ವಿಚಾರ ಅಥವಾ ಆಯಾ ವಿಷಯ ವಸ್ತುವಿಗೆ ಸಂಬಂಧಪಟ್ಟ ವಿಚಾರವನ್ನು ಪ್ರಸ್ತುತಪಡಿಸಲು ಅವಕಾಶ ನೀಡಲಾಯಿತು.

## ಮಧ್ಯಾಹ್ನದ ಬಿಸಿಯೂಟ - ಸಹಪಂಕ್ತಿ ಭೋಜನ

ಶಿಕ್ಷಕರು ಮಕ್ಕಳೊಟ್ಟಿಗೆ ಕುಳಿತು ಮಧ್ಯಾಹ್ನದ ಊಟ ಮಾಡುತ್ತ ಮಕ್ಕಳ ಬದುಕಿಗೆ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸುತ್ತಾರೆ. ಇದು ಮಕ್ಕಳು ಶಿಕ್ಷಕರೊಡನೆ ನಿರಾಳವಾಗಿ ವ್ಯವಹರಿಸಲು ಅನುವು ಮಾಡಿಕೊಟ್ಟು ಶಿಕ್ಷಕರೂ ತಮ್ಮಂತೆಯೇ ಎಂಬ ಭಾವನೆಗೆ ಎಡೆ ಮಾಡಿಕೊಡುತ್ತದೆ. ಬಾಣಸಿಗರ ಜೊತೆ ಹೆಣ್ಣುಮಕ್ಕಳು ಮತ್ತು ಗಂಡು ಮಕ್ಕಳು ಕೂಡ ಮಧ್ಯಾಹ್ನದ ಊಟ ಬಡಿಸುವ ಕೆಲಸವನ್ನು ವಹಿಸಿಕೊಳ್ಳುತ್ತಾರೆ. ಕಸ ಗುಡಿಸುವುದು, ತರಗತಿ ಕೋಣೆಯನ್ನು ಅಲಂಕರಿಸುವುದು, ಕುರ್ಚಿ ಮತ್ತು ಮೇಜುಗಳನ್ನು ಎತ್ತಿಡುವುದು, ಸ್ವಚ್ಛತೆ ಕಾಪಾಡುವುದು, ಉದ್ಯಾನದ ಕೆಲಸ ಇಂಥ ಪ್ರತಿ ಕೆಲಸವನ್ನು ಕೂಡ ಎಲ್ಲಾ ಮಕ್ಕಳು ಹಾಗೂ ಶಿಕ್ಷಕರು ಸಮ ಪ್ರಮಾಣದಲ್ಲಿ ವಹಿಸಿಕೊಳ್ಳುವಂತೆ ಖಾತ್ರಿಪಡಿಸಿಕೊಳ್ಳಲಾಗುತ್ತದೆ.

## ತರಗತಿಯ ಆಸನ ಕ್ರಮದಲ್ಲಿ ಬದಲಾವಣೆ

ತರಗತಿಯೊಳಗೆ ಮಕ್ಕಳು ಕುಳಿತುಕೊಳ್ಳುವ ರೂಢಿಗತ ಕ್ರಮದಲ್ಲಿ ಪ್ರತಿ ಮಗುವನ್ನೂ ಪ್ರತ್ಯೇಕವಾಗಿ ತಲುಪಲು ಸಾಧ್ಯವಾಗುತ್ತಿಲ್ಲ ಎಂದು ನಮಗನ್ನಿಸಿತು. ಇದರಿಂದಾಗಿ ಕೆಲ ಮಕ್ಕಳು ಎಲ್ಲಾ ಚಟುವಟಿಕೆಗಳಲ್ಲಿ ಭಾಗವಹಿಸುವುದು ಕಷ್ಟಕರವಾಗಿತ್ತು. ನಾವು ಹೊಸ ರೀತಿಯಲ್ಲಿ ಕುಳಿತುಕೊಳ್ಳುವ ಕ್ರಮವನ್ನು ಜಾರಿಗೆ ತರಲು ಯೋಚಿಸಿದೆವು ಹಾಗೂ ಒಂದು ವೇಳೆ ಹೊಸ ಕ್ರಮ ಪರಿಣಾಮ–ಕಾರಿಯಾಗಿಲ್ಲದಿದ್ದರೆ ಹಳೇ ಕ್ರಮಕ್ಕೇ ವಾಪಸಾಗುವುದೆಂದು–ಕೊಂಡೆವು. ಕುಳಿತುಕೊಳ್ಳುವ ಹೊಸ ಕ್ರಮವು ಅರ್ಧವೃತ್ತಾಕಾರವಾಗಿದ್ದು, ಮಕ್ಕಳಿಗೆ ಇದು ಬಹಳ ಇಷ್ಟವಾಯಿತು. ಪ್ರತಿ ಮಗುವನ್ನೂ ತಲುಪುವುದು ಇದರಿಂದ ಸುಲಭವಾಯಿತಲ್ಲದೇ ಗುಂಪು ಚಟುವಟಿಕೆಗಳಿಗೆ ತರಗತಿ ಕೋಣೆಯ ಮಧ್ಯದಲ್ಲಿ ಸಾಕಷ್ಟು ಜಾಗವೂ ಉಳಿಯುತ್ತಿ–ದ್ದುದರಿಂದ ಈ ಹೊಸ ಕ್ರಮ ಪರಿಣಾಮ–ಕಾರಿಯಾಯಿತು ಎಂದೇ ಹೇಳಬಹುದು. ನಾವೀಗ ತರಗತಿಯಲ್ಲಿ ಪರಸ್ಪರ ಊಟವನ್ನು ಹಂಚಿಕೊಳ್ಳುತ್ತೇವೆ ಮತ್ತು ಬೇರೆಬೇರೆ ಚಟುವಟಿಕೆಗಳಲ್ಲಿ ಭಾಗವಹಿಸುತ್ತೇವೆ.

## ಮಕ್ಕಳ ಮೂಲೆ

ಇಡೀ ಶಾಲೆ ಮಕ್ಕಳಿಗಾಗಿಯೇ ಇದ್ದರೂ ಅವರ ಎಲ್ಲಾ ಕೆಲಸಗಳು ಮತ್ತು ಸೃಜನಶೀಲ ಕಾರ್ಯಗಳು ಅವರ ಪಾಟಿ ಚೀಲದೊಳಗಿರುವ ಪುಸ್ತಕಗಳಲ್ಲೇ ಅಡಗಿರುತ್ತವೆ. ಪ್ರತಿಯೊಂದು ಮಗುವಿನಲ್ಲೂ ಒಂದು ವಿಶೇಷ ಪ್ರತಿಭೆಯಿದ್ದು ಅದನ್ನು ಪ್ರದರ್ಶಿಸುವ ಅಗತ್ಯ ಇದೆ. ಆದ್ದರಿಂದ ಪ್ರತೀ ತರಗತಿಯಲ್ಲಿಯೂ ನಾವು ಮಕ್ಕಳ ಮೂಲೆಯೊಂದನ್ನು (Children's Corner) ಸೃಷ್ಟಿಸಿದೆವು. ಈ ಚಟುವಟಿಕೆಗೋಸ್ಕರ ನಾವು ತರಗತಿಯ ಮುಂಭಾಗದ ಕಪ್ಪು ಹಲಗೆಯ ಕೆಳಗಿನ ಗೋಡೆಯ ಭಾಗವನ್ನು ಆಯ್ದುಕೊಂಡೆವು. ಈ ಜಾಗದಲ್ಲಿ ಪ್ರತಿಯೊಂದು ಮಗುವೂ ತನ್ನ ಕಾರ್ಯಯೋಜನೆಯನ್ನು ಅಥವಾ ತನ್ನ ಯಾವುದೇ ರಚನೆಯನ್ನಾದರೂ ಪ್ರದರ್ಶನಕ್ಕಿಡಬಹುದಾಗಿತ್ತು. ತಮ್ಮ ಕೃತಿಯನ್ನು ಇಡೀ ತರಗತಿಯೆದುರು ಹೀಗೆ ಪ್ರದರ್ಶನಕ್ಕಿಟ್ಟಾಗ ಅವರಿಗೆ ತಮ್ಮಲ್ಲೇನೋ ವಿಶೇಷತೆ ಇದೆ ಎಂಬ ಭಾವನೆ ಬರುತ್ತದೆ. ಅದಲ್ಲದೆ ಇನ್ನೂ ವಿನೂತನವಾದ ಕಲ್ಪನಾಶಕ್ತಿಯುಳ್ಳ ಕೃತಿಗಳನ್ನು ರಚಿಸಲು ಅವರಿಗೆ ಉತ್ತೇಜನ ನೀಡುತ್ತದೆ. ತಮ್ಮ ಈ "ವಿಶೇಷ" ಮೂಲೆಯ (‘special’ corner) ಕುರಿತು ಮಕ್ಕಳಿಗೆ ಬಹಳ ಸಂತೋಷ ಉಂಟಾಗುತ್ತದೆ.

## ಶಾಲೆಯನ್ನು ಅಲಂಕರಿಸುವುದರಲ್ಲಿ ಭಾಗವಹಿಸುವುದು

ಶಾಲೆಗೆ ಬಣ್ಣ ಹೊಡೆಯುವ ಈ ಚಟುವಟಿಕೆಯನ್ನು ಮಾಡುವಾಗ ನಮ್ಮ ಸಮಯ ಅದ್ಭುತವಾಗಿ ಕಳೆಯಿತಲ್ಲದೆ ಹಲವಾರು ಪ್ರಶ್ನೆಗಳಿಗೆ ನಮಗೆ ಉತ್ತರ ಸಿಕ್ಕಿತು. ಮಕ್ಕಳ ಜೊತೆಗೆ ಹಳ್ಳಿಯವರು ಕೂಡ ನಮ್ಮ ಪ್ರಯತ್ನಗಳನ್ನು ಶ್ಲಾಘಿಸಿ ತಮ್ಮ ಸಹಾಯಹಸ್ತವನ್ನು ಚಾಚುವುದರ ಮೂಲಕ ಈ ಚಟುವಟಿಕೆಯಲ್ಲಿ ಭಾಗವಹಿಸಿದರು. ಬಣ್ಣ ಬಳಿಯುತ್ತಿದ್ದ 5ನೇ ತರಗತಿಯ ವಿದ್ಯಾರ್ಥಿಯೊಬ್ಬ "ಮೇಡಂ, ನಾವು ಶಾಲೆಯನ್ನು ಇಷ್ಟೆಲ್ಲಾ ಕಷ್ಟಪಟ್ಟು ಸುಂದರಗೊಳಿಸುತ್ತಿದ್ದೇವೆ, ನಾವು ಶಾಲೆ ಬಿಟ್ಟ ಮೇಲೆ ಇದನ್ನೆಲ್ಲಾ ಯಾರು ಮಾಡುತ್ತಾರೆ ?" ಎಂದು ಕೇಳಿದ. ಅವನು ಹಾಗೆ ಕೇಳುವಾಗ ಅವನ ಕಣ್ಣುಗಳು ಈ ಶಾಲೆಯ ಬಗೆಗೆ ಅವನಿಗಿದ್ದ ಪ್ರೀತಿ ಹಾಗೂ ಜವಾಬ್ದಾರಿಗಳನ್ನು ಹೊರಸೂಸುತ್ತಿದ್ದವು.

## ಪೋಷಕರ ಸಭೆಯನ್ನು ಏರ್ಪಡಿಸಿದ್ದು

ವಿದ್ಯಾರ್ಥಿಗಳ ಪೋಷಕರಿಗೂ ಹಾಗೂ ಶಿಕ್ಷಕರಿಗೂ ಯಾವುದೇ ರೀತಿಯ ಸಂಪರ್ಕ ಇಲ್ಲದೇ ಇರುವುದು ನಮಗೆ ಕಂಡು ಬಂತು. ಇದರ ಫಲವಾಗಿ ನಮಗೆ ಮಕ್ಕಳ ಮನೆಯಲ್ಲಿನ ದೈನಂದಿನ ಜೀವನ, ಅಭ್ಯಾಸಗಳು, ಸಮಸ್ಯೆಗಳು ಅಥವಾ ಸನ್ನಿವೇಶಗಳ ಬಗ್ಗೆ ಯಾವುದೇ ಅರಿವಿಲ್ಲದಿರುವುದೂ ಗಮನಕ್ಕೆ ಬಂತು. ಇದೇ ರೀತಿ ಪೋಷಕರಿಗೂ ಶಾಲೆಯಲ್ಲಿ ಮಕ್ಕಳ ಪ್ರಗತಿ ಹಾಗೂ ಚಟುವಟಿಕೆಗಳ ಬಗ್ಗೆ ಅರಿವಿರಲಿಲ್ಲ. ಇದನ್ನು ಪರಿಗಣಿಸಿ, ಮೂರರಿಂದ ಐದನೇ ತರಗತಿಯವರೆಗಿನ ಮಕ್ಕಳ ಪೋಷಕರಿಗೋಸ್ಕರ ಒಂದು ಶಿಕ್ಷಕ – ಪೋಷಕರ ಸಭೆಯನ್ನು ಏರ್ಪಡಿಸಲು ನಿರ್ಧರಿಸಿದೆವು. ಪೋಷಕರೆಲ್ಲ ದೊಡ್ಡ ಸಂಖ್ಯೆಯಲ್ಲಿ ಭಾಗವಹಿಸಿದ್ದರು; ಅವರು ತಮ್ಮ ಕಾಳಜಿಗಳನ್ನು ವ್ಯಕ್ತಪಡಿಸಿದ್ದಲ್ಲದೆ ಸಹಾಯಕ ಸಲಹೆಗಳನ್ನು ಕೂಡ ನೀಡಿದರು. ನಾವು ಅವರಿಗೆ ಮೌಲ್ಯಮಾಪನ ಮಾಡಿದ ಅರ್ಧವಾರ್ಷಿಕ ಪರೀಕ್ಷೆಯ ಉತ್ತರ ಪತ್ರಿಕೆಗಳನ್ನು ಕೂಡ ತೋರಿಸಿದೆವು. ಮಕ್ಕಳ ಪ್ರಗತಿಗೋಸ್ಕರ ತಮ್ಮ ಸಹಕಾರವನ್ನು ವಿಸ್ತರಿಸಲು ಕೋರಿಕೊಂಡೆವು. ಅಲ್ಲಿ ನವೋದಯ ವಿದ್ಯಾಲಯದ ಬಗ್ಗೆ

ಒಂದು ಚರ್ಚೆ ಕೂಡ ನಡೆಯಿತು, ಆಗ ಆ ಶಾಲೆಯ ಅನುಕೂಲಗಳ ಬಗ್ಗೆ ವಿವರಿಸಲಾಯಿತು. ಪೋಷಕರು ಮೊದಲೆಂದೂ ಇಂಥದೊಂದು ಸಭೆಯಲ್ಲಿ ಪಾಲ್ಗೊಂಡಿರಲಿಲ್ಲ. ಎಲ್ಲ ಪೋಷಕರು ಬಂದಿರಲಿಲ್ಲ, ಬಹುಶಃ ಹಿಂದೆಂದೂ ಅವರು ತಮ್ಮ ಮಕ್ಕಳಿಗೆ ಸಂಬಂಧಿಸಿದ ಪ್ರಮುಖ ವಿಷಯಗಳನ್ನು ಹೀಗೆ ಚರ್ಚಿಸಿರದ ಕಾರಣವೂ ಇರಬಹುದು. ಆದಾಗ್ಯೂ ಹಾಜರಿದ್ದ ಎಲ್ಲ ಪೋಷಕರು ಕೂಡ ಚರ್ಚೆಯಲ್ಲಿ ಭಾಗವಹಿಸಿದರು. ಕೆಲವು ಮಕ್ಕಳ ಅಜ್ಜಅಜ್ಜಿಯರು ಬಂದಿದ್ದರು; ಅವರ್ಯಾರೂ ಶಾಲೆಗೆ ಹೋಗಿ ವಿದ್ಯಾಭ್ಯಾಸ ಮಾಡಿದವರಾಗಿರಲಿಲ್ಲ. ಆದರೂ ತಮ್ಮ ಮೊಮ್ಮಕ್ಕಳ ಮೇಲಿನ ಕಾಳಜಿಯಿಂದಾಗಿ ನಮಗೆಲ್ಲ ಚೆನ್ನಾಗಿ ಪಾಠ ಮಾಡಲು ಸೂಚನೆಯಿತ್ತಿದ್ದು ಬಹಳ ಧನಾತ್ಮಕ ಅನುಭವವಾಗಿತ್ತು.

## ಪೋಷಕರನ್ನು ಮನೆಯಲ್ಲೇ ಭೇಟಿ ಮಾಡಿದ್ದು

ಕೆಲವು ಮಕ್ಕಳು ಸತತವಾಗಿ ಗೈರುಹಾಜರಾಗುತ್ತಿದ್ದು ಅವರ ಪೋಷಕರು ಕೂಡ ಶಿಕ್ಷಕ–ಪೋಷಕ ಸಭೆಗೆ ಬಂದಿರಲಿಲ್ಲವಾದ್ದರಿಂದ ಅವರನ್ನು ಹೇಗಾದರೂ ಭೇಟಿ ಮಾಡುವುದು ನಮಗೆ ಬಹಳ ಮುಖ್ಯವಾಗಿತ್ತು. ನಾವು ಅವರನ್ನು ಅವರ ಮನೆಗೇ ಹೋಗಿ ಭೇಟಿ ಮಾಡಲು ನಿರ್ಧರಿಸಿದೆವು. ಇದಕ್ಕೆ ಬೇರೆ ಕಾರಣಗಳೂ ಇದ್ದವು, ಉದಾಹರಣೆಗೆ, ಐದನೇ ತರಗತಿಯಲ್ಲಿ ಓದುತ್ತಿದ್ದ, ತರಗತಿಯ ಹಾಗೂ ಶಾಲೆಯ ಎಲ್ಲಾ ಚಟುವಟಿಕೆಯಲ್ಲೂ ಮುಂದಿದ್ದ ಬಹಳ ಬುದ್ಧಿವಂತ ಮಗುವೊಂದು ಇದ್ದಕ್ಕಿದ್ದಂತೆ ಬದಲಾಗಿಬಿಟ್ಟಿದ್ದ. ಅವನು ಮಂಕಾಗಿರುತ್ತಿದ್ದ ಮತ್ತು ಬಹು ಬೇಗ ಕಿರಿಕಿರಿಗೊಳಗಾಗುತ್ತಿದ್ದ. ತರಗತಿಯ ಚಟುವಟಿಕೆಯಲ್ಲೂ ಆಸಕ್ತಿಯಿಂದ ಭಾಗವಹಿಸುತ್ತಿರಲಿಲ್ಲ. ನಾವು ಅವನ ಗೆಳೆಯರನ್ನು ವಿಚಾರಿಸಿದೆವು, ಅವರಿಗೇನೂ ತಿಳಿದಿರಲಿಲ್ಲ. ಅವನನ್ನು ಮಾತನಾಡಿಸಲು ಪ್ರಯತ್ನಿಸಿದ್ದು ಕೂಡ ವ್ಯರ್ಥವಾಯಿತು. ನವೋದಯ ವಿದ್ಯಾಲಯದ ಅರ್ಜಿ ತುಂಬಲೂ ನಿರಾಕರಿಸಿದ ಅವನು, ಶಾಲೆಗೆ ಬರಲೂ ಆಸಕ್ತಿ ಕಳೆದುಕೊಂಡುಬಿಟ್ಟಿದ್ದ. ನಾವು ಅವನ ಮನೆಗೆ ಹೋಗಿ ಅವನ ತಾಯಿಯೊಡನೆ ಮಾತಾಡಿದಾಗ ತಿಳಿದುಬಂದಿದ್ದೇನೆಂದರೆ, ಮನೆಯಲ್ಲಿ ಬಹಳ ಜಗಳ ಗಲಾಟೆಗಳಾಗುತ್ತಿದ್ದು ಅದು ಆ ಮಗುವಿನ ಮೇಲೆ ಮಾನಸಿಕವಾಗಿ ಹಾಗೂ ಭಾವನಾತ್ಮಕವಾಗಿ ದುಷ್ಪರಿಣಾಮ ಬೀರಿತ್ತು. ಅವನ ತಾಯಿಯೊಡನೆ ಮಾತನಾಡಿ ಈ ವಿಷಯವನ್ನು ಅವರಿಗೆ ತಿಳಿಸಿದೆವು. ಇದು ಕೊಂಚ ಮಟ್ಟಿಗೆ ಪರಿಸ್ಥಿತಿಯನ್ನು ಸುಧಾರಿಸಿತು ಹಾಗೂ ಈಗ ಅವನು ತನ್ನ ಹಿಂದಿನ ಸ್ವರೂಪಕ್ಕೆ ನಿಧಾನವಾಗಿ ಮರಳುತ್ತಿದ್ದಾನೆ.

## ಎಲ್ಲ ಧರ್ಮಗಳ ಹಬ್ಬಗಳನ್ನೂ ಆಚರಿಸುವುದು

ಇದಕ್ಕೆ ಮುಖ್ಯ ಕಾರಣವೆಂದರೆ ಮಕ್ಕಳಿಗೆ ಇತರ ಧರ್ಮಗಳ ಬಗ್ಗೆ ಯಾವುದೇ ತಿಳಿವಳಿಕೆಯಿರಲಿಲ್ಲ. ಬೇರೆ ಧರ್ಮಗಳ ಬಗ್ಗೆ ಕೊಂಚವಾದರೂ ತಿಳಿದುಕೊಂಡಿದ್ದ ಒಂದಿಬ್ಬರಿಗೂ ಇತರ ಧರ್ಮಗಳ ಬಗ್ಗೆ ಅಂತಹ ಗೌರವವಿರಲಿಲ್ಲ, ಹಾಗಾಗಿ ಈ ಚಟುವಟಿಕೆಯನ್ನು ಮಾಡುವುದು ಅನಿವಾರ್ಯವಾಗಿತ್ತು.

ನಾವು ಕ್ರಿಸ್ಮಸ್ ಹಬ್ಬವನ್ನು ಆಚರಿಸುವುದರ ಮೂಲಕ ಶುರು ಮಾಡಿದೆವು. ನಾವು ಮೊದಲಿಗೆ ಈ ಹಬ್ಬದ ಬಗ್ಗೆ ಮಕ್ಕಳಿಗೇನು ಗೊತ್ತಿದೆ ಎಂದು ಕೇಳಿದೆವು ಮತ್ತು ಆನಂತರ ಕ್ರಿಸ್ಮಸ್ ಹಬ್ಬವನ್ನು ಹೇಗೆ ಆಚರಿಸುವುದೆಂದು ಚರ್ಚಿಸಿದೆವು. ಈ ಚಟುವಟಿಕೆಯ ಸಂದರ್ಭದಲ್ಲಿ ಕೆಲವು ಮಕ್ಕಳಿಗೆ ಭಾಗವಹಿಸಲು ಹಿಂಜರಿಕೆ ಇದ್ದುದು ಕಂಡುಬಂತು. ಕಾರಣ ಅವರು ಈ ಬಗ್ಗೆ ಕೇಳಿದ್ದ ಸಂಗತಿಗಳಿಂದ ತಮ್ಮ ಧರ್ಮವೊಂದನ್ನು ಬಿಟ್ಟು ಬೇರೆ ಧರ್ಮಗಳ ಬಗ್ಗೆ ತಪ್ಪು ಕಲ್ಪನೆಯನ್ನು ಹೊಂದಿದ್ದರು. ಬಹಳ ದೀರ್ಘವಾದ ಸಮಾಲೋಚನೆಯ ಬಳಿಕ ಅವರ ಕೆಲವು ತಪ್ಪುಕಲ್ಪನೆಗಳನ್ನು ದೂರಗೊಳಿಸಲು ಸಾಧ್ಯವಾಯಿತು. ಅದಾದ ಮೇಲೆ ಎಲ್ಲ ಮಕ್ಕಳು ಕ್ರಿಸ್ಮಸ್ ಟೋಪಿಗಳನ್ನು ಮಾಡಿ ಚೆನ್ನಾಗಿ ಕಾಲ ಕಳೆದರು.

ಇವು ನಮ್ಮ ಶಾಲೆಯ ತಂಡ (ಶಿಕ್ಷಕರು ಮತ್ತು ಮಕ್ಕಳು), ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಸದಸ್ಯರ ಜೊತೆಗೂಡಿ ಶಾಲೆಯನ್ನು ಸಮನ್ವಯಗೊಳಿಸಲು ಮಾಡುತ್ತಿರುವ ಚಿಕ್ಕ ಚಿಕ್ಕ ಪ್ರಯತ್ನಗಳು.



**ಸಂಧ್ಯಾದೇವಿ ಸೂರ್ಯವಂಶಿ** ಅವರು ಗಿದ್ಧಾದ ಸರಕಾರಿ ಪ್ರಾಥಮಿಕ ಶಾಲೆಯಲ್ಲಿ ಕಲಿಸುತ್ತಿದ್ದಾರೆ (ಜಂಜಗಿರ್ ಜಿಲ್ಲೆ, ಛತ್ತೀಸ್‌ಘಡ). 2013ರಿಂದ ಶಿಕ್ಷಕರಾಗಿರುವ ಸಂಧ್ಯಾದೇವಿ ಅವರು ಇಂಗ್ಲಿಷ್‌ನಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದು ಪ್ರಾಥಮಿಕ ಶಾಲೆಯ ಮಕ್ಕಳಿಗೆ ಕಲಿಸುವ ಆಸಕ್ತಿ ಹೊಂದಿದ್ದಾರೆ. ಇವರಿಗೆ ಹಾಡುವುದು ಇಷ್ಟ. ಅವರನ್ನು sandhyadevi1986@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಸ್ವಯಂಪ್ರಭಾ ಹೆಗ್ಡೆ** | ಪರಿಶೀಲನೆ: **ನಾಗಮಣಿ ಎಸ್.ಎನ್.**

ಮಕ್ಕಳಿಗೆ ತಾವೂ ಮುಖ್ಯ ಎಂದು ಅರಿವಾಗುವಂತೆ ಮಾಡಬೇಕು. ಜನ ಅವರೊಂದಿಗೆ ಮಾತನಾಡುತ್ತಿದ್ದಾಗ ಅವರ ಮಾತುಗಳನ್ನೂ ಆಲಿಸಬೇಕು ಮತ್ತು ಅವರಲ್ಲಿ ಭರವಸೆಯನ್ನು ತುಂಬಬೇಕು. ಯಾರೋ ನಮ್ಮ ಬಗ್ಗೆ ಕಾಳಜಿ ವಹಿಸುತ್ತಿದ್ದಾರೆ ಎಂಬ ಸುರಕ್ಷತೆಯ ಭಾವನೆ ಅವರಲ್ಲಿ ಮೂಡಬೇಕು. ಇದರಿಂದ ಅವರನ್ನು ತರಗತಿಯಲ್ಲಿ, ಕಾರಿಡಾರ್‌ನಲ್ಲಿ ಅಥವಾ ಇನ್ನಿತರ ಯಾವುದೇ ಸ್ಥಳದಲ್ಲಿ ಮುಕ್ತವಾಗಿ ಭೇಟಿ ಮಾಡಲು ಸಾಧ್ಯವಾಗುತ್ತದೆ. ನಿಮ್ಮ ಊಟ ಮುಗಿಯಿತೇ ಅಥವಾ ನಿಮಗೆ ಶೀತವಾಗಿದೆಯೇ ಎಂಬ ಸಣ್ಣಪುಟ್ಟ ವಿಚಾರಣೆ ಮಾಡುವುದೇ ಮಕ್ಕಳ ಪಾಲಿಗೆ ದೊಡ್ಡ ಸಾಂತ್ವನವಾಗಿರುತ್ತದೆ. ಇಲ್ಲದೇ ಹೋದರೆ ಅವರಿಗೆ ತಮ್ಮ ಕುಟುಂಬದಿಂದ ಇಂತಹ ಕಾಳಜಿಯ ಮಾತುಗಳು ಸಿಗುವುದಿಲ್ಲ. ಅವರ ಕುಟುಂಬ ಸಾಮಾನ್ಯವಾಗಿ ದಿನನಿತ್ಯದ ಅಗತ್ಯಗಳನ್ನು ಪೂರೈಸುವುದರಲ್ಲಿಯೇ ಮುಳುಗಿರುತ್ತದೆ.

# ತಾರತಮ್ಯ ಮತ್ತು ಹೊರಗಿಡುವಿಕೆಯ ನಿವಾರಣೆ

## | 'ಸದ್ಭಾವನಾ ವಿದ್ಯಾಲಯ' ದೆಡೆಗೆ

ಸಾವಿತ್ರಿ ಸಾಹು

ಶಾಲೆಯು ಮಕ್ಕಳಿಗೆ ಸಾಂವಿಧಾನಿಕ ಮೌಲ್ಯಗಳನ್ನು ಅಳವಡಿಸಿಕೊಳ್ಳಲು ಸಹಾಯ ಮಾಡುವ, ಆ ಬಗ್ಗೆ ಅರಿವು ಮೂಡಿಸುವ ಸಂಸ್ಥೆಯಾಗಿದೆ. ಮಕ್ಕಳಲ್ಲಿ ಕಲಿಕೆಯನ್ನು ವರ್ಧಿಸಲು, ಮಕ್ಕಳು, ಪ್ರಸ್ತುತ ಸಂದರ್ಭದಲ್ಲಿ ಮತ್ತು ಬೆಳವಣಿಗೆ ಹೊಂದುವ ಸಮಯದಲ್ಲೂ ಪ್ರಗತಿ ಹೊಂದಲು ಸಹಾಯ ಮಾಡಲು, ಶಾಲೆಗಳು ಸಹಾನುಭೂತಿ ಮತ್ತು ಸಮಾನತೆಯ ವಾತಾವರಣವನ್ನು ಸೃಷ್ಟಿಸಬೇಕು. ತರಗತಿ ಕೊಠಡಿ, ಆಟದ ಮೈದಾನ ಮತ್ತು ದೈನಂದಿನ ಬೆಳಗ್ಗಿನ ಶಾಲಾ ಸಭೆಯಲ್ಲಿನ ವಿವಿಧ ಚಟುವಟಿಕೆಗಳಲ್ಲಿ ಮಕ್ಕಳನ್ನು ಸೇರಿಸಿಕೊಳ್ಳುವ ಮೂಲಕ ಅವರ ಸ್ವತಂತ್ರ ಆಲೋಚನೆಗಳು ಮತ್ತು ಅಭಿಪ್ರಾಯಗಳನ್ನು ಗೌರವಿಸುವುದು ಶಾಲೆಯಲ್ಲಿ ಮಕ್ಕಳನ್ನು ಸಮಾನವಾಗಿ ಪರಿಗಣಿಸುವುದನ್ನು ಖಚಿತಪಡಿಸಿಕೊಳ್ಳಲು ಇರುವ ಪ್ರಮುಖ ಮಾರ್ಗಗಳಲ್ಲಿ ಒಂದಾಗಿದೆ. ಶಾಲೆಯು ಮಕ್ಕಳ ನಡವಳಿಕೆಯಲ್ಲಿ ಮಾರ್ಪಾಡುಗಳನ್ನು ತರುತ್ತದೆ ಮತ್ತು ಉತ್ತಮ ಭವಿಷ್ಯವನ್ನು ನಿರ್ಮಿಸಿಕೊಳ್ಳಲು ಅವರನ್ನು ಸಿದ್ಧಪಡಿಸುತ್ತದೆ, ಸಮಾಜದ ಬಗ್ಗೆ ಯೋಚಿಸುವಂತೆಯೂ ಪ್ರೇರೇಪಿಸುತ್ತದೆ. ಶಾಲೆಗೆ ಬರುವ ಮಕ್ಕಳಲ್ಲಿ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಜನಾಂಗೀಯ ಹಿನ್ನೆಲೆಗಳಲ್ಲಿ ವೈವಿಧ್ಯತೆ ಹಾಗೂ ಸಂಪ್ರದಾಯ ಮತ್ತು ಸಿದ್ಧಾಂತಗಳಲ್ಲಿನ ವ್ಯತ್ಯಾಸಗಳನ್ನು ನಾವು ನೋಡುತ್ತೇವೆ. ಶಾಲೆಯಲ್ಲಿ ಮಕ್ಕಳ ನಡವಳಿಕೆಯು ಅವರ ಕೌಟುಂಬಿಕ ಮತ್ತು ಸಾಮಾಜಿಕ ಹಿನ್ನೆಲೆಗಳಲ್ಲಿರುವ ವ್ಯತ್ಯಾಸಗಳನ್ನು ಪ್ರತಿ–ಬಿಂಬಿಸುತ್ತದೆ. ಈ ನಡವಳಿಕೆಗಳ ಪರಿಣಾಮದಿಂದಾಗಿ ಮಕ್ಕಳಲ್ಲಿ ಶೈಕ್ಷಣಿಕ ಪ್ರಗತಿಯಾಗದಂತೆ ತಡೆಯುವ ಕಾರಣಗಳಿದ್ದರೆ ಅವುಗಳನ್ನು ಗುರುತಿಸಬೇಕು ಮತ್ತು ತರಗತಿಯಲ್ಲಿ ಹಾಗೂ ತರಗತಿಯ ಹೊರಗೆ ಅವನ್ನು ಚರ್ಚಿಸಬೇಕು.

ಸಾಮಾಜಿಕವಾಗಿ, ದೈಹಿಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಜನಾಂಗೀಯವಾಗಿ ವೈವಿಧ್ಯ–ಮಯವಾದ ತರಗತಿಗಳಲ್ಲಿ ಮಕ್ಕಳೊಂದಿಗೆ ಕೆಲಸ ಮಾಡಲು ನನಗೆ ಅವಕಾಶ ಸಿಕ್ಕಿದೆ. ಆದರೆ ಸಮನ್ವಯತೆಯನ್ನು ಸಾಧಿಸಲು ಇಲ್ಲಿ ಅಡೆತಡೆಗಳಿವೆ, ಮತ್ತು ನಾನು ಅದನ್ನು ವೈಯಕ್ತಿಕವಾಗಿ ಅನುಭವಿಸಿದ್ದೇನೆ. ಈ ಲೇಖನದಲ್ಲಿ, ನನ್ನ ಅನುಭವಗಳನ್ನು ಮತ್ತು ಲಿಂಗ, ಜಾತಿ, ವರ್ಗ, ಧರ್ಮ ಮತ್ತು ಇತರ ವ್ಯತ್ಯಾಸಗಳ ಬಗ್ಗೆ ಸಾಮಾನ್ಯವಾಗಿ ಇರುವ ತಪ್ಪು ಕಲ್ಪನೆಗಳಿಂದ ಹೊರಬಂದು, ಮಕ್ಕಳು ಅದರ ಹೊರತಾಗಿಯೂ ಬೆಳೆಯಲು ಸಹಾಯ ಮಾಡಲು ನಾನು ತೆಗೆದುಕೊಂಡ ಕ್ರಮಗಳನ್ನು ಹಂಚಿಕೊಳ್ಳಲು ನಾನು ಬಯಸುತ್ತೇನೆ.

### ಲಿಂಗ ಪ್ರತ್ಯೇಕತೆ

ನನ್ನ ತರಗತಿಯಲ್ಲಿ ಮತ್ತು ಶಾಲೆಗಳಲ್ಲಿ ನಾನು ಎದುರಿಸಿದ ಮೊದಲ ಸವಾಲು, ಸರ್ವೇಸಾಮಾನ್ಯವಾಗಿರುವ ಲಿಂಗ ತಾರತಮ್ಯ (gender discrimination). ಮಕ್ಕಳಿಗೆ ಇದರ ಬಗ್ಗೆ ಅರಿವಿರದಿದ್ದರೂ ಮತ್ತು ನಾವು ಶಿಕ್ಷಕರು ಅದನ್ನು ಒಪ್ಪಿಕೊಳ್ಳದಿದ್ದರೂ, ಲಿಂಗ ಆಧಾರಿತ ಪ್ರತ್ಯೇಕತೆಯು (gender-based segregation) ನಮ್ಮ ಸುತ್ತಲೂ ಇದೆ. ನಾನು ತರಗತಿಯಲ್ಲಿ ವಿವಿಧ ವಿಷಯಗಳನ್ನು ಬೋಧಿಸುತ್ತಿರುವಾಗ, ವಿದ್ಯಾರ್ಥಿಗಳು ಗುಂಪುಗಳಲ್ಲಿ ಕೆಲಸ ಮಾಡಬೇಕಾದ ಸಂದರ್ಭ ಒದಗಿದಾಗ ಸಾಮಾನ್ಯವಾಗಿ ಹುಡುಗರು ತಮ್ಮ ಗುಂಪಿಗೆ ಹುಡುಗರನ್ನು ಮತ್ತು ಹುಡುಗಿಯರು ಹುಡುಗಿಯರನ್ನು ಮಾತ್ರ ಆಯ್ಕೆ ಮಾಡಿಕೊಳ್ಳುತ್ತಾರೆ ಎಂದು ನಾನು ಗಮನಿಸಿದ್ದೇನೆ. ಅವರು ಒಟ್ಟಿಗೆ ಕುಳಿತುಕೊಳ್ಳುವಾಗ, ಮಾತನಾಡುವಾಗ, ಜೋಡಿಯಾಗಿ ಓದುವಾಗ ಮತ್ತು ಹೊರಾಂಗಣ ಆಟೋಟದಲ್ಲಿ ಅದೇ ನಡವಳಿಕೆಯನ್ನು ನಾವು ಗಮನಿಸಬಹುದು. ಹುಡುಗರು ಮತ್ತು ಹುಡುಗಿಯರು ಇಬ್ಬರೂ ತಮ್ಮ ವೈಯಕ್ತಿಕ ವಸ್ತುಗಳನ್ನು, ಪೆನ್ನುಗಳು ಮತ್ತು ಬಳಪಗಳನ್ನು ಪರಸ್ಪರ ಹಂಚಿಕೊಳ್ಳುತ್ತಿರಲಿಲ್ಲ. ಮಕ್ಕಳಲ್ಲಿ ಇಂತಹ ನಡವಳಿಕೆಯು ಸಮನ್ವಯ ಸಮಾಜ (inclusive society) ನಿರ್ಮಾಣಕ್ಕೆ ತಡೆಯಾಗಿದೆ ಎಂದು ನಾನು ಭಾವಿಸುತ್ತೇನೆ, ಆದ್ದರಿಂದ ನಾನು ನನ್ನ ತರಗತಿಯಲ್ಲಿ ಸಂವಾದ–ಸ್ನೇಹಿ (dialogue friendly) ವಾತಾವರಣವನ್ನು ಸ್ಥಾಪಿಸಿದೆ. ಉದಾಹರಣೆಗೆ, ಅವರ ತರಗತಿಯ ನೀಲಂ ಅತ್ಯಂತ ಪ್ರತಿಭಾವಂತ ನೃತ್ಯಗಾರ್ತಿ ಮತ್ತು ಕಲಾವಿದೆ, ಅವಳಿಂದ ಈ ಕೌಶಲಗಳನ್ನು ಅವರು ಕಲಿಯಲು ಇಷ್ಟಪಡುವುದಿಲ್ಲವೇ? ಎಂದು ಕೇಳಿದೆ. ಅದೇ ರೀತಿ ವೇದಿಕಾ ಮತ್ತು ದೀಕ್ಷಾ ಸುಂದರ ಹಾಡುಗಳು ಮತ್ತು ಕಥೆಗಳನ್ನು ಬರೆಯುತ್ತಾರೆ; ನಿಮಗೆ ಇದನ್ನು ಅವರಿಂದ ಕಲಿಯಲು ಆಸಕ್ತಿ ಇಲ್ಲವೇ? ಆ ದೇವರಾಜ್ ಕ್ರೀಡೆಯಲ್ಲಿ ಪ್ರತಿಭಾವಂತ, ಇತರರನ್ನು ಭಾಗವಹಿಸಲು ಪ್ರೇರೇಪಿಸುತ್ತಾನೆ; ಅವರು ಅವನೊಂದಿಗೆ ಆಡಲು ಬಯಸುವುದಿಲ್ಲವೇ? ಹೀಗೆ ನಾನು ಅವರ ತರಗತಿಯಲ್ಲಿನ ಪ್ರತಿಯೊಬ್ಬರ ವಿಶೇಷತೆಗಳನ್ನು ಅವರಿಗೆ ಹೇಳಿದೆ. ನಂತರ ನಾವು ಸಹಪಾಠಿಗಳಿಂದ ಕಲಿಯುವಾಗ ಎದುರಾಗುವ ಸವಾಲುಗಳನ್ನು ಮತ್ತು ತರಗತಿಯಲ್ಲಿ ಪರಸ್ಪರ ಸಹಾಯ ಪಡೆಯುವುದು ಹೇಗೆ ಎಂಬುದರ ಕುರಿತಾಗಿ ಚರ್ಚಿಸಿದೆವು. ನಾನು ಮಕ್ಕಳನ್ನು ಒಬ್ಬರಿಗೊಬ್ಬರು ಸಹಕರಿಸಲು ಪ್ರೋತ್ಸಾಹಿಸಿದೆ ಮತ್ತು ಹುಡುಗರು ಮತ್ತು ಹುಡುಗಿಯರು ಇಬ್ಬರೂ ಸ್ನೇಹಿತರಾಗಬಹುದು ಎಂದು ಒತ್ತಿ ಹೇಳಿದೆ. ಹುಡುಗ ಹುಡುಗಿಯರಿಬ್ಬರೂ ಕಸ ಗುಡಿಸುವುದು, ನೀರು ತರುವುದು

ಮತ್ತು ಪಾತ್ರೆಗಳನ್ನು ತೊಳೆಯುವುದು ಮುಂತಾದ ಮನೆಕೆಲಸಗಳಲ್ಲಿ ತಮ್ಮ ತಾಯಂದಿರಿಗೆ ಮತ್ತು ತೋಟದ ಕೆಲಸ ಮಾಡುವಲ್ಲಿ ಮತ್ತು ದಿನಸಿ ಸಾಮಾನುಗಳನ್ನು ಮನೆಗೆ ತರಲು – ಅವರ ತಂದೆಗೆ ಹೇಗೆ ಸಹಾಯ ಮಾಡುತ್ತಾರೆ ಮತ್ತು ಈ ಕೆಲಸಗಳನ್ನು ಮಾಡಿ ಯಾವ ರೀತಿ ಅವರ ಪೋಷಕರಿಗೆ ಸಹಕರಿಸುತ್ತಾರೆ ಎಂಬುದನ್ನು ನಾನು ಅವರಿಗೆ ವಿವರಿಸಿ ಹೇಳಿದೆ. ಅವರು ಹುಡುಗರಾಗಿರಲಿ ಅಥವಾ ಹುಡುಗಿಯರಾಗಿರಲಿ, ಅವರೆಲ್ಲರೂ ಆಟವಾಡಲು, ಓದಲು, ಬರೆಯಲು, ಪ್ರವಾಸ ಮಾಡಲು ಮತ್ತು ಆನಂದಿಸಲು ಬಯಸುತ್ತಾರೆ; ದೈಹಿಕ ವ್ಯತ್ಯಾಸಗಳನ್ನು ಹೊರತುಪಡಿಸಿ, ಹುಡುಗಿ ಮತ್ತು ಹುಡುಗನ ನಡುವೆ ಯಾವುದೇ ವ್ಯತ್ಯಾಸಗಳಿಲ್ಲ ಎಂಬುದನ್ನು ನಾನು ಅವರಿಗೆ ಅರ್ಥ ಮಾಡಿಸಿದೆ.

ಒಟ್ಟಿಗೆ ಕೆಲಸ ಮಾಡುವ ಮೌಲ್ಯವನ್ನು ಅವರಿಗೆ ಕಲಿಸಲು ನಾನು ಮಕ್ಕಳನ್ನು ವೃತ್ತಾಕಾರದಲ್ಲಿ ಒಬ್ಬ ಹುಡುಗ, ಒಬ್ಬಳು ಹುಡುಗಿಯಂತೆ ಕುಳಿತುಕೊಳ್ಳುವಂತೆ ಮಾಡಿದ್ದೇನೆ. ಗುಂಪು–ಗಳನ್ನು ರಚಿಸುವಾಗಲೂ, ನಾವು ಇದನ್ನು ಮನಸ್ಸಿನಲ್ಲಿಟ್ಟು–ಕೊಳ್ಳುತ್ತೇವೆ. ಇಂದು, ನನ್ನ ತರಗತಿಯಲ್ಲಿ ಯಾವುದೇ ಲಿಂಗ ಪ್ರತ್ಯೇಕತೆ ಇಲ್ಲ; ಮಕ್ಕಳು ಒಟ್ಟಿಗೆ ಆಡುತ್ತಾರೆ ಮತ್ತು ಪರಸ್ಪರ ಸಹಾನುಭೂತಿ ತೋರಿಸುತ್ತಾರೆ. ನಾನು ತರಬೇತಿ ಕಾರ್ಯಕ್ರಮಗಳಿಂದ ಅಥವಾ ಇನ್ನಾವುದೇ ಕೆಲಸದಿಂದ ತರಗತಿಗೆ ಹಿಂದಿರುಗಿದಾಗ, ವಿದ್ಯಾರ್ಥಿಗಳು ನನ್ನ ಅನುಪಸ್ಥಿತಿಯಲ್ಲಿ ಪರಸ್ಪರ ಕಲಿಸಿದ, ಕಲಿತ ಅನುಭವಗಳ ಬಗ್ಗೆ ನನಗೆ ಹೇಳುತ್ತಾರೆ. ನಾನು ಒಮ್ಮೆ ಅರ್ಧ ದಿನ ಶಾಲೆಯಲ್ಲಿರಲಿಲ್ಲ. ಮರುದಿನ ವಾಪಸ್ಸು ಬಂದಾಗ ಹರೀಶ್ ಗಾಯಗೊಂಡಿರುವುದು ಗೊತ್ತಾಯಿತು. ಅದು ಇತರ ಎಲ್ಲಾ ಮಕ್ಕಳಿಗೆ ಚಿಂತೆಗೆ ಪ್ರಮುಖ ಕಾರಣವಾಯಿತು, ಆದ್ದರಿಂದ, ನಾವು ಅವನನ್ನು ಭೇಟಿ ಮಾಡಲು ಹೋದೆವು. ಹರೀಶ್ ಗುಣಮುಖನಾಗುತ್ತಿರುವುದನ್ನು ಕಂಡು ಮಕ್ಕಳು ಸಂತಸಪಟ್ಟರು. ಅವನು ಸುರಕ್ಷಿತವಾಗಿರಲು ಮತ್ತು ತ್ವರಿತವಾಗಿ ಚೇತರಿಸಿಕೊಳ್ಳಲು ಏನು ಮಾಡಬೇಕು ಎಂದು ಎಲ್ಲರೂ ಸಲಹೆ ನೀಡಿದರು. ನಾವು ಹರೀಶ್ ಅವರ ಪೋಷಕರ ಬಳಿಯೂ ಮಾತನಾಡಿದೆವು, ಅವರು ಸಂತೋಷಪಟ್ಟರು.

ಮಕ್ಕಳು ತಮ್ಮ ಸಹಪಾಠಿಯ ಬಗ್ಗೆ ಕಾಳಜಿಯನ್ನು ತೋರಿಸುವುದನ್ನು ಕಂಡು ನಾನು ಆನಂದಿಸಿದೆ ಮತ್ತು ಪ್ರಶಂಸಿಸಿದೆ. ಏಕೆಂದರೆ ಅವರಲ್ಲಿ ಮಾನವೀಯ ಮೌಲ್ಯಗಳು ತುಂಬಿರುವುದನ್ನು ನಾನು ನೋಡಿದೆ, ಅದು ಲಿಂಗಬೇಧವನ್ನು ಲೆಕ್ಕಿಸದೆ ಅತ್ಯುತ್ತಮ ನಾಗರಿಕರಾಗಿ ಬೆಳೆಯಲು ಅವರನ್ನು ಸಶಕ್ತರನ್ನಾಗಿ ಮಾಡಬಲ್ಲದು.

## ಆರ್ಥಿಕ ಅಸಮಾನತೆ

ಶ್ರೀಮಂತ ಮತ್ತು ಬಡ ಕುಟುಂಬಗಳ ನಡುವಿನ ಅಸಮಾನತೆಯು ನನ್ನ ತರಗತಿಯಲ್ಲಿ ನಾನು ಗಮನಿಸಿದ ಮತ್ತೊಂದು ತಡೆಗೋಡೆಯಾಗಿದೆ. ಇದು ಮಕ್ಕಳ ಮೇಲೆ ಎಷ್ಟು ಪ್ರಭಾವ ಬೀರುತ್ತದೆ ಎಂದರೆ ಮಗುವೊಂದು ತನ್ನನ್ನು ಅಥವಾ ತನ್ನ ಕುಟುಂಬವನ್ನು ಯಾರೂ ಗೌರವಿಸುವುದಿಲ್ಲ, 'ನಾವು ಸ್ಥಿತಿವಂತರಲ್ಲ, ಹೀಗಾಗಿ ಯಾರೂ ನಮ್ಮನ್ನು ಭೇಟಿ ಮಾಡುತ್ತಿಲ್ಲ, ಶ್ರೀಮಂತರ ಮನೆಗೆ ಜನರು ಆಗಾಗ ಭೇಟಿ ನೀಡುತ್ತಾರೆ' ಎಂದು ಹೇಳುತ್ತಿತ್ತು. ಆದರೆ ಇದು ನಿಜವಲ್ಲ ಎಂದು ನಾನು ಮಕ್ಕಳಿಗೆ ತಿಳಿಸಿ ಹೇಳಿದೆ. 'ನಮ್ಮ ಶಾಲೆಯನ್ನು ಒಮ್ಮೆ ನೋಡಿ. ವಿವಿಧ ರೀತಿಯ ಮನೆಗಳಿಂದ ಮಕ್ಕಳು ಇಲ್ಲಿ ಓದಲು ಬರುತ್ತಾರೆ. ನಮ್ಮ ಶಾಲೆಯಲ್ಲಿ ಯಾವುದೇ ವಿದ್ಯಾರ್ಥಿ ತಾರತಮ್ಯಕ್ಕೆ ಒಳಗಾಗಿಲ್ಲ. ತರಗತಿಯಲ್ಲಿ ಎಲ್ಲರೂ ಒಂದೇ ರೀತಿಯಲ್ಲಿ ಕಲಿಯುತ್ತಾರೆ ಮತ್ತು ಮಾತನಾಡಲು ಮತ್ತು ಪ್ರಶ್ನೆಗಳನ್ನು ಕೇಳಲು ಒಂದೇ ರೀತಿಯ ಅವಕಾಶವನ್ನು ನೀಡಲಾಗುತ್ತದೆ' ಎಂದು ನಾನು ವಿವರಿಸಿದೆ. ನಂತರ, ಮಗುವಿನ ಕಲ್ಪನೆ ತಪ್ಪು ಎಂದು ಸಾಬೀತುಪಡಿಸಲು, ಕೆಲವು ದಿನಗಳ ನಂತರ, ಇತರ ವಿದ್ಯಾರ್ಥಿಗಳು ಮತ್ತು ನಾನು ಆ ಮಗುವಿನ ಮನೆಗೆ ಭೇಟಿ ನೀಡಿ ಅವರ ಕುಟುಂಬದೊಂದಿಗೆ ಸ್ವಲ್ಪ ಸಮಯ ಕಳೆದೆವು. ಮಗುವಿಗೆ ಇದರಿಂದಾಗಿ ಸಂತೋಷ–ವಾಯಿತು.

## ಜಾತಿ ಭೇದ

ಮಕ್ಕಳು ತಮ್ಮೊಳಗೆ ಜಾತಿಯ ಬಗ್ಗೆ ಮಾತನಾಡುತ್ತಾ, 'ನಾನು ಈ ಜಾತಿಗೆ ಸೇರಿದವನು, ಮತ್ತು ನೀವು ಆ ಜಾತಿಗೆ ಸೇರಿದವರು' ಎಂದು ಹೇಳುವುದು ನನ್ನ ತರಗತಿಯಲ್ಲಿ ನಾನು ಗಮನಿಸಿದ ಮೂರನೇ ತಡೆಗೋಡೆ. ಮಕ್ಕಳು ಇದನ್ನು ತಮ್ಮ ಮನೆಗಳಲ್ಲಿ ಗಮನಿಸಿ ಅನುಸರಿಸುತ್ತಿರಬಹುದು ಮತ್ತು ನಿರ್ದಿಷ್ಟ ಜಾತಿಗಳ ಸದಸ್ಯರು ಮಾತ್ರ ಕಮ್ಮಾರಿಕೆ, ಕ್ಷೌರಿಕ, ಗೋಪಾಲನೆ ಮುಂತಾದ ಕೆಲವು ಕೆಲಸಗಳನ್ನು ಮಾಡುತ್ತಾರೆ ಎಂದು ಅವರು ನಂಬುತ್ತಾರೆ. ಈ ತಾರತಮ್ಯದ ವ್ಯವಸ್ಥೆಯನ್ನು ಇನ್ನೂ ಹಳ್ಳಿಗಳಲ್ಲಿ ಕಾಣಬಹುದು. ಮಕ್ಕಳು ಸಮುದಾಯದ ಇತರರ ಈ ನಡವಳಿಕೆಯನ್ನು ಗಮನಿಸುತ್ತಾರೆ ಮತ್ತು ಅದನ್ನು ಅನುಕರಿಸಲು ಪ್ರಾರಂಭಿಸುತ್ತಾರೆ.

ನಾನು ಅವರೊಂದಿಗೆ ಸಮಸ್ಯೆಯನ್ನು ಚರ್ಚಿಸಿ, 'ಯಾರಾದರೂ ನಿರ್ದಿಷ್ಟ ಜಾತಿಗೆ ಸೇರಿದವರಾಗಿದ್ದರೆ ಏನು ವ್ಯತ್ಯಾಸ? ಮೊತ್ತಮೊದಲನೆಯದಾಗಿ ಮತ್ತು ಎಲ್ಲಕ್ಕಿಂತ ಮುಖ್ಯವಾಗಿ, ನಾವೆಲ್ಲರೂ ಮನುಷ್ಯರು' ಎಂದು ನಾನು ಅವರಿಗೆ ತಿಳಿಸಿದೆ. ನಾನು ಅವರಿಗೆ ಎಲ್ಲಾ ಮಾನವರು ಹೊಂದಿರುವ ಎರಡು ಕೈಗಳು, ಎರಡು ಕಾಲುಗಳು ಮತ್ತು ಇತರ ದೇಹದ ಭಾಗಗಳ ಉದಾಹರಣೆಗಳನ್ನು ನೀಡಿದೆ. ಮಕ್ಕಳು ಈ ಬಗ್ಗೆ ಯೋಚಿಸಲು ಪ್ರಾರಂಭಿಸಿದರು. 'ಛಲ ಮತ್ತು ಕೆಲಸ ಮಾಡುವ ಬಯಕೆ ಇರುವ ಯಾರಾದರೂ ಇಂದಿನ ಜಗತ್ತಿನಲ್ಲಿ ಏನು ಬೇಕಾದರೂ ಆಗಬಹುದು' ಎಂದು ನಾನು ಅವರಿಗೆ ಹೇಳಿದೆ. ನಮ್ಮ ಶಾಲೆಯಲ್ಲಿ ಎಲ್ಲಾ ವಿದ್ಯಾರ್ಥಿಗಳನ್ನು ಸಮಾನವಾಗಿ ನೋಡಲಾಗುತ್ತದೆ. ಶಾಲೆಯು ಯಾವುದೇ ಮಗುವಿನ ಜಾತಿಯ ಕುರಿತು ತಾರತಮ್ಯ ಮಾಡುವುದಿಲ್ಲ. ಎಲ್ಲಾ ಮಕ್ಕಳು ಒಟ್ಟಿಗೆ ಊಟ ಮಾಡುತ್ತಾರೆ, ಒಟ್ಟಿಗೆ ಅಧ್ಯಯನ ಮಾಡುತ್ತಾರೆ ಮತ್ತು ಒಟ್ಟಿಗೆ ಆಡುತ್ತಾರೆ. ಸಮಾಜದಲ್ಲಿ ಪ್ರತಿಯೊಬ್ಬರ ಕೆಲಸಗಳಿಗೂ ಸಮಾನ ಮೌಲ್ಯವಿದೆ ಎಂದು ಅವರು ಅರ್ಥಮಾಡಿಕೊಂಡಿದ್ದಾರೆ.

ಎಲ್ಲಾ ಕೆಲಸಗಳನ್ನು ನಾವೇ ಮಾಡಲು ಸಾಧ್ಯವಿಲ್ಲದ ಕಾರಣ, ಕಬ್ಬಿಣದಿಂದ ವಸ್ತುಗಳನ್ನು ತಯಾರಿಸುವ ಕಮ್ಮಾರರು ಒಬ್ಬ ರೈತ ಅಥವಾ ಕುರುಬನಷ್ಟೇ ಮುಖ್ಯ. ನಮ್ಮ ಕೆಲಸವನ್ನು ಪೂರ್ಣಗೊಳಿಸಲು ಮತ್ತು ಬದುಕಲು ನಾವು ಇತರರ ಕೆಲಸವನ್ನು ಅವಲಂಬಿಸುತ್ತೇವೆ ಎಂಬುದನ್ನು ಅವರಿಗೆ ಅರ್ಥ ಮಾಡಿಸಿದೆ,

ಇಂತಹ ಹಲವು ಚರ್ಚೆಗಳ ನಂತರ ನಮ್ಮ ಶಾಲಾ ಮಕ್ಕಳಲ್ಲಿ ಜಾತಿ ಭೇದ ಕಾಣುತ್ತಿಲ್ಲ. ಮಕ್ಕಳ ಪೋಷಕರು ನಮ್ಮ ಶಾಲೆಗೆ ಭೇಟಿ ನೀಡಿದಾಗ, ಅವರೆಲ್ಲರನ್ನೂ ಸಮಾನವಾಗಿ ನೋಡಲಾಗುತ್ತದೆ. ನಾವು ಶಿಕ್ಷಕರು ಯಾರಿಗೂ ತಾರತಮ್ಯ ಮಾಡುವುದಿಲ್ಲ ಎಂಬುದನ್ನು ಇದು ತೋರಿಸುತ್ತದೆ.

## ಸಾಮಾಜಿಕ ಬಹಿಷ್ಕಾರ

ನಾನು ಸಾಮಾಜಿಕ ಬಹಿಷ್ಕಾರದ (social exclusion) ಪ್ರಕರಣವನ್ನು ಇಲ್ಲಿ ನೋಡಿದೆ. ಸಾಮಾಜಿಕ ಬಹಿಷ್ಕಾರ ಎಂದರೆ ಹಳ್ಳಿಯ ಜನರು ಕೆಲವು ಗ್ರಾಮಸ್ಥರನ್ನು ಸಮಾಜದಿಂದ ಹಳ್ಳಿಯಿಂದ ಹೊರಗಿಡುವುದು. ಈ ಹೊರಗಿಡುವಿಕೆಯು ಮಕ್ಕಳ ಮೇಲೆ ಗಮನಾರ್ಹ ಪರಿಣಾಮ ಬೀರುತ್ತದೆ, ಅವರ ಗ್ರಹಿಕೆಗಳು ಮತ್ತು ಆಲೋಚನೆಗಳನ್ನು ಬದಲಾಯಿಸುತ್ತದೆ. ಮಕ್ಕಳು ಅಂತಹ ವಿಷಯಗಳ ಬಗ್ಗೆ ಸ್ವತಃ ಯೋಚಿಸಲು ಸಾಧ್ಯವಾಗುವುದಿಲ್ಲ; ಅವರು ತಮ್ಮ ಕುಟುಂಬದ ಸದಸ್ಯರು ಮತ್ತು ಇತರ ಹಿರಿಯರನ್ನು ಗಮನಿಸುತ್ತಾರೆ ಮತ್ತು ಅವರನ್ನು ಅನುಸರಿಸಲು ಪ್ರಾರಂಭಿಸುತ್ತಾರೆ. ನನ್ನ ತರಗತಿಯ ಹುಡುಗಿ ರಾಗಿಣಿಯ ಕುಟುಂಬವನ್ನು ಸಮಾಜದಿಂದ ದೂರವಿಡಲಾಯಿತು ಮತ್ತು ಇದರ ಪರಿಣಾಮವಾಗಿ, ಇತರ ಮಕ್ಕಳೊಂದಿಗೆ, ಅವಳ ನೆರೆಹೊರೆಯ ಮತ್ತು ನಮ್ಮ ತರಗತಿಯಲ್ಲಿಯೇ ಓದುವ ಆಕೆಯ ಉತ್ತಮ ಸ್ನೇಹಿತೆ ಈ ಮೊದಲು ಪೆನ್ನುಗಳು, ನೋಟುಬುಕ್‌ಗಳು ಮತ್ತು ಬಣ್ಣದ ಪೆನ್ಸಿಲ್‌ಗಳು ಇತ್ಯಾದಿ ವಸ್ತುಗಳನ್ನು ಹಂಚಿಕೊಳ್ಳುತ್ತಿದ್ದವಳು, ಇವುಗಳನ್ನು ಅವಳೊಂದಿಗೆ ಹಂಚಿಕೊಳ್ಳುವುದನ್ನು ನಿಲ್ಲಿಸಿದಳು; ಅವಳೊಂದಿಗೆ ಆಟವಾಡುವುದನ್ನು, ಓದುವುದನ್ನು ಮತ್ತು ಅವಳೊಂದಿಗೆ ಕುಳಿತುಕೊಳ್ಳುವುದನ್ನು ನಿಲ್ಲಿಸಿದಳು. ಅವರು ಯಾಕೆ ಹೀಗೆ ವರ್ತಿಸುತ್ತಿದ್ದಾರೆ ಎಂದು ನಾನು ಮಕ್ಕಳನ್ನು ಕೇಳಿದೆ. ರಾಗಿಣಿಯ ಕುಟುಂಬವನ್ನು ಹಳ್ಳಿಯಲ್ಲಿ ಬಹಿಷ್ಕರಿಸಲಾಗಿದೆ ಮತ್ತು ಅವರು ಹಳ್ಳಿಯಲ್ಲಿ ಬೇರೆಯವರನ್ನು ಭೇಟಿ ಮಾಡುವುದನ್ನು ಅಥವಾ ಬೇರೆಯವರೊಂದಿಗೂ ಮಾತನಾಡುವುದನ್ನು ನಿಷೇಧಿಸಲಾಗಿದೆ ಎಂದು ನಾನು ಅವರಿಂದ ತಿಳಿದುಕೊಂಡೆ. ಇದು ನನಗೆ ಸಂಪೂರ್ಣ ಆಘಾತವನ್ನುಂಟು ಮಾಡಿತು, ನಾನು ಅವರು ಮಾಡುತ್ತಿರುವುದು ತಪ್ಪು ಎಂದು ಮಕ್ಕಳಿಗೆ ತಿಳಿಹೇಳಿದೆ. 'ನೋಡಿ ರಾಗಿಣಿ ನಮ್ಮ ಶಾಲೆಗೆ ಓದಲು ಬರುತ್ತಿದ್ದಾಳೆ. ನಾವು ಆಕೆಗೆ ಯಾವುದೇ ರೀತಿಯ ತಾರತಮ್ಯ ಮಾಡುತ್ತಿಲ್ಲ. ನಾವು ಅವಳನ್ನು ಓದುವಾಗ, ಬರೆಯುವಾಗ ಮತ್ತು ಆಟವಾಡುವಾಗ ಇತರ ಮಕ್ಕಳೊಂದಿಗೆ ಕೂರಿಸುತ್ತೇವೆ. ಅವರು ಒಟ್ಟಿಗೆ ಊಟ ಮಾಡುತ್ತಾರೆ, ಅವಳ ಮಾತನ್ನು ಕೇಳುತ್ತಾರೆ ಮತ್ತು ಪ್ರತಿಕ್ರಿಯಿಸುತ್ತಾರೆ. ಅವಳೂ ಮನುಷ್ಯಳೇ. ಮಾನವೀಯ ಮೌಲ್ಯಗಳನ್ನು ಗಮನದಲ್ಲಿಟ್ಟುಕೊಂಡು ನಾವು ಅವಳನ್ನು ಪ್ರೀತಿ ಮತ್ತು ಗೌರವದಿಂದ ನಡೆಸಿಕೊಳ್ಳಬೇಕು. ಯಾರಾದರೂ ನಿಮ್ಮನ್ನು ಹೀಗೆ ನಡೆಸಿಕೊಂಡರೆ ನಿಮಗೆ ಹೇಗನಿಸುತ್ತದೆ?' ಎಂದು ನಾನು ಮಕ್ಕಳಿಗೆ ಕೇಳಿದೆ. ಮಕ್ಕಳು ಅರ್ಥ ಮಾಡಿಕೊಂಡು ಮತ್ತೆ ರಾಗಿಣಿ ಜೊತೆ ಸ್ನೇಹ ಬೆಳೆಸಿದರು. ಒಂದು ದಿನ ಇಡೀ ತರಗತಿಯ ಮಕ್ಕಳೊಂದಿಗೆ ರಾಗಿಣಿಯವರ ಮನೆಗೆ ಹೋಗಿದ್ದೆವು. ನಾವು ಅವಳ ಹೆತ್ತವರೊಂದಿಗೆ ಹರಟೆ ಹೊಡೆದೆವು ಮತ್ತು ಚಹಾ ಸೇವಿಸಿದೆವು. ಸಾಮಾಜಿಕ ಬಹಿಷ್ಕಾರಕ್ಕೆ ನಮ್ಮ ನಿರಾಕರಣೆಯನ್ನು ಒತ್ತಿಹೇಳಲು, ನಾವು ಹಳ್ಳಿಯ ಮತ್ತೊಂದು ಬಹಿಷ್ಕೃತ ಕುಟುಂಬದ ಮನೆಯಿಂದ ಶಿಕ್ಷಕರ ಚಹಾಕ್ಕಾಗಿ ಹಾಲು ತರಲು ಮಕ್ಕಳಿಗೆ ಹೇಳಿದೆವು. ಮೊದಮೊದಲು ಹಿಂದೇಟು ಹಾಕುತ್ತಿದ್ದ ಅವರು ಈಗ ಆ ಕುಟುಂಬದಿಂದ ಶಾಲೆಗೆ ನಿತ್ಯ ಹಾಲು ತರುತ್ತಾರೆ. ಈ ಎಲ್ಲಾ ಘಟನೆಗಳು ಮಕ್ಕಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು, ಅವರ ಸಾಮಾಜಿಕ ಮತ್ತು ಆರ್ಥಿಕ ಸಿದ್ಧಾಂತಗಳ ಬಗ್ಗೆ ತಿಳಿದುಕೊಳ್ಳಲು ಮತ್ತು ತಾರತಮ್ಯವನ್ನು ಸೃಷ್ಟಿಸುವ ಸಾಮಾಜಿಕ ವರ್ತನೆಗಳನ್ನು ಪರಿಗಣಿಸಲು ನನಗೆ ಉತ್ತಮ ಅವಕಾಶವನ್ನು ಒದಗಿಸಿವೆ. ಸಮಾಜದಲ್ಲಿನ ಪ್ರತ್ಯೇಕತೆಯು ಮಕ್ಕಳಲ್ಲಿ ಅಧೀನತೆಯ ಭಾವವನ್ನು ಉಂಟು ಮಾಡುತ್ತದೆ ಮತ್ತು ಸ್ವತಂತ್ರವಾಗಿ ಯೋಚಿಸುವುದನ್ನು ತಡೆಯುತ್ತದೆ. ಪ್ರತಿಯೊಬ್ಬರ ಬೆಳವಣಿಗೆ ಮತ್ತು ಪ್ರಗತಿಯನ್ನು ಖಾತ್ರಿಪಡಿಸುವ ಕರುಣೆ, ಸಹಾನುಭೂತಿ ಮತ್ತು ಸಹಭಾಗಿತ್ವದ ಮೌಲ್ಯಗಳನ್ನು ಕಲಿಸುವುದು ಶಿಕ್ಷಕರಾದ ನಮ್ಮ ಸಾಮೂಹಿಕ ಜವಾಬ್ದಾರಿಯಾಗಿದೆ.

* ಮಕ್ಕಳ ಗುರುತನ್ನು ರಕ್ಷಿಸಲು ಹೆಸರುಗಳನ್ನು ಬದಲಾಯಿಸಲಾಗಿದೆ.



**ಸಾವಿತ್ರಿ ಸಾಹು** ಅವರು ಸರ್ಕಾರಿ ಪ್ರಾಥಮಿಕ ಶಾಲೆ ಜಾಮ್‌ಗಾಂವ್ (ಬೆಮೆತಾರಾ ಜಿಲ್ಲೆ, ಛತ್ತೀಸ್ಗಢ)ನಲ್ಲಿ ಸಹಾಯಕ ಶಿಕ್ಷಕಿಯಾಗಿದ್ದಾರೆ. ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿ ಮತ್ತು ಡಿಪ್ಲೊಮಾ ಪಡೆದಿರುವ ಸಾವಿತ್ರಿ ಅವರು, 15 ವರ್ಷಗಳ ಪ್ರಾಥಮಿಕ ಶಾಲಾ ಬೋಧನಾ ಅನುಭವವನ್ನು ಹೊಂದಿದ್ದಾರೆ. ಭಾಷೆಗಳು ಮತ್ತು ಗಣಿತ ಬೋಧನೆ ಸಾವಿತ್ರಿ ಅವರ ಆಸಕ್ತಿಯಾಗಿದ್ದು, ವಿಶೇಷವಾಗಿ ಕ್ರಿಯಾ ಸಂಶೋಧನೆಯಲ್ಲಿ (action research) ಒಲವು ಹೊಂದಿದ್ದಾರೆ. ಶಿಕ್ಷಕಿಯಾಗಿ ಅವರು ಶೈಕ್ಷಣಿಕ ಚಟುವಟಿಕೆಗಳಲ್ಲಿ ಮಕ್ಕಳಲ್ಲಿ ಆಸಕ್ತಿಯನ್ನು ಮೂಡಿಸಲು ಇಷ್ಟಪಡುತ್ತಾರೆ, ಗ್ರಾಮೀಣ ಪ್ರದೇಶಗಳಲ್ಲಿನ ಪರಿಸರದಲ್ಲಿರುವ ವಿವಿಧ ಸಾಮಾಜಿಕ ಅಡೆತಡೆಗಳನ್ನು ತೊಡೆಯಲು ಪ್ರಯತ್ನಿಸುತ್ತಾರೆ ಮತ್ತು ಚರ್ಚೆಗಳ ಮೂಲಕ ಮೌಲ್ಯಯುತ ಶಿಕ್ಷಣವನ್ನು ನೀಡುತ್ತಾರೆ. ಅವರನ್ನು savitrisahu001989@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಶ್ರೀನಿಧಿ ಅಡಿಗ** | ಪರಿಶೀಲನೆ: **ನಾಗಮಣಿ ಎಸ್. ಎನ್.**

ಮಕ್ಕಳ ಸಾಮಾಜಿಕ ಮತ್ತು ಭಾವನಾತ್ಮಕ ಅಗತ್ಯಗಳನ್ನು ಕಲಿಕೆಯ ಪರಿಕಲ್ಪನೆಗಳು ಮತ್ತು ಫಲಿತಾಂಶಗಳಲ್ಲಿ ಸಂಯೋಜಿಸಬೇಕು. ಇದನ್ನು ಉತ್ತೇಜಿಸಲು ಹಲವಾರು ಶಿಕ್ಷಣ ಪದ್ಧತಿಗಳನ್ನು ಅಳವಡಿಸಿಕೊಳ್ಳಬಹುದು. ಇವುಗಳಲ್ಲಿ ಪ್ರಮುಖವಾದವುಗಳು ನಾಟಕ, ಕಲೆ, ಗುಂಪು ಚಟುವಟಿಕೆ, ಸಮ್ಮತಿ ಮತ್ತು ಅಸಮ್ಮತಿ ವ್ಯಕ್ತಪಡಿಸಲು ಅವಕಾಶವಿರುವ ಚಟುವಟಿಕೆಗಳು, ಜೋರಾಗಿ ಓದುವಿಕೆ, ಸಕ್ರಿಯ ಆಲಿಸುವಿಕೆ, ಮುಕ್ತ ಚರ್ಚೆಗಳು ಮತ್ತು ಸ್ವತಂತ್ರ ಬರವಣಿಗೆ. ಇಂತಹ ಚಟುವಟಿಕೆಗಳು ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಸಹಕಾರಿಯಾಗುತ್ತವೆ.

ಚಿಕ್ಕವೀರೇಶ ಎಸ್ ವಿ, (ಪ್ರಾಜೆಕ್ಟ್ ವರ್ಕ್) ನಿಯೋಜಿತ ಕಾರ್ಯದ ಮೂಲಕ ಸಾಮಾಜಿಕ-ಭಾವನಾತ್ಮಕ ಕಲಿಕೆ, ಪು 27

# ಭಾವನೆಗಳನ್ನು ನಿರ್ವಹಿಸಲು ಕೆಲವು ಸರಳ ಚಟುವಟಿಕೆಗಳು

ಶಾಲಿನಿ ಸೋಲಂಕಿ

ಮಕ್ಕಳು ತಮ್ಮ ಭಾವನೆಗಳನ್ನು ನಿಯಂತ್ರಿಸುವ ಹಾಗೂ ಇತರರೊಂದಿಗೆ ಬೆರೆಯುವ ಅಥವಾ ಒತ್ತಡವನ್ನು ನಿಭಾಯಿಸುವ ಸಾಮರ್ಥ್ಯದೊಂದಿಗೆ ಪ್ರಪಂಚಕ್ಕೆ ಬರುವುದಿಲ್ಲ. ಆದಾಗ್ಯೂ, ಒತ್ತಡ ಮತ್ತು ಭಾವನೆಗಳು ಜೀವನದ ನೈಸರ್ಗಿಕ ಭಾಗವಾಗಿರುವುದರಿಂದ, ಇವುಗಳನ್ನು ನಿಭಾಯಿಸಲು ಕಲಿಯುವುದು ಬಹಳ ಮುಖ್ಯ. ಕೆಳಗೆ ತಿಳಿಸಲಾದ ಚಟುವಟಿಕೆಗಳು ಮಕ್ಕಳು ತಮ್ಮ ಭಾವನೆಗಳನ್ನು ನಿಯಂತ್ರಿಸಲು ಅಗತ್ಯವಾದ ತಿಳುವಳಿಕೆ, ಗುಣಸ್ವಭಾವ ಮತ್ತು ಸಾಮರ್ಥ್ಯಗಳನ್ನು ಪಡೆದುಕೊಳ್ಳಲು; ಇತರರ ಬಗ್ಗೆ ಸಹಾನುಭೂತಿ ಹೊಂದಲು, ಗುರಿಗಳನ್ನು ಹೊಂದಿಸಲು ಮತ್ತು ಸಾಧಿಸಲು; ಸಮತೋಲಿತ ನಿರ್ಧಾರಗಳನ್ನು ತೆಗೆದುಕೊಳ್ಳಲು; ಮತ್ತು ಆರೋಗ್ಯಕರ ಸಂಬಂಧಗಳನ್ನು ನಿರ್ಮಿಸಲು ಸಹಾಯ ಮಾಡುತ್ತವೆ.

## ಧನಾತ್ಮಕ ಸ್ವಯಂ - ಮಾತು

ಧನಾತ್ಮಕ ಸ್ವಯಂ–ಮಾತು (Positive self-talk) ತಮ್ಮ ಬಗ್ಗೆ ತಾವೇ ಕರುಣೆ ತೋರುವುದನ್ನು ಸೂಚಿಸುತ್ತದೆ. ಇದು ಮಕ್ಕಳಿಗೆ ತಮ್ಮ ಒಳಗಿನ ಬದಲಾಯಿಸಲು ಸಹಾಯ ಮಾಡುವ ಒಂದು ಅಂಶವಾಗಿದೆ. ಉದಾಹರಣೆಗೆ, 'ಮುಂದಿನ ಬಾರಿ ನಾನು ಉತ್ತಮವಾಗಿ ಮಾಡಬಹುದು' ಅಥವಾ 'ನನ್ನ ತಪ್ಪುಗಳಿಂದ ನಾನು ಕಲಿಯಲು ಬಯಸುತ್ತೇನೆ', 'ಅವುಗಳಿಂದ ಹಿಮ್ಮೆಟ್ಟಿಸಲು ಸಾಧ್ಯವಿಲ್ಲ.' ಧನಾತ್ಮಕ ಸ್ವಯಂ– ಮಾತು ಒತ್ತಡವನ್ನು ಎದುರಿಸಲು ಸಹಾಯ ಮಾಡುತ್ತದೆ; ಆತಂಕ ಮತ್ತು ಆತ್ಮವಿಶ್ವಾಸವನ್ನು ಹೆಚ್ಚಿಸುತ್ತದೆ. ನಾನು ನನ್ನ ವಿದ್ಯಾರ್ಥಿಗಳಿಗೆ ಈ ವಿಷಯಕ್ಕೆ ಸಂಬಂಧಿಸಿದ ಮೂರು ಚಟುವಟಿಕೆಗಳನ್ನು ನೀಡಿದೆ.



| Negatives | Positives |
|---|---|
| I can't | I can |
| I won't | I will |
| I will try | I will do it |
| I am not confident about... | I'm confident |
| I am unsure about... | I'm sure |
| My life is boring | My life is the best |
| I don't look good | I look the best |
| I don't deserve attention or success | I desere attention and Success |
| I am powerless | I am powerfull |

ಚಿತ್ರ 1. ಧನಾತ್ಮಕ ಮತ್ತು ಋಣಾತ್ಮಕ ಹೇಳಿಕೆಗಳನ್ನು ಹೊಂದಿರುವ ಕಾರ್ಯಹಾಳೆ.

ಮೊದಲನೆಯದಾಗಿ, ಇದು ಧನಾತ್ಮಕ ಅಥವಾ ಋಣಾತ್ಮಕ ಸ್ವಯಂ-ಮಾತು ಎಂದು ನಿರ್ಧರಿಸಲು, ನಾನು ಅವರಿಗೆ ವಿವಿಧ ಉದಾಹರಣೆಗಳನ್ನು ನೀಡಿದ್ದೇನೆ, ಉದಾಹರಣೆಗೆ 'ನಾನು ವಿಫಲನಾಗಿದ್ದೇನೆ ಮತ್ತು ನನಗೆ ಈ ಚಟುವಟಿಕೆಯನ್ನು ಪೂರ್ಣಗೊಳಿಸಲು ಸಾಧ್ಯವಾಗುವುದಿಲ್ಲ' ಅಥವಾ 'ನಾನು ಈ ವಿಜ್ಞಾನ ಮಾದರಿಯನ್ನು ನಿರ್ಮಿಸುವ ಇಚ್ಛೆಯನ್ನು ಹೊಂದಿದ್ದೇನೆ.' ಇದರಿಂದಾಗಿ ಅವರು ಋಣಾತ್ಮಕ ಮತ್ತು ಧನಾತ್ಮಕ ಸ್ವಯಂ- ಮಾತಿನ ನಡುವೆ ವ್ಯತ್ಯಾಸವನ್ನು ಗುರುತಿಸಲು ಸಾಧ್ಯವಾಯಿತು. ಎರಡನೆಯದು ಅವರ ಬೆಂಚ್‌ನಲ್ಲಿ ಅವರ ಜೊತೆಗೆ ಕುಳಿತುಕೊಳ್ಳುವ ಜೊತೆಗಾರರೊಂದಿಗೆ ಮಾಡಿದ ಚಟುವಟಿಕೆಯಾಗಿದೆ. ಈ ಚಟುವಟಿಕೆಯಲ್ಲಿ, ಅವರ ಜೊತೆಗಾರರು ಪರಸ್ಪರರ ಋಣಾತ್ಮಕ ಸ್ವಯಂ-ಚರ್ಚೆಯನ್ನು ಧನಾತ್ಮಕ ಸ್ವಯಂ-ಚರ್ಚೆಯೊಂದಿಗೆ ಬದಲಿಸಬೇಕಾಗಿತ್ತು.

ಉದಾಹರಣೆಗೆ:
ಮೊದಲನೇ ಜೊತೆಗಾರ (ಋಣಾತ್ಮಕ ಸ್ವಯಂ-ಚರ್ಚೆ): ನಾನು ಈ ಇಂಗ್ಲಿಷ್ ಪರೀಕ್ಷೆಯಲ್ಲಿ ಅನುತ್ತೀರ್ಣನಾಗುತ್ತೇನೆ. ನನ್ನ ಹೆತ್ತವರು ನನ್ನನ್ನು ಬೈಯುತ್ತಾರೆ.

ಎರಡನೇ ಜೊತೆಗಾರ (ಧನಾತ್ಮಕ ಸ್ವಯಂ-ಚರ್ಚೆ): ನಾನು ಪರೀಕ್ಷೆಗಾಗಿ ಶ್ರದ್ಧೆಯಿಂದ ಅಧ್ಯಯನ ಮಾಡಿದ್ದೇನೆ ಮತ್ತು ಈ ಪರೀಕ್ಷೆಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸಲು ಅದು ನನಗೆ ಸಹಾಯ ಮಾಡುತ್ತದೆ.

ಈ ಚಟುವಟಿಕೆಯ ನಂತರ, ನಾವು ಚರ್ಚೆಯನ್ನು ನಡೆಸಿದೆವು. ನಾನು ಅವರಿಗೆ ಋಣಾತ್ಮಕ ಸ್ವಯಂ-ಮಾತನಾಡುವಿಕೆಯ ಉದಾಹರಣೆಗಳನ್ನು ನೀಡುತ್ತಾ ಪ್ರಶ್ನೆಗಳನ್ನು ಹಾಕಿದೆ ಮತ್ತು, 'ಈ ವಾಕ್ಯದ ಧ್ವನಿಯು ಧನಾತ್ಮಕವಾಗಿದ್ದರೆ ಅದರ ವಿರುದ್ಧದ ಧ್ವನಿಯು ಹೇಗೆ ಧ್ವನಿಸುತ್ತದೆ?' ಎಂದು ಅವರಿಗೆ ಪ್ರಶ್ನೆಗಳನ್ನು ಕೇಳಿದೆ. ಸಕಾರಾತ್ಮಕ ಸ್ವಯಂ-ಚರ್ಚೆಯ ಪ್ರಯೋಜನಗಳು ಮತ್ತು ನಕಾರಾತ್ಮಕ ಸ್ವಯಂ-ಚರ್ಚೆಯ ನ್ಯೂನತೆಗಳ ಕುರಿತು ನಾವು ಚರ್ಚೆಯನ್ನು ನಡೆಸಿದ್ದೇವೆ.

ಮುಂದೆ, ಅವರ ದೈನಂದಿನ ಜೀವನದ ವಿವಿಧ ಅಂಶಗಳಲ್ಲಿ ಧನಾತ್ಮಕ ಚಿಂತನೆಯನ್ನು ಉತ್ತೇಜಿಸಲು, ನಾನು ಅವರಿಗೆ ಕೆಲವು ನಕಾರಾತ್ಮಕ ಹೇಳಿಕೆಗಳನ್ನು ಒಳಗೊಂಡ ಕಾರ್ಯಹಾಳೆಯನ್ನು ನೀಡಿದೆ. ಮತ್ತು ಆ ಹೇಳಿಕೆಗಳನ್ನು ಧಣಾತ್ಮಕ ಹೇಳಿಕೆಗಳಾಗಿ ಬದಲಾಯಿಸಲು ಕೇಳಿದೆ. ಈ ಕಾರ್ಯಹಾಳೆಯು, ನಮ್ಮ ಬಗ್ಗೆ ಋಣಾತ್ಮಕವಾಗಿ




ಚಿತ್ರ 2. ಮಕ್ಕಳು ಕೆಲವು ಸರಳ ಆಯ್ಕೆಗಳನ್ನು ಮಾಡಿರುವ ಕಾರ್ಯಹಾಳೆ.

ಮಾತನಾಡುವಾಗ, ನಮ್ಮ ಗುರಿಗಳನ್ನು ಅನುಸರಿಸಲು ಮತ್ತು ಸಾಧಿಸಲು ನಮ್ಮನ್ನು ನಾವು ತಡೆಯುತ್ತೇವೆ ಎಂಬ ಕಲ್ಪನೆಯನ್ನು ಒತ್ತಿಹೇಳುತ್ತದೆ. ಇದು ನಾವು ಹೊಸ ಪ್ರಯತ್ನಗಳನ್ನು ಮಾಡುವುದನ್ನು ಅಥವಾ ನಾವು ಆನಂದಿಸಬಹುದಾದ ಚಟುವಟಿಕೆಗಳಲ್ಲಿ ತೊಡಗುವುದನ್ನು ತಡೆಯಬಹುದು.

## ನಿರ್ಣಯ-ತೆಗೆದುಕೊಳ್ಳುವಿಕೆ

ನಾನು ರಾಬರ್ಟ್ ಫ್ರಾಸ್ಟ್ ಅವರ ಕವನಗಳಲ್ಲಿ ಒಂದಾದ 'ದಿ ರೋಡ್ ನಾಟ್ ಟೇಕನ್' ಕವನವನ್ನು ನನ್ನ ಏಳನೇ ತರಗತಿಯ ವಿದ್ಯಾರ್ಥಿಗಳಿಗೆ ನೀಡಿದೆ. ವಿಶೇಷವಾಗಿ ಈ ಕವಿತೆಯ ಕೊನೆಯ ಮೂರು ಸಾಲುಗಳು ವಿಭಿನ್ನವಾಗಿ ನಿಲ್ಲುತ್ತವೆ: ಕಾಡಿನಲ್ಲಿ ದಾರಿಗಳು ಎರಡಾಗಿ ಕವಲೊಡೆದವು, ಮತ್ತು ನಾನು–/ ನಾನು ಈವರೆಗೆ ಕಡಿಮೆ ಪಯಣಿಗರು ಪ್ರಯಾಣಿಸಿರುವ ಹಾದಿಯನ್ನು ತೆಗೆದುಕೊಂಡೆ ಮತ್ತು ಅದು ಎಲ್ಲ ಬದಲಾವಣೆಗಳನ್ನು ಮಾಡಿತು. ಈ ಸಾಲುಗಳಲ್ಲಿ, ರಾಬರ್ಟ್ ಫ್ರಾಸ್ಟ್ ರಸ್ತೆಯ ಕವಲುದಾರಿಗೆ ಬಂದಾಗ, ಅವನು ತನ್ನ ಜೀವನದ ಹಾದಿಯನ್ನು ಶಾಶ್ವತವಾಗಿ ಬದಲಾಯಿಸಬಲ್ಲ ಎರಡು ಆಯ್ಕೆಗಳ ನಡುವೆ ಒಂದನ್ನು ಆರಿಸಿಕೊಳ್ಳಬೇಕಾಗಿತ್ತು. ನಾವೆಲ್ಲರೂ ಆಯ್ಕೆಗಳು ಮತ್ತು ಅವಕಾಶಗಳೆರಡನ್ನೂ ಎದುರಿಸುತ್ತಲೇ ಬರುತ್ತೇವೆ ಮತ್ತು ನಮ್ಮ ಜೀವನದುದ್ದಕ್ಕೂ ಅವುಗಳ ನಡುವೆ ಯಾವುದು ಉತ್ತಮ ಎಂಬ ನಿರ್ಧಾರಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ನಿರ್ಧಾರ ತೆಗೆದುಕೊಳ್ಳುವಲ್ಲಿ ನೀಡುವ ಆರಂಭಿಕ ಸೂಚನೆಯು ಮಕ್ಕಳು ತಪ್ಪು ಮತ್ತು ಆತುರದ ನಿರ್ಧಾರಗಳನ್ನು ಮಾಡುವುದನ್ನು ತಪ್ಪಿಸಲು ಸಹಾಯ ಮಾಡುತ್ತದೆ ಮತ್ತು ಅವರು ಉತ್ತಮ ತಿಳುವಳಿಕೆಯುಳ್ಳ ಆಯ್ಕೆಗಳನ್ನು ಮಾಡಲು ಸಹಾಯ ಮಾಡುತ್ತದೆ.

ನಾವು ಎರಡು ಚಟುವಟಿಕೆಗಳನ್ನು ಮಾಡಿದೆವು. ಮೊದಲಿಗೆ, ನಾನು ನನ್ನ ವಿದ್ಯಾರ್ಥಿಗಳಿಗೆ ಅವರ ಆದ್ಯತೆಯ ಆಟಗಳ ಬಗ್ಗೆ ಪ್ರಶ್ನಿಸಿದೆ. ಕೆಲವು ವಿದ್ಯಾರ್ಥಿಗಳು ಡಾಡ್ಜ್ ಬಾಲ್‌ಗೆ ಆದ್ಯತೆ ನೀಡಿದರು, ಇತರರು ಫುಟ್‌ಬಾಲ್ ಆಡಲು ಆಸಕ್ತಿ ವ್ಯಕ್ತಪಡಿಸಿದರು. ಅವರು ತಮ್ಮ ನಡುವೆ ಆಡಲು ಬಯಸುವ ಆಟವನ್ನು ಆಯ್ಕೆ ಮಾಡಲು ನಾನು ಅವರನ್ನು ಕೇಳಿದೆ. ತರಗತಿಯಲ್ಲಿರುವ ಪ್ರತಿಯೊಬ್ಬರಿಗೂ ಧ್ವನಿ ಇದೆ ಮತ್ತು ಅದು ಕೇಳಿಸುತ್ತಿದೆ ಎಂಬುದನ್ನು ನಾನು ಖಚಿತಪಡಿಸಿ–ಕೊಳ್ಳಬೇಕಾಗಿತ್ತು. ನಮ್ಮ ಪ್ರಜಾಸತ್ತಾತ್ಮಕ ಸಮಾಜದಲ್ಲಿ ಲಿಂಗ ಮತ್ತು ಇತರ ರೀತಿಯ ತಾರತಮ್ಯಕ್ಕೆ ಯಾವುದೇ ಸ್ಥಾನವಿಲ್ಲ ಎಂದು ತೋರಿಸಲು ನಡೆಸಲಾದ ಎಲ್ಲಾ ಚರ್ಚೆಗಳು ಮತ್ತು ಉಪಕ್ರಮಗಳ ಹೊರತಾಗಿಯೂ, ನನ್ನ ಮುಖ್ಯ




ಚಿತ್ರ 3. ವಿದ್ಯಾರ್ಥಿಯೊಬ್ಬಳ ಒತ್ತಡದ ಬಕೇಟ್‌ನ ಚಿತ್ರ

ಸಮಸ್ಯೆಯೆಂದರೆ ಹುಡುಗಿಯರು ಹುಡುಗರಂತೆ ಬಹಿರಂಗವಾಗಿ ಮಾತನಾಡದಿರುವುದು. ಆದರೆ, ಈ ಬಾರಿ ಬಾಲಕಿಯರು ವ್ಯಾಪಕ ಚರ್ಚೆ ಹಾಗೂ ನಿರ್ಧಾರ ತೆಗೆದುಕೊಳ್ಳಲು ಮತದಾನ ಬಳಿಕ ಡಾಡ್ಜ್ ಬಾಲ್ ಆಡುವ ಇಚ್ಛೆಯನ್ನು ವ್ಯಕ್ತಪಡಿಸಿದರು. ವಿದ್ಯಾರ್ಥಿಗಳು ಎಷ್ಟು ಮತ್ತು ಯಾವ ಆಧಾರದ ಮೇಲೆ ತಂಡಗಳನ್ನು ರಚಿಸಬೇಕೆಂದು ನಿರ್ಧರಿಸಲು ನಂತರ ಭೇಟಿಯಾದರು. ಇದೆಲ್ಲವೂ ಅವರು ಸ್ವತಂತ್ರವಾಗಿ ಪೂರ್ಣಗೊಳಿಸಿದ ನಿರ್ಧಾರ ತೆಗೆದುಕೊಳ್ಳುವ ಪ್ರಕ್ರಿಯೆಯ ಭಾಗವಾಗಿತ್ತು; ಇದರಲ್ಲಿ ನಾನು ಯಾವುದೇ ಪಾತ್ರವನ್ನು ವಹಿಸಿಲ್ಲ. ಇದರ ನಂತರ, ಅವರು ಎರಡು ಆಯ್ಕೆಗಳಲ್ಲಿ ಒಂದನ್ನು ಆರಿಸಿ ನಿರ್ಧಾರಗಳನ್ನು ತೆಗೆದುಕೊಳ್ಳಬೇಕಾದ ಚಟುವಟಿಕೆಯುಳ್ಳ ಕಾರ್ಯಹಾಳೆಯನ್ನು ನಾವು ಪೂರ್ಣ-ಗೊಳಿಸಿದೆವು. ಇದು ಖುಷಿ ನೀಡುವ ಒಂದು ಚಟುವಟಿಕೆ-ಯಾಗಿತ್ತು. ಅವರು ತಮ್ಮ ನಿರ್ಧಾರಗಳನ್ನು ತಾವೇ ತೆಗೆದು-ಕೊಳ್ಳಬೇಕಾಗಿತ್ತು ಮತ್ತು ಅವರ ಆಯ್ಕೆಗಳನ್ನು ಅವರೇ ಸಮರ್ಥಿಸಿಕೊಳ್ಳಬೇಕಾಗಿತ್ತು.

ಮರುದಿನ, ನನ್ನ ವಿದ್ಯಾರ್ಥಿಗಳಲ್ಲಿ ಒಬ್ಬ ಇಡೀ ತರಗತಿಯನ್ನು ನಿರ್ಧಾರ ತೆಗೆದುಕೊಳ್ಳುವ ನಿಟ್ಟಿನಲ್ಲಿ ಮುನ್ನಡೆಸಿದ. ನನ್ನ ಕೆಲವು ವಿದ್ಯಾರ್ಥಿಗಳು ಡಾಡ್ಜ್ ಬಾಲ್ ಆಡಲು ಬಯಸಿದ್ದರು, ಆಗ ಈ ವಿದ್ಯಾರ್ಥಿ ಅದರ ಜವಾಬ್ದಾರಿಯನ್ನು ತೆಗೆದುಕೊಂಡ ಮತ್ತು ಒಂದು ಕಾಗದದಲ್ಲಿ ಎರಡು ಕಾಲಂಗಳನ್ನು ಮಾಡಿ ಫುಟ್‌ಬಾಲ್ ಆಟದ ಸಾಧಕ-ಬಾಧಕಗಳನ್ನು ಬರೆದ. ತರಗತಿಯಲ್ಲಿ ಈ ಅಂಶಗಳನ್ನು ವಿವರವಾಗಿ ಚರ್ಚಿಸಲಾಯಿತು. ಅಂತಿಮವಾಗಿ ಪ್ರತಿಯೊಬ್ಬರೂ ಫುಟ್‌ಬಾಲ್ ಆಟವನ್ನು ಆಡಲು ಮತ್ತು ಅಭ್ಯಾಸ ಮಾಡಲು ಆಯ್ಕೆ ಮಾಡಿಕೊಂಡರು. ಏಕೆಂದರೆ ಈ ಬಗ್ಗೆ ಜವಾಬ್ದಾರಿಯನ್ನು ವಹಿಸಿಕೊಂಡಿದ್ದ ವಿದ್ಯಾರ್ಥಿಯು ಎರಡು ಕಾಲಮ್‌ಗಳಲ್ಲಿ ಉಲ್ಲೇಖಿಸಲಾದ ಪ್ರತಿಯೊಂದು ಅಂಶಕ್ಕೂ ಕಾರಣಗಳನ್ನು ನೀಡಿದ್ದ. ನಿರ್ಧಾರ ತೆಗೆದುಕೊಳ್ಳಲು ತಾರ್ಕಿಕತೆಯು ನಿರ್ಣಾಯಕವಾಗಿದೆ ಎಂದು ವಿದ್ಯಾರ್ಥಿಗಳು ಕಲಿತರು ಮತ್ತು ಅವರ ನಿರ್ಧಾರಗಳಿಗೆ ಕಾರಣಗಳ ಬಗ್ಗೆ ಸ್ಪಷ್ಟತೆಯನ್ನು ಹೊಂದಿರುವಾಗ ಅದು ಸುಲಭವಾಗುತ್ತದೆ.

## ಒತ್ತಡ ಮತ್ತು ಆತಂಕವನ್ನು ನಿರ್ವಹಿಸುವುದು

ಒತ್ತಡ ಮತ್ತು ಆತಂಕವು ಬದಲಾವಣೆಗಳು ಮತ್ತು ಕಷ್ಟಗಳಿಗೆ ನೀಡುವ ಸಾಮಾನ್ಯ ಪ್ರತಿಕ್ರಿಯೆಗಳಾಗಿವೆ, ಇದು ಬಾಲ್ಯದಿಂದಲೂ ಸಹ ಪ್ರತಿಯೊಬ್ಬರ ಜೀವನದ ಭಾಗವಾಗಿದೆ. ಒತ್ತಡ ಮತ್ತು ಆತಂಕವು ಋಣಾತ್ಮಕ ಸಂದರ್ಭಗಳಲ್ಲಿ ಉಂಟಾಗುವ ಭಯಾನಕ ಭಾವನೆಗಳು ಎಂದು ನಾವು ಆಗಾಗ್ಗೆ ನಂಬುತ್ತೇವೆ. ಆದಾಗ್ಯೂ, ಸಂತೋಷದ ಸಂದರ್ಭಗಳ (ಶಾಲಾ ಘಟನೆಗಳು, ರಜೆಗಳು ಅಥವಾ ಸಾಮಾಜಿಕ ಹವ್ಯಾಸಗಳಂತಹ) ನಿರೀಕ್ಷೆಯು ಕೆಲವೊಮ್ಮೆ ಒತ್ತಡವನ್ನು ಉಂಟುಮಾಡಬಹುದು. ಏನನ್ನಾದರೂ ನಿರೀಕ್ಷಿಸುವ ಸಂದರ್ಭ ಬಂದಾಗ, ಮಾರ್ಪಡಿಸಬೇಕಾದ ಅಥವಾ ರಕ್ಷಿಸಬೇಕಾದಾಗ, ಮಕ್ಕಳು ಒತ್ತಡ ಮತ್ತು ಆತಂಕವನ್ನು ಅನುಭವಿಸುತ್ತಾರೆ. ಅವರಿಗೆ ಮುಖ್ಯವಾದ ವಿಷಯವು ಅಪಾಯಕ್ಕೆ ಸಿಲುಕಿದಾಗ, ಅವರು ಆತಂಕಕ್ಕೊಳಗಾಗುತ್ತಾರೆ. ನನ್ನ ಅನೇಕ ವಿದ್ಯಾರ್ಥಿಗಳು ತರಗತಿಯ ಮುಂದೆ ಅಥವಾ ಬೆಳಗ್ಗಿನ ಶಾಲಾ ಸಭೆಯಲ್ಲಿ ಮಾತನಾಡಬೇಕಾದಾಗ ಒತ್ತಡ ಮತ್ತು ಆತಂಕಕ್ಕೆ ಒಳಗಾಗುತ್ತಾರೆ. ಈ ಆತಂಕವನ್ನು ಹೋಗಲಾಡಿಸಲು, ನಾನು ಅವರನ್ನು ವಿವಿಧ ಒತ್ತಡ-ನಿವಾರಕ ಚಟುವಟಿಕೆಗಳಲ್ಲಿ (stress-relieving activities) ತೊಡಗಿಸಿದೆ.

ಒತ್ತಡ ಮತ್ತು ಆತಂಕವನ್ನು ನಿವಾರಿಸುವ ಮಾರ್ಗಗಳ ಕುರಿತು ನೀವು ಹುಡುಕಿದಾಗ ಅಥವಾ ಓದಿದಾಗ ಬರುವ ಮೊದಲ ವಿಷಯವೆಂದರೆ ಧ್ಯಾನ. ಆದಾಗ್ಯೂ, ಕೆಲವೊಮ್ಮೆ, ಮಗುವಿಗೆ ಧ್ಯಾನ ಮಾಡುವುದು ಸವಾಲಾಗಿರಬಹುದು. ವಿದ್ಯಾರ್ಥಿ-ಯಾಗಿದ್ದಾಗ, ನಾನು ಸಹ ಒತ್ತಡವನ್ನು ನಿವಾರಿಸಲು ಧ್ಯಾನವನ್ನು ಬಳಸುತ್ತಿದ್ದೆ. ಆದಾಗ್ಯೂ, ನನ್ನ ವಿದ್ಯಾರ್ಥಿಗಳು ತುಂಬಾ ಸಕ್ರಿಯರಾಗಿದ್ದಾರೆ ಮತ್ತು ಚಲನೆಯ ಅಗತ್ಯವಿರುವ ಚಟುವಟಿಕೆಗಳಿಗೆ ಆದ್ಯತೆ ನೀಡುತ್ತಾರೆ. ಆದ್ದರಿಂದ, ನಾನು ಧ್ಯಾನವನ್ನು ಹೊರತುಪಡಿಸಿ ಬೇರೆ ಮಾರ್ಗಗಳನ್ನು ಹುಡುಕಿದೆ. ನನ್ನ ತರಗತಿಯಲ್ಲಿ ನಾನು ಮಾಡಿದ ಕೆಲವು ಚಟುವಟಿಕೆಗಳು ಇಲ್ಲಿವೆ:

### ನಿಮ್ಮ ಒತ್ತಡವನ್ನು ಎಸೆದುಬಿಡಿ

ನಾನು ವಿದ್ಯಾರ್ಥಿಗಳಿಗೆ ಕಾಗದದ ಹಾಳೆಯ ಮೇಲೆ ದೊಡ್ಡ ಬಕೆಟ್ ಚಿತ್ರವನ್ನು ಬಿಡಿಸಲು ಹೇಳಿದೆ ಮತ್ತು ಅವರು ಅನುಭವಿಸುತ್ತಿರುವ ಎಲ್ಲಾ ಒತ್ತಡವನ್ನು ಅದರಲ್ಲಿ ತುಂಬಲು (ಅದರೊಳಗೆ ಬರೆಯಿರಿ) ಹೇಳಿದೆ. ಪರೀಕ್ಷೆಗಳು, ಪೋಷಕರ ಒತ್ತಡ, ಮುಟ್ಟು ಇತ್ಯಾದಿಗಳು ಒತ್ತಡಕ್ಕೆ ಉದಾಹರಣೆಗಳಾಗಿವೆ. ಅವರು ತಮ್ಮ ಒತ್ತಡದ ಬಕೆಟ್ ಚಿತ್ರಿಸಿದ ನಂತರ, ಈ ಕೆಲವು ಚಟುವಟಿಕೆಗಳಲ್ಲಿ ಪಾಲ್ಗೊಂಡರು.

### ರೇಖಾಚಿತ್ರ ಚಟುವಟಿಕೆ

ವಿದ್ಯಾರ್ಥಿಗಳನ್ನು ಸಂತೋಷಪಡಿಸುವ ಅಥವಾ ಇತ್ತೀಚಿನ ದಿನಗಳಲ್ಲಿ ಅವರಿಗೆ ಸಂತೋಷವನ್ನುಂಟು ಮಾಡಿದ ಯಾವುದಾದರೂ ವಿಷಯಗಳನ್ನು ಕಪ್ಪು ಕಾಗದದ ಮೇಲೆ ಬಣ್ಣದ ಸೀಮೆಸುಣ್ಣವನ್ನು ಬಳಸಿ ಚಿತ್ರಿಸುವಂತೆ ನಾನು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿದೆ. ಈ ಚಟುವಟಿಕೆಗೆ ಅವರು ಪೆನ್ ಅಥವಾ ಪೆನ್ಸಿಲ್ ಬಳಕೆಗಿಂತ ಬಣ್ಣದ ಸೀಮೆಸುಣ್ಣವನ್ನು ಬಳಸುವುದನ್ನು ಆನಂದಿಸಿದರು. ಬಿಳಿ ಸೀಮೆಸುಣ್ಣದ ಬದಲಿಗೆ ಬಣ್ಣದಬಣ್ಣದ ಸೀಮೆಸುಣ್ಣವನ್ನು ಬಳಸುವುದರಿಂದ ಮಗುವಿನ ಮನಸ್ಥಿತಿಯನ್ನು ಅರಳಿಸಬಹುದು.

### ಮನಸ್ಸಿಗೆ ತೋಚಿದಂತೆ ಗೀಚುವುದು (ಡೂಡ್ಲಿಂಗ್)

ಡೂಡ್ಲಿಂಗ್ ಒಂದು ವಿಶ್ರಾಂತಿ ಚಟುವಟಿಕೆಯಾಗಿದೆ, ಏಕೆಂದರೆ ಇದು ಯಾವುದೇ ರಚನಾತ್ಮಕ ಅಥವಾ ನಿರೀಕ್ಷಿತ

ಫಲಿತಾಂಶವನ್ನು ಬೇಡುವುದಿಲ್ಲ. ನಾನು ನನ್ನ ವಿದ್ಯಾರ್ಥಿಗಳಿಗೆ ಸ್ಕೆಚ್ ಪೆನ್ನುಗಳನ್ನು ನೀಡಿ ಅವುಗಳನ್ನು ಬಳಸಿಕೊಂಡು ಅವರ ಮನಸ್ಸಿಗೆ ತೋಚಿದ್ದನ್ನು ಮುಕ್ತವಾಗಿ ಬಿಡಿಸಲು ಹೇಳಿದೆ. ಅವರಿಗೆ ನಿರಾಳವಾಗಲು ನಾನು ಕೆಲವು ಶಾಂತವಾದ ಸಂಗೀತವನ್ನೂ ಕೇಳಿಸಿದೆ. ಆ 25 ನಿಮಿಷಗಳ ತರಗತಿಯಲ್ಲಿ, ಅವರ ಮನಸ್ಸು ಯಾವುದೇ ರೀತಿಯ ಆತಂಕಕ್ಕಿಂತ ಹೆಚ್ಚಾಗಿ ಸೃಜನಶೀಲ ಚಟುವಟಿಕೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿತು.

ಮರ ಅಥವಾ ಗಿಡದೊಂದಿಗೆ ಮಾತನಾಡುವುದು

ನಮ್ಮ ತರಗತಿ ಕೊಠಡಿಯಲ್ಲಿ ಮನಿಪ್ಲಾಂಟ್ ಇದೆ. ಮೊದಲಿಗೆ, ನನ್ನ ವಿದ್ಯಾರ್ಥಿಗಳು ಸಸ್ಯದೊಂದಿಗೆ ಸಂವಹನ ನಡೆಸುವುದು ವಿಚಿತ್ರವೆಂದು ಭಾವಿಸಿದರು, ಮತ್ತು ಅವರು ನಕ್ಕರು, ಆದರೆ ಯಾವಾಗ ಅವರು ಅದು ಒತ್ತಡವನ್ನು ಹೊರಹಾಕಲು ಸಹಾಯ ಮಾಡುತ್ತದೆ ಎಂದು ಕಂಡುಕೊಂಡರೋ, ಆಗ ಅವರು ಅದನ್ನು ಗಂಭೀರವಾಗಿ ಪರಿಗಣಿಸಲು ಪ್ರಾರಂಭಿಸಿದರು. ಈ ಚಟುವಟಿಕೆಯ ನಂತರ, ತನ್ನ ಸಮಸ್ಯೆಗಳನ್ನು ಕೇಳಲು ಯಾರೋ ಒಬ್ಬರು ನನ್ನೊಂದಿಗೆ ಸದಾಕಾಲ ಲಭ್ಯವಿದ್ದಾರೆ ಎಂದು ನನಗೆ ಅನಿಸುತ್ತಿದೆ ಎಂದು ವಿದ್ಯಾರ್ಥಿಯೊಬ್ಬ ಅಭಿಪ್ರಾಯಪಟ್ಟನು.

ಕೊನೆಯಲ್ಲಿ ಹೇಳುವುದಾದರೆ, ನಮ್ಮ ವಿದ್ಯಾರ್ಥಿಗಳ ಸಾಮಾಜಿಕ –ಭಾವನಾತ್ಮಕ ಕಲ್ಯಾಣಕ್ಕಾಗಿ ಬಹಳಷ್ಟು ಸಾಧಿಸಲಾಗಿದೆ.ಇನ್ನೂ ಹೆಚ್ಚಿನದನ್ನು ಮಾಡಬೇಕಾಗಿದೆ. ಸರಳವಾದ ಚಟುವಟಿಕೆಗಳು ಮತ್ತು ಕಾರ್ಯಗಳು ಅವರ ಸಾಮಾಜಿಕ ಮತ್ತು ಭಾವನಾತ್ಮಕ ಅಗತ್ಯಗಳನ್ನು ಗಮನಾರ್ಹವಾಗಿ ಪೂರೈಸುತ್ತವೆ. ಶಿಕ್ಷಣ–ತಜ್ಞರಾಗಿ, ನಾವು ಅವರ ವ್ಯಕ್ತಿತ್ವದ ಈ ಆಯಾಮದ ಬಗ್ಗೆ ನಿರಂತರವಾಗಿ ಮಾತನಾಡಬೇಕಾಗಿದೆ, ಇದರಿಂದಾಗಿ ಅವರ ಶೈಕ್ಷಣಿಕ ಮತ್ತು ವೃತ್ತಿಪರ ಯಶಸ್ಸಿನ ಅವಕಾಶಗಳು ಸುಧಾರಿಸುವುದರ ಜೊತೆಗೆ, ನಾವು ಅವರ ಸಾಮಾಜಿಕ ಮತ್ತು ಭಾವನಾತ್ಮಕ ಕೌಶಲ್ಯಗಳನ್ನು ಪೋಷಿಸಬಹುದು ಮತ್ತು ಅವರಿಗೆ ಸುರಕ್ಷಿತ ಮತ್ತು ಸಕಾರಾತ್ಮಕ ಕಲಿಕೆಯ ವಾತಾವರಣವನ್ನು ಒದಗಿಸಬಹುದು.



**ಶಾಲಿನಿ ಸೋಲಂಕಿ** ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಿಂದ ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಅವರು ಆಂಧ್ರಪ್ರದೇಶದ ವಿಜಯವಾಡದಲ್ಲಿರುವ ಇಂಟರ್‌ನ್ಯಾಶನಲ್ ಸ್ಕೂಲ್‌ನಲ್ಲಿ ಇಂಗ್ಲಿಷ್‌ಗೆ ಕಾರ್ಯಕ್ರಮ ಸುಗಮಕಾರರಾಗಿದ್ದಾರೆ (Programme Facilitator). ತನ್ನ ಬಿಡುವಿನ ವೇಳೆಯಲ್ಲಿ, ಅವರು ಮಕ್ಕಳ ಸಾಹಿತ್ಯವನ್ನು ಓದುವುದು, ಯೋಗ ಮಾಡುವುದು ಮತ್ತು ಐತಿಹಾಸಿಕ ಚಲನಚಿತ್ರಗಳನ್ನು ನೋಡುವುದನ್ನು ಆನಂದಿಸುತ್ತಾರೆ. ಅವರನ್ನು shalinisolanki70@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಶ್ರೀನಿಧಿ ಅಡಿಗ** | ಪರಿಶೀಲನೆ: **ಲತಾ ಕೆ.ಸಿ.**

# ಗುರುತಿಸಲು ಬಯಸದ ಅಂಗೈಹುಣ್ಣು | ಸಮಾಜೋ ಭಾವನಾತ್ಮಕ ಕಲಿಕೆಯ ಕೊರತೆಯ ಬೋಧನೆ (SEL )

ಶುಭಂ ರಾತುರಿ



ಸುಮಾರು ಮೂರು ವರ್ಷಗಳ ಹಿಂದೆ, ಕೋವಿಡ್–19ರ ಎರಡನೇ ಅಲೆಯ ಕರಾಳ ಛಾಯೆಯ ನಡುವೆ, ಮಕ್ಕಳ ಕಲಿಕೆಯನ್ನು ಉಳಿಸಿಕೊಳ್ಳಲು ವಿವಿಧ ಉಪಕ್ರಮಗಳನ್ನು ಕೈಗೊಳ್ಳಲಾಯಿತು. ಆ ಸಮಯದಲ್ಲಿ ನಾನು ನಾಲ್ಕನೇ ತರಗತಿಯಲ್ಲಿ ಕಲಿಯುತ್ತಿರುವ ಹದಿನಾಲ್ಕು ಬುಡಕಟ್ಟು ವಿದ್ಯಾರ್ಥಿಗಳ ಜೊತೆ ಕೆಲಸ ಮಾಡುತ್ತಿದ್ದೆ. ಈ ಶಾಲೆಯು ದಕ್ಷಿಣ ರಾಜಸ್ಥಾನದ ಒಂದು ಕುಗ್ರಾಮದ ಪರಿಧಿಯಲ್ಲಿತ್ತು. ಅದಾಗಿಯೂ, ಸಾಂಕ್ರಾಮಿಕ ಪಿಡುಗಿನ ಕಾರಣ ಶಾಲೆಗಳು ಮುಚ್ಚಿದ್ದರಿಂದ, ಒಂದು ಪ್ರತ್ಯೇಕ ದೇವಸ್ಥಾನದಲ್ಲಿ ತರಗತಿಗಳು ನಡೆಯುತ್ತಿತ್ತು. ರಾಹುಲ್, ಸಾಧಾರಣವಾಗಿ ಸದಾ ಶಾಂತ ಮತ್ತು ಸ್ನೇಹಪರ ಹುಡುಗ, ಬಿಡುವಿನ ವೇಳೆ ಅವನು ತನ್ನ ಸ್ನೇಹಿತರ ಜೊತೆ ಆಟವಾಡುತ್ತಿದ್ದ. ಒಮ್ಮೆ ಅವರು ಮೃದುವಾಗಿ ತಳ್ಳ ದಬ್ಬಿದಾಗ ತಕ್ಷಣವೇ ಅದು ಗಂಭೀರ ಹೊಡೆದಾಟವಾಗಿ ಮಾರ್ಪಟ್ಟಿತು. ನಾನು ಮಧ್ಯ ಪ್ರವೇಶಿಸುವ ಹೊತ್ತಿಗೆ, ರಾಹುಲ್ ಅದಾಗಲೇ ಆಯುಷ್‌ನ ಕತ್ತು ಹಿಡಿದುಕೊಂಡು ಅವನ ಉಸಿರು ಕಟ್ಟಿಸಲು ಆರಂಭಿಸಿದ್ದನು. ನಾನು ವಯಸ್ಸಿನಲ್ಲಿ ಹಿರಿಯವನಾಗಿದ್ದರೂ, ನನಗೆ 10 ವರ್ಷದ ಹುಡುಗನನ್ನು ಮತ್ತೊಬ್ಬ ಹುಡುಗನಿಂದ ಬಹುತೇಕ ಉಸಿರುಗಟ್ಟಿಸುವಿಕೆಯಿಂದ ಪ್ರತ್ಯೇಕಿಸಲು ಭಾರೀ ಪ್ರಯತ್ನವನ್ನೇ ಮಾಡಬೇಕಾಯಿತು. ರಾಹುಲ್‌ನಂತಹ ಶಾಂತ ಸ್ವಭಾವದ ಮತ್ತು ಶಿಸ್ತುಬದ್ಧ ಮಗು ಇಂತಹ ಆಕ್ರಮಣಕಾರಿ ನಡವಳಿಕೆಯನ್ನು ಪ್ರದರ್ಶಿಸುತ್ತಿರುವುದನ್ನು ನೋಡುವುದು ನನ್ನ ಕಲ್ಪನೆಗೂ ಮೀರಿದ ವಿಷಯವಾಗಿತ್ತು. ಶಾಲೆ ಮುಗಿದ ಬಳಿಕ ಈ ಘಟನೆಯನ್ನು ಮುಖ್ಯೋಪಾಧ್ಯಾಯರೊಂದಿಗೆ ಹಂಚಿ–ಕೊಳ್ಳಲಾಯಿತು. ನಂತರ ಮುಖ್ಯೋಪಾಧ್ಯಾಯರಿಂದ ಕೇಳಿದ ಕಥೆಯಿಂದಾಗಿ ನನಗೆ ರಾಹುಲ್‌ನ ಬಗ್ಗೆ ಸಹಾನುಭೂತಿಯ ಭಾವ ಉಂಟಾಯಿತು. ತನ್ನ ಹೆತ್ತವರು ಬೇರ್ಪಟ್ಟ ನಂತರ ಆತ ಅವನ ಅಜ್ಜಿಯೊಂದಿಗೆ ವಾಸಿಸುತ್ತಿದ್ದನು. ಅವನ ತಂದೆ ಮರು ಮದುವೆಯಾಗಿದ್ದರಿಂದ ರಾಹುಲ್ ಭಾವನಾತ್ಮಕ ಬೆಂಬಲದಿಂದ ವಂಚಿತನಾಗಿದ್ದನು. ಇದಕ್ಕೂ ಮುಂಚೆ ಕೌಟುಂಬಿಕ ಹಿಂಸಾಚಾರದಂತಹ ಹಲವಾರು ನಿದರ್ಶನಗಳಿಗೆ ಸಾಕ್ಷಿಯಾಗಿ–ದ್ದರಿಂದ ಅದು ಅವನ ಎಳೆಯ ಮನಸ್ಥಿತಿಯ ಮೇಲೆ ಏನೋ ಒಂದು ಶಾಶ್ವತವಾದ ಹಾನಿಕಾರಕ ಪ್ರಭಾವವನ್ನು ಉಂಟು ಮಾಡಿರಬೇಕು. ಇಂತಹ ಪರಿಸ್ಥಿತಿಗಳು ಮಗುವಿನ ಮಾನಸಿಕ ರಚನೆಯ ಮೇಲೆ ತೀವ್ರ ಪರಿಣಾಮ ಬೀರಿದೆ ಎಂಬುದು ಸ್ಪಷ್ಟವಾಗುತ್ತದೆ. ಯಾವಾಗ ಮಗುವಿನ ಸಮಾಜೋ–ಭಾವನಾತ್ಮಕ ಯೋಗಕ್ಷೇಮವನ್ನು ಪರಿಗಣಿಸಲಾಗುವುದಿಲ್ಲವೋ ಹಾಗೂ ಪೋಷಿಸಲಾಗುವುದಿಲ್ಲವೋ ಆಗ ಅದು ಅವನ / ಅವಳ ಶೈಕ್ಷಣಿಕ ಸಾಧನೆಯ ಮೇಲೂ ಪ್ರತಿಬಿಂಬಿತವಾಗುತ್ತದೆ. ಬೋಧನೆ– ಕಲಿಕೆ ಪ್ರಕ್ರಿಯೆಯ ವಿಮರ್ಶಾತ್ಮಕತೆಯನ್ನು ಗುರುತಿಸುವ ಮೂಲಕ ಶಿಕ್ಷಕರಾದಂತಹ ನಾವೇ ಪ್ರಾರಂಭಿಸಬಹುದು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

## ಶೈಕ್ಷಣಿಕ ಉತ್ಕೃಷ್ಟತೆಯನ್ನು ಬೆನ್ನಟ್ಟುವುದು

ಶೈಕ್ಷಣಿಕ ಸಾಮರ್ಥ್ಯ, ಬೋಧನೆಯ ತಿರುಳಿನಲ್ಲಿ ಅಡಗಿರುವಂತಹ ವಾತಾವರಣದಲ್ಲಿ ಸಮಗ್ರ ಶಿಕ್ಷಣದ ಇತರ ಸಾಧಕ ಘಟಕಗಳನ್ನು ಕಡೆಗಣಿಸಲಾಗಿದೆ ಎಂಬುವುದನ್ನು ನಾವು ಖಂಡಿತವಾಗಿಯೂ ಗ್ರಹಿಸಬಹುದಾಗಿದೆ. ಶೈಕ್ಷಣಿಕವಾಗಿ ಮುಂದಿರುವ ವಿದ್ಯಾರ್ಥಿಗಳು ಪಠ್ಯೇತರ ಚಟುವಟಿಕೆಗಳಲ್ಲೂ ಭಾಗವಹಿಸುವಂತೆ ಶಿಕ್ಷಕರಿಂದ ಪ್ರೋತ್ಸಾಹಿಸಲ್ಪಡುವವರೂ ಆಗಿರುವುದನ್ನು ನಾವು ಸಾಮಾನ್ಯವಾಗಿ ಕಾಣಬಹುದು. ಈ ಅಭ್ಯಾಸವು ಅನೇಕ ಅರ್ಹ ಮಕ್ಕಳನ್ನು ಅವರ ಪ್ರತಿಭಾ ಪೋಷಣೆಯ ಅವಕಾಶಗಳಿಂದ ವಂಚಿತಗೊಳಿಸುತ್ತದೆ. ಕೇವಲ ತಮ್ಮ ಶೈಕ್ಷಣಿಕ ಸಾಧನೆಯು ಅಸಮರ್ಪಕ ವ್ಯವಸ್ಥೆಯ ಮಾನದಂಡಕ್ಕೆ ತಕ್ಕಂತೆ ಇಲ್ಲವೆಂಬ ಕಾರಣಕ್ಕಾಗಿ ಕಲೆ, ಕ್ರೀಡೆ, ಸಂಗೀತ ಅಥವಾ ನೃತ್ಯದಂತಹ ನಿರ್ದಿಷ್ಟ ಅಭಿರುಚಿ ಹೊಂದಿರುವ ಮಕ್ಕಳು ಅರ್ಹತೆಯ ಮಾನ್ಯತೆಯಿಂದ ವಂಚಿತರಾಗುತ್ತಾರೆ. ಶಾಲೆಯು ಸಮಾಜದ ಉಪವಿಭಾಗವಾಗಿದೆ ಮತ್ತು ಉತ್ತಮ ಪ್ರದರ್ಶನ ನೀಡುವ ವಿದ್ಯಾರ್ಥಿಗಳು ಸಾಮಾಜಿಕ ಚೌಕಟ್ಟಿನ ಉತ್ತುಂಗದಲ್ಲಿದ್ದಾರೆ, ಆದರೆ ಪ್ರದರ್ಶನ ನೀಡದವರು (ಕಲಿಕೆಯಲ್ಲಿ ಹಿಂದಿರುವವರು) ಶಿಕ್ಷಕರಿಂದ ಹಾಗೂ ಪ್ರದರ್ಶಕರು ಎಂದು ಕರೆಯಲ್ಪಡುವವರಿಂದ ಮತ್ತೆಮತ್ತೆ ಕಡೆಗಣಿಸಲ್ಪಡುತ್ತಾರೆ, ಅವಮಾನಿಸಲ್ಪಡುತ್ತಾರೆ ಹಾಗೂ ನಿರ್ಲಕ್ಷ್ಯಕ್ಕೊಳಗಾಗುತ್ತಾರೆ. ಕಾರ್ಯಕ್ಷಮತೆಯ ಆಧಾರದ ಈ ವಿಭಜನೆಯು ತರಗತಿಯ ಒಳಗೆ ಉಪಗುಂಪುಗಳನ್ನು ಸೃಷ್ಟಿಸುತ್ತವೆ ಹಾಗೂ ತಮ್ಮ ಗೆಳೆಯರಿಂದ ಕಲಿಯುವಂತಹ ಅವಕಾಶದಿಂದಲೂ ಪ್ರದರ್ಶನ ನೀಡದವರು ಎಂದು ಕರೆಯಲ್ಪಡುವವರು ವಂಚಿತರಾಗುತ್ತಾರೆ. ಸಾರ್ವಜನಿಕವಾಗಿ ವಿದ್ಯಾರ್ಥಿಗಳನ್ನು ಅವರು ಚಿಕ್ಕ ವಯಸ್ಸಿನಲ್ಲಿರುವಾಗಿನಿಂದಲೇ ಅವನು/ಳು ಬುದ್ಧಿವಂತ ಅಥವಾ ಮಂದ ಎಂಬ ಹೆಸರನ್ನು ಇಟ್ಟು ಗುರುತಿಸುವುದು ಅವರ ಒಟ್ಟು ವ್ಯಕ್ತಿತ್ವದ ಮೇಲೆ ಶಾಶ್ವತವಾಗಿ ಪ್ರಭಾವವನ್ನು ಬೀರುವುದರ ಜೊತೆಗೆ, ಮುಂದೆ ಅದು ಅವರ ನಿಜವಾದ ಸಾಮರ್ಥ್ಯವನ್ನು ಅನ್ವೇಷಿಸುವುದನ್ನು ತಡೆಯುವಂತಹ ಒಂದು ಪ್ರಮುಖ ಅಡಚಣೆಯೂ ಆಗುತ್ತದೆ ಎಂಬುದನ್ನು ಸಾಬೀತುಪಡಿಸ–ಬಹುದೆಂದು ವಿವಿಧ ಅಧ್ಯಯನಗಳು ತೋರಿಸಿಕೊಟ್ಟಿವೆ.

ಇಂತಹ ಎಳೆಯ ವಯಸ್ಸಿನಲ್ಲಿ ರಾಹುಲ್ ಎದುರಿಸಿದ ಭಾವನಾತ್ಮಕ ತೊಡಕುಗಳ ಬಗ್ಗೆ ನನಗೆ ಅರಿವು ಮೂಡಿಸದೇ ಇದ್ದಿದ್ದರೆ ಓರ್ವ ಶಿಕ್ಷಕನಾಗಿ ನಾನು ಅವನ ವಿರುದ್ಧ ಪೂರ್ವಾಗ್ರಹ ಪೀಡಿತನಾಗಿರುತ್ತಿದ್ದೆ. ಮಗುವಿನ ನೈಜ ಮತ್ತು ಸಂಪೂರ್ಣ ಮೌಲ್ಯಮಾಪನಕ್ಕಾಗಿ ಅವನ ಅಥವಾ ಅವಳ ಹಿನ್ನೆಲೆ ಮತ್ತು ಪಠ್ಯೇತರ ಆಸಕ್ತಿಗಳನ್ನು ಶಿಕ್ಷಕರು ಯಾವಾಗಲೂ ಅಂಗೀಕರಿಸಬೇಕು ಎಂಬುವುದನ್ನು ಇದು ನನಗೆ ಕಲಿಸಿಕೊಟ್ಟಿತು. ಸಚಿನ್ ತೆಂಡೂಲ್ಕರ್ ಅವರು ಏರೋನಾಟಿಕಲ್ ಇಂಜಿನಿಯರಿಂಗ್ ಅನ್ನೇ ಮುಂದುವರೆಸಿದಿದ್ದರೆ, ಇಂದು ನಾವು ಅವರನ್ನು 'ಮಾಸ್ಟರ್ ಬ್ಲಾಸ್ಟರ್' ಎಂದು ಗುರುತಿಸಲು ಹೇಗೆ ಸಾಧ್ಯವಾಗುತ್ತಿರಲಿಲ್ಲವೋ ಹಾಗೆಯೇ! ಎಪಿಜೆ ಅಬ್ದುಲ್ ಕಲಾಂ ಅವರು ಕ್ರಿಕೆಟ್ ಅನ್ನು ತನ್ನ ವೃತ್ತಿಯನ್ನಾಗಿಸಿಕೊಂಡಿದ್ದಿದ್ದರೆ ಅವರನ್ನು 'ಮಿಸೈಲ್ ಮ್ಯಾನ್ ಆಫ್ ಇಂಡಿಯಾ' ಎಂದೂ ಗುರುತಿಸುತ್ತಿರಲಿಲ್ಲ. ಆದ್ದರಿಂದ ಸಂಪೂರ್ಣವಾಗಿ ವಿಭಿನ್ನ ಮಾನದಂಡಗಳಲ್ಲಿ ಗಮನಿಸಬೇಕಾದ ತರಗತಿಯ ಎಲ್ಲ ಮಕ್ಕಳಿಂದ ಸಮಾನ ನಿರೀಕ್ಷೆಗಳನ್ನು ಇಟ್ಟುಕೊಳ್ಳುವುದು ಅಸಂಬದ್ಧವಲ್ಲದಿದ್ದರೆ ಖಂಡಿತವಾಗಿಯೂ ಸೂಕ್ತವೂ ಅಲ್ಲ.

## ವಾಸ್ತವಾಂಶಗಳನ್ನು ಒಪ್ಪಿಕೊಳ್ಳುವುದು

ಸಮಗ್ರ ಶಿಕ್ಷಣ ಅಂದರೆ ಸಮನ್ವಯ ಮತ್ತು ಬಹುತ್ವ ಸಮಾಜದ ಸ್ಥಾಪನೆಯನ್ನು ಖಾತ್ರಿಪಡಿಸುವುದೇ ಆಗಿದೆ ಎಂದು ರಾಷ್ಟ್ರೀಯ ಶಿಕ್ಷಣ ನೀತಿ (NEP) 2020 ಪ್ರತಿಪಾದಿಸುತ್ತದೆ. ಆದರೆ ಹೆಚ್ಚಾಗಿ, ಬುಡಕಟ್ಟು ಮತ್ತು ವಂಚಿತ ಸಮುದಾಯಗಳಿಂದ ಬರುವ ಬಹುತೇಕ ವಿದ್ಯಾರ್ಥಿಗಳು ಅವರ ಸಮಗ್ರ ಅಭಿವೃದ್ಧಿಗಾಗಿ ಶಾಲೆಯ ಮೇಲೆ ಸಂಪೂರ್ಣವಾಗಿ ಅವಲಂಬಿತರಾಗಿದ್ದಾರೆ ಎಂಬ ಸತ್ಯಾಂಶವನ್ನು ಮರೆತು ಶಿಕ್ಷಕರೇ ಅವರ ವಿರುದ್ಧ ಸ್ವತಃ ಪಕ್ಷಪಾತ ಧೋರಣೆಯನ್ನು ಹೊಂದಿರುತ್ತಾರೆ.

ಇವರಲ್ಲಿ ಹೆಚ್ಚಿನ ವಿದ್ಯಾರ್ಥಿಗಳು ತಮ್ಮ ಪೌಷ್ಠಿಕಾಂಶದ ಅವಶ್ಯಕತೆಗಳನ್ನು ಪೂರೈಸಲು ಗಮನಾರ್ಹವಾಗಿ ಮಧ್ಯಾಹ್ನದ ಬಿಸಿಯೂಟದ (MDM) ಮೇಲೆಯೇ ಅವಲಂಬಿತರಾಗಿದ್ದಾರೆ. ಸರ್ಕಾರಿ ಶಾಲೆಗಳಲ್ಲಿ ವಿದ್ಯಾರ್ಥಿಗಳನ್ನು ಹಿಡಿದಿಟ್ಟು–ಕೊಳ್ಳುವುದರಲ್ಲಿ ಬಿಸಿಯೂಟದ ಪಾತ್ರ ನಿರ್ಣಾಯಕವಾದುದು ಎಂಬುದು ದೊಡ್ಡ ಆಶ್ಚರ್ಯದ ಸಂಗತಿಯೇನಲ್ಲ. ಇಂತಹ ಹಲವು ಶಾಲೆಗಳಲ್ಲಿ ದಾಖಲಾತಿ ಪಡೆಯದ ಮಕ್ಕಳು ಗಮನಾರ್ಹ ಸಂಖ್ಯೆಯಲ್ಲಿದ್ದಾರೆ. ಇವರು ಔಪಚಾರಿಕವಾಗಿ ದಾಖಲಾತಿ ಪಡೆದ ವಿದ್ಯಾರ್ಥಿಗಳ ಒಡಹುಟ್ಟಿದವರಾಗಿದ್ದಾರೆ. ಇಂತಹ ಒಂದು ಶಾಲೆಯಲ್ಲಿ (ಸರ್ಕಾರಿ ಪ್ರಾಥಮಿಕ ಶಾಲೆ, ಗುಂಡಿ ಕಾ ಭಿಲ್ವಾರಾ, ಕುಂಭಲ್‌ಗಢ್) ರಜತ್ ಎಂಬ ಹೆಸರಿನ 9 ವರ್ಷ ವಯಸ್ಸಿನ ಹುಡುಗ ಅವನ ಇಬ್ಬರು ಒಡಹುಟ್ಟಿದವರನ್ನು (18 ತಿಂಗಳ ಪುಟ್ಟ ಸಹೋದರ ಹಾಗೂ 3 ವರ್ಷ ವಯಸ್ಸಿನ ಸಹೋದರಿ) ತನ್ನ ಶಾಲೆಗೆ ಕರೆ ತರುತ್ತಿದ್ದನು. ಏಕೆಂದರೆ ಹೆತ್ತವರು ಕೆಲಸಕ್ಕಾಗಿ ಹೊರ ಹೋಗುವಾಗ ಇವರನ್ನು ನೋಡಿಕೊಳ್ಳಲು ರಜತ್‌ನೊಂದಿಗೆ ಬಿಟ್ಟು ಹೋಗುತ್ತಿದ್ದರು.

## ಮನೆಯ ಪರಿಸ್ಥಿತಿಗಳು

ಅಕಾಲಿಕ ಪ್ರೌಢಾವಸ್ಥೆಗೆ ಬಲವಂತವಾಗಿ ತೆರೆದಿಡುವ ಪರಿಸ್ಥಿತಿಗಳು ಒಂದು ಮಗುವಿನ ಬಾಲ್ಯವನ್ನು ಆತನಿಂದ ಕಸಿದುಕೊಳ್ಳುತ್ತವೆ ಎಂಬುದಕ್ಕೆ ರಜತ್ ಕೇವಲ ಒಂದು ಉದಾಹರಣೆ ಮಾತ್ರ. ಕಠಿಣ ಆರ್ಥಿಕ ಪರಿಸ್ಥಿತಿಗಳು ಮಗುವಿನ ಮೇಲೆ ಗಮನಾರ್ಹ ಪರಿಣಾಮ ಬೀರಿದೆ. ಇಂತಹ ಬಡತನದ ವಿರುದ್ಧ ಶಿಕ್ಷಕರು ಹೋರಾಡಬೇಕೆಂಬ ನಿರೀಕ್ಷೆಯಿಲ್ಲವಾದರೂ, ವಿದ್ಯಾರ್ಥಿಗಳ ಯೋಗಕ್ಷೇಮದ ವಿಚಾರಕ್ಕೆ ತೊಡಕಾಗಿರುವ ಇಂತಹ ಸಾಮಾಜಿಕ – ಆರ್ಥಿಕ ಹಿನ್ನೆಲೆಯಿಂದ ಹೊರಹೊಮ್ಮುವ ಸವಾಲುಗಳನ್ನು ಒಪ್ಪಿಕೊಳ್ಳುವುದು ಮತ್ತು ಅರ್ಥ ಮಾಡಿಕೊಳ್ಳುವುದು ಅವರಿಗೆ ಅನಿವಾರ್ಯವಾಗುತ್ತದೆ. ತನ್ನ ಮನೆಗೆಲಸವನ್ನು ಪೂರ್ಣಗೊಳಿಸದ ಮಗು ಖಾಲಿ ಹೊಟ್ಟೆಯಲ್ಲಿ ಮಲಗಿರಬಹುದು ಹಾಗೂ ಸಮಯಕ್ಕೆ ಸರಿಯಾಗಿ ಶಾಲೆಗೆ ತಲುಪದ ಮಗು, ತನ್ನ ಕುರಿಗಳನ್ನು ಮೇಯಿಸಲು ಗದ್ದೆಗೆ ಕರೆದುಕೊಂಡು ಹೋಗಬೇಕಾಗಿ ಬಂದಿರಬಹುದು.

### ಜಾತಿ ಆಧಾರಿತ ಬಹಿಷ್ಕಾರ

ತರಗತಿಗಳಲ್ಲಿ ಆಗಾಗ ಕಂಡು ಬರುವ ಇನ್ನೊಂದು ಗಮನಾರ್ಹ ಸಾಮಾಜಿಕ ಪಿಡುಗು ಎಂದರೆ ಅದು ವಿದ್ಯಾರ್ಥಿಗಳ ಮಧ್ಯೆ ಜಾತಿಯಾಧಾರಿತ ವಿಂಗಡಣೆ. ಶಿಕ್ಷಕರು ಸಕ್ರಿಯವಾಗಿ ಮಧ್ಯ ಪ್ರವೇಶಿಸಿದರೆ ಅಂತಹ ಅನಪೇಕ್ಷಿತ ಅಭ್ಯಾಸಗಳನ್ನು ಪರಿಣಾಮಕಾರಿಯಾಗಿ ನಿಭಾಯಿಸಬಹುದು, ಆದಾಗ್ಯೂ ಕೆಲವು ಸಂದರ್ಭಗಳಲ್ಲಿ ಸ್ವತಃ ಶಿಕ್ಷಕರೇ ಕೆಲವು ಸಮುದಾಯಗಳಿಂದ ಬರುವ ಮಕ್ಕಳ ಬಗ್ಗೆ ಪಕ್ಷಪಾತವನ್ನು ಹೊಂದಿರುತ್ತಾರೆ. ಗ್ರಾಮೀಣ ಅಥವಾ ನಗರ ಪ್ರದೇಶವೇ ಆಗಿರಲಿ, ಜಾತಿಯಾಧಾರಿತ ತಾರತಮ್ಯದ ಆಚರಣೆಗಳು ದೇಶದ ಅನೇಕ ಭಾಗಗಳಲ್ಲಿ ಇಂದಿಗೂ ಸ್ಪಷ್ಟವಾಗಿ ಕಾಣಿಸುತ್ತವೆ. ಈ ಯುದ್ಧವನ್ನು ಗೆಲ್ಲಲು, ತಾನು ಬಂದಿರುವ ಜಾತಿ / ಧರ್ಮ / ಪಂಥವನ್ನು ಲೆಕ್ಕಿಸದೆ ತಮ್ಮ ವಿದ್ಯಾರ್ಥಿಗಳ ಸಮಗ್ರ ಯೋಗಕ್ಷೇಮದ ಬಗ್ಗೆ ಕಾಳಜಿ ವಹಿಸುವ ಪಕ್ಷಪಾತರಹಿತ ಶಿಕ್ಷಕರ ಅಗತ್ಯವಿದೆ.

### ತರಗತಿಗಳಲ್ಲಿ ಸಾಮಾಜಿಕ ಮತ್ತು ಭಾವನಾತ್ಮಕ ಕಲಿಕೆ

ವಿದ್ಯಾರ್ಥಿಗಳ ನಡವಳಿಕೆಯನ್ನು ಸೂಕ್ಷ್ಮವಾಗಿ ಗಮನಿಸುವುದರ ಮೂಲಕ ಸಮಾಜೋ ಭಾವನಾತ್ಮಕ ಕಲಿಕೆ ಕೇಂದ್ರಿತ ವಿಧಾನದಲ್ಲಿ ತರಗತಿಯ ಕೊರತೆಯನ್ನು ಗುರುತಿಸಬಹುದು.

ಉದಾಹರಣೆಗೆ, ಒಂದು ಮಗುವು ಭಾಷೆ ಹಾಗೂ ಗಣಿತಕ್ಕೆ ಸಂಬಂಧಿಸಿ ಶ್ರೇಣಿಗೆ ತಕ್ಕ, ಸಾಮರ್ಥ್ಯಗಳನ್ನು ಹೊಂದಿದ್ದರೂ (Grade - appropriate competencies) ಅಭಿವ್ಯಕ್ತಿ ಸಾಮರ್ಥ್ಯಗಳ ಮೂಲಕ ಆ ಮಗುವಿನ ದುರ್ಬಲ ಸಮಾಜೋ – ಭಾವನಾತ್ಮಕ ಸ್ಥಿತಿಯು ಪ್ರತಿಫಲಿಸುತ್ತದೆ. ಇವುಗಳಲ್ಲಿ ತನ್ನನ್ನು

ಮುಕ್ತವಾಗಿ ವ್ಯಕ್ತಪಡಿಸುವ ಸಾಮರ್ಥ್ಯದ ಕೊರತೆ, ಸ್ವಯಂ ಅರಿವಿನ ಕೊರತೆ, ಒಂದು ತಂಡವಾಗಿ ಕೆಲಸ ಮಾಡಬಲ್ಲ ಸಾಮರ್ಥ್ಯ, ಸಹವರ್ತಿಗಳ ಕಷ್ಟಗಳ ಬಗ್ಗೆ ಸೂಕ್ಷ್ಮ ಮನೋ-ಭಾವವನ್ನು ಹೊಂದಿರುವ ಮತ್ತು ಸುತ್ತಮುತ್ತಲಿನ ಜನರ ಇಷ್ಟಗಳು ಮತ್ತು ಇಷ್ಟವಿಲ್ಲದಿರುವ ಸಂಗತಿಗಳನ್ನು ಅರಿತು-ಕೊಂಡು ಒಬ್ಬರ ನಡವಳಿಕೆಯೊಂದಿಗೆ ಹೊಂದಿಕೊಳ್ಳುವುದು ಸಹ ಸೇರಿದೆ.

ದುರದೃಷ್ಟವಶಾತ್, ಈ ಅಂಶಗಳಿಗೆ ಅವುಗಳ ಅರ್ಹತೆಗೆ ಅನುಗುಣವಾಗಿ ಅವರು ಗಮನವನ್ನು ನೀಡಲಾಗಿಲ್ಲ. ಈ ಸಾಮರ್ಥ್ಯಗಳು ಬೋಧನ - ಕಲಿಕಾ ಪ್ರಕ್ರಿಯೆಯ ತಿರುಳಾಗಿರಬೇಕು ಎಂಬ ಅಂಶವನ್ನು ಶಿಕ್ಷಕರು ಪರಿಗಣಿಸಬೇಕು ಮತ್ತು ಈ ವಾಸ್ತವವನ್ನು ಗುರುತಿಸಬೇಕು. ಒಂದು ಸಮಾಜವಾಗಿ ನಾವು ಉತ್ತಮ ಶೈಕ್ಷಣಿಕ ಕಾರ್ಯಕ್ಷಮತೆಯು ಸಮಾಜೋ - ಭಾವನಾತ್ಮಕ ಸ್ಥಿತಿಯನ್ನು ಖಚಿತಪಡಿಸುವುದಿಲ್ಲ ಮತ್ತು ಸಹಾನುಭೂತಿ, ಸ್ವಯಂ - ಅರಿವು ಮತ್ತು ಸ್ವಯಂ-ನಿಯಂತ್ರಣವು ಸಮಾಜೋ - ಭಾವನಾತ್ಮಕ ಆರೋಗ್ಯದ ಮೇಲೆ ಬಲವಾದ ಪರಿಣಾಮವನ್ನು ಬೀರುತ್ತದೆ ಎಂಬುದನ್ನು ಅರಿತುಕೊಳ್ಳಬೇಕು. ದಾಖಲೆಗಳ ನಿರ್ವಹಣೆ ಮತ್ತು ಮಕ್ಕಳ ಅಭ್ಯಾಸ ಪುಸ್ತಕಗಳನ್ನು ಪರಿಶೀಲಿಸುವಂತಹ ಕರ್ತವ್ಯಗಳನ್ನು ನಿರ್ವಹಿಸುವುದಕ್ಕೆ ತಮ್ಮ ಸಮಯವನ್ನು ಗಣನೀಯ ಪ್ರಮಾಣದಲ್ಲಿ ಬಳಸಲಾಗುತ್ತಿದೆ ಎಂದು ಹೇಳುವ ಶಿಕ್ಷಕರ ಪುರಾವೆಗಳೇ ಈ ಅಂಶವನ್ನು ದೃಢೀಕರಿಸಿವೆ. ಆದ್ದರಿಂದ, ಅವರಿಗೆ ತಮ್ಮ ವಿದ್ಯಾರ್ಥಿಗಳೊಂದಿಗೆ ಚಟುವಟಿಕೆ ಆಧಾರಿತ ವಿಧಾನದ (activity-based approach) ಮೂಲಕ ಕೆಲಸ ಮಾಡಲು ಸಾಕಷ್ಟು ಸಮಯವು ಸಿಗುವುದಿಲ್ಲ. ಈ ಕಾಗದ-ಆಧಾರಿತ ಬೋಧನಾ ನಡಾವಳಿಯು (paper-based conduct of teaching) ವಿದ್ಯಾರ್ಥಿಗಳ ಸಮಗ್ರ ಕಲಿಕೆಗೆ ಒಳಿತಿಗಿಂತಲೂ ಹೆಚ್ಚು ಹಾನಿಯನ್ನು ಉಂಟುಮಾಡುತ್ತದೆ. ಈ ವಿಧಾನದ ಮೂಲಕ, ನಾವು ಬುನಾದಿ ಸಾಕ್ಷರತೆ ಮತ್ತು ಬುನಾದಿ ಸಂಖ್ಯಾಶಾಸ್ತ್ರ ಜ್ಞಾನಕ್ಕೆ (Foundational Literacy and Numeracy - FLN) ಸಂಬಂಧಿಸಿದ ಸಾಮರ್ಥ್ಯಗಳನ್ನು ಪೂರೈಸಬಹುದು, ಆದರೆ ಬುನಾದಿ ಸಾಕ್ಷರತೆ ಮತ್ತು ಬುನಾದಿ ಸಂಖ್ಯಾಶಾಸ್ತ್ರ ಜ್ಞಾನವು ಕೇವಲ ಕಲಿಕೆಯ ಒಂದು ಘಟಕವಾಗಿದೆ ಮತ್ತು ಸ್ವತಃ ಕಲಿಕೆಯಲ್ಲ ಎಂಬ ಅಂಶವನ್ನು ನಿರ್ಲಕ್ಷಿಸಬಾರದು. ಸಾಮಾಜಿಕ ಮತ್ತು ಭಾವನಾತ್ಮಕ ಕಲಿಕೆಯನ್ನು ನಮ್ಮ ಬೋಧನಾ ಯೋಜನೆಗಳು ಮತ್ತು ಮೌಲ್ಯಮಾಪನಾ ವಿಧಾನಗಳಿಗೆ ಅಳವಡಿಸಿಕೊಳ್ಳುವುದು (Factoring) ಪ್ರಕ್ರಿಯೆಯ ಅವಿಭಾಜ್ಯ ಅಂಗವಾಗಿದೆ ಮತ್ತು ಅದು ಕೇವಲ ಒಂದು ಆಯ್ಕೆಯಲ್ಲ.

## 21ನೇ ಶತಮಾನದಲ್ಲಿ ಸಮಾಜೋ ಭಾವನಾತ್ಮಕ ಕಲಿಕೆ – SEL

ಸಮಾಜೋ ಭಾವನಾತ್ಮಕ ಕಲಿಕೆ ಹಾಗೂ ತರಗತಿಯ ಪ್ರಕ್ರಿಯೆಗಳು ಒಟ್ಟೊಟ್ಟಿಗೆ ಸಾಗುತ್ತವೆ. ಇಂದಿನ ವೇಗದ ಜಗತ್ತಿನಲ್ಲಿ, ಕೇವಲ ಉತ್ತಮ ಶ್ರೇಣಿಗಳು ಮತ್ತು ಪ್ರಮಾಣಪತ್ರಗಳು ದೀರ್ಘಾವಧಿಯಲ್ಲಿ ಒಬ್ಬ ವ್ಯಕ್ತಿಗೆ ಸಹಾಯ ಮಾಡುವುದಿಲ್ಲ. ತಂಡಗಳಲ್ಲಿ ಕೆಲಸ ಮಾಡುವ ಸಾಮರ್ಥ್ಯ, ಒಬ್ಬರ ಅಭಿಪ್ರಾಯವನ್ನು ಮುಕ್ತವಾಗಿ ಮತ್ತು ಪರಿಣಾಮ-ಕಾರಿಯಾಗಿ ವ್ಯಕ್ತಪಡಿಸುವುದು ಮತ್ತು ಸೃಜನಶೀಲ ಪರಿಹಾರಗಳನ್ನು ಉಂಟುಮಾಡುವ ವಿಶ್ಲೇಷಣಾತ್ಮಕ ದೃಷ್ಟಿ-ಕೋನವನ್ನು ಅಭಿವೃದ್ಧಿಪಡಿಸುವುದು, ಇವೆಲ್ಲವೂ ಬೆಳವಣಿಗೆ ಮತ್ತು ಯಶಸ್ಸಿಗೆ ಅವಶ್ಯಕವಾಗಿದೆ. ಇಂತಹ ಗುಣಲಕ್ಷಣಗಳನ್ನು ಕೇವಲ ಉತ್ತಮ ಶ್ರೇಣಿಗಳಿಂದ ಹಾಗೂ ಪ್ರಮಾಣಪತ್ರಗಳಿಂದ ಮಾತ್ರ ಪರಿಶೀಲಿಸಲು ಸಾಧ್ಯವಿಲ್ಲ; ಪ್ರಸ್ತುತ ಜಗತ್ತಿನ ವೇಗಕ್ಕೆ ಸರಿಹೊಂದುವಂತೆ ಇವುಗಳನ್ನು ಆರ್ಜಿಸಬೇಕು. ನಿರ್ದಿಷ್ಟ ವಿಷಯದ ಶೈಕ್ಷಣಿಕ ಜ್ಞಾನವನ್ನು ಜೀವನದ ವಿವಿಧ ಹಂತಗಳಲ್ಲಿ ಪಡೆದುಕೊಳ್ಳಬಹುದು, ಆದರೆ ಸಹಜವಾದ ಸಂವಹನ, ಸೃಜನಾತ್ಮಕ ಚಿಂತನೆ, ಸಹಕಾರ ಮತ್ತು ಸಮಸ್ಯೆ-ಪರಿಹರಿಸುವ ಸಾಮರ್ಥ್ಯಗಳನ್ನು ಕಲಿಕೆಯ ಆರಂಭಿಕ ಹಂತಗಳಿಂದಲೇ ಪೋಷಿಸಬೇಕು. ಬೇಸರದ ಸಂಗತಿಯೆಂದರೆ, ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯು ಮಾನವ ಅಭಿವೃದ್ಧಿಯ ಈ ನಿರ್ಣಾಯಕ ಅಂಶಗಳಿಂದ ದೂರವಿರುವುದಲ್ಲದೆ ಅವುಗಳ ಬಗ್ಗೆ ಅರಿವೇ ಇಲ್ಲವೆಂದು ತೋರುತ್ತದೆ.

ಶಿಕ್ಷಕರು ಸಮಾಜೋ ಮತ್ತು ಭಾವನಾತ್ಮಕ ಕಲಿಕೆಯನ್ನು ತರಗತಿ ಪ್ರಕ್ರಿಯೆಯ ಸಾಧಕವಾದ ಅಂಶವೆಂದು ಒಪ್ಪಿಕೊಂಡರೆ ನಮ್ಮ ತರಗತಿಗಳನ್ನು ಸಮೃದ್ಧ ಕಲಿಕೆಯ ಸ್ಥಳಗಳಾಗಿ ಪರಿವರ್ತಿಸಬಹುದು. ನಮ್ಮ ತರಗತಿಗಳನ್ನು ನಮ್ಮ ಕಿರಿಯ ಶಿಕ್ಷಣಾರ್ಥಿಗಳಿಗೆ ಪರಿಣಾಮಕಾರಿ ಮತ್ತು ಅನುಕೂಲಕರ ಕಲಿಕೆಯ ಸ್ಥಳಗಳಾಗಿ ಪರಿವರ್ತಿಸುವ ಸಂಪೂರ್ಣ ಪ್ರಕ್ರಿಯೆಯನ್ನು ಪ್ರಾರಂಭಿಸಲು ಈ ಅರಿವು ಸಾಕಾಗುತ್ತದೆ.

## ಸಂಕ್ಷಿಪ್ತವಾಗಿ

ಇಂದು, ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುವವರು ಕಲಿಕೆಯ ನಷ್ಟವನ್ನು ಸರಿದೂಗಿಸುವ (learning recovery) ಮಾರ್ಗಗಳನ್ನು ಹುಡುಕುವಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಈ ಅನ್ವೇಷಣೆಯ ಸಮಸ್ಯೆಯೆಂದರೆ ಅದು ಕೇವಲ ಶೈಕ್ಷಣಿಕ ಸಾಧನೆಗೆ ಸೀಮಿತವಾಗಿದೆ ಎಂಬ ಭಯ, ಭಾವನಾತ್ಮಕ ಬೆಳವಣಿಗೆ ಮತ್ತು ಕಲಿಕೆಯ ಅಂಶಗಳ ನಿರ್ಲಕ್ಷ್ಯ, ಆ ಪ್ರಕ್ರಿಯೆಯು ಮಾನವ ಮೌಲ್ಯಗಳ ಆರೋಗ್ಯವಂತ ಆಧಾರದ ಕಡೆಗಣನೆ ಮತ್ತು ಕೇವಲ ಮೇಲ್ನೋಟದ ಶೈಕ್ಷಣಿಕ ವಿಧಾನಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಇದಲ್ಲದೆ, ಇಂದು ವೃತ್ತಿಪರರಿಗೆ ಅಗತ್ಯವಿರುವ ಕೌಶಲಗಳನ್ನು ಕೇವಲ ಶೈಕ್ಷಣಿಕ ವಿಧಾನದ ಮೂಲಕ ಕಲಿಸಲು ಸಾಧ್ಯವಿಲ್ಲ, ಏಕೆಂದರೆ ಇವುಗಳು ಸಾಮಾಜೀಕರಣ (socialisation) ಪ್ರಕ್ರಿಯೆಯ ಮೂಲಕ ಸಹಕಾರ ಮತ್ತು ಸಹಯೋಗ, ಅನುಕಂಪ ಮತ್ತು ಸಹಾನುಭೂತಿಯ ಕೌಶಲಗಳನ್ನು ಪಡೆದುಕೊಳ್ಳಲು ಮತ್ತು ಗೌರವಿಸಲು ಅನುಕೂಲಕರ ವಾತಾವರಣಕ್ಕೆ ನಮ್ಮನ್ನು ಒಡ್ಡುವ ಮೂಲಕ ಆರ್ಜಿಸಿಕೊಂಡು ಅಭಿವೃದ್ಧಿಗೊಳಿಸಲಾಗುತ್ತದೆ ಮತ್ತು

ನಮ್ಮ ಶಿಕ್ಷಣಾರ್ಥಿಗಳನ್ನು ಇದಕ್ಕೆ ಸೂಕ್ತವಾಗಿ ಸಿದ್ಧಪಡಿಸಲಾಗುತ್ತಿಲ್ಲ. ನಾವು ಭವಿಷ್ಯದ ಸಮರ್ಥ ವೃತ್ತಿಪರರನ್ನು ಸೃಷ್ಟಿಸುವುದು ಮಾತ್ರವಲ್ಲದೆ ನಮ್ಮ ಸಮಾಜಕ್ಕಾಗಿ ಸಹಾನುಭೂತಿ, ಅರಿವು ಮತ್ತು ಸಂವೇದನಾಶೀಲ ನಾಗರಿಕರನ್ನು ಸೃಷ್ಟಿಸುವ ಸಲುವಾಗಿ, ಸಮಾಜೋ ಮತ್ತು ಭಾವನಾತ್ಮಕ ಕಲಿಕೆಯ ಕುರಿತು ಶಿಕ್ಷಕ ಸಮುದಾಯವನ್ನು ಸಂವೇದನಾಶೀಲಗೊಳಿಸುವುದು ನಮ್ಮ ಶಿಕ್ಷಣ ವ್ಯವಸ್ಥೆಯ ಪ್ರಧಾನ ನಿರ್ದೇಶನವಾಗಿರಬೇಕು.

*ಮಕ್ಕಳ ಗುರುತನ್ನು ರಕ್ಷಿಸಲು ಹೆಸರುಗಳನ್ನು ಬದಲಾಯಿಸಲಾಗಿದೆ.

**ಪರಾಮರ್ಶನ**


Multiple Intelligences, Howard Gardner

Divasvapna, Gijubhai Badheka

National Curriculum Framework (NCF) 2005

National Education Policy (NEP) 2020

*Why Social and Emotional Learning Is Essential for Students* https://www.edutopia.org/blog/why-sel-essential-for-students-weissberg-durlak-domitrovich-gullotta





**ಶುಭಂ ರಾತುರಿ** ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ರಾಜಸ್ಥಾನದ ರಾಜ್‌ಸಮಂದ್ ಜಿಲ್ಲೆಯ ಕುಂಭಲ್‌ಗಢ್ ಬ್ಲಾಕ್‌ನಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ಶಿಕ್ಷಕರು ಮತ್ತು ಯುವಕರೊಂದಿಗೆ ವಿಷಯಾಧಾರಿತವಾಗಿ ಮತ್ತು ಸಾಮಾಜಿಕ ಸಮಸ್ಯೆಗಳ ಕುರಿತು ಅವರ ದೃಷ್ಟಿಕೋನಗಳ ಮೇಲೆ ಕೆಲಸ ಮಾಡುವುದರ ಜೊತೆಗೆ, ಅವರು ಯುವ ಕಲಿಕಾರ್ಥಿಗಳಿಗಾಗಿ ಎರಡನೇ ಭಾಷೆಯ, ವಿಶೇಷವಾಗಿ ಇಂಗ್ಲಿಷ್ ಭಾಷೆಯಲ್ಲಿನ ಪ್ರಾವೀಣ್ಯತೆಗಾಗಿ ತಮ್ಮನ್ನು ತಾವು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಅವರನ್ನು shubham.raturi@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಶೌಕತ್ ಅಲಿ** | ಪರಿಶೀಲನೆ: **ಲತಾ ಕೆ.ಸಿ.**

# ಮಕ್ಕಳ ಮಾತನ್ನು ಆಲಿಸುವುದರ ಪ್ರಾಮುಖ್ಯತೆ

ಸುಕೃತಿ ಲಖ್ತಾಕಿಯ

'ಮೇಡಂ! ಮೇಡಂ! ಮೇಡಂ!' ಎಂದು ಎಲ್ಲರೂ ಒಟ್ಟಾಗಿ ಕಲರವ ಎಬ್ಬಿಸುವ ಧ್ವನಿಯನ್ನು ಆಲಿಸುವುದು ಪ್ರಾಥಮಿಕ ಶಾಲೆಯ ಯಾವುದೇ ಶಿಕ್ಷಕರಿಗೆ ಸಾಮಾನ್ಯ ದಿನಚರಿಯಾಗಿರುತ್ತದೆ. ನನ್ನ ವೈಯಕ್ತಿಕ ಅನುಭವದ ಪ್ರಕಾರ, ತಮ್ಮ ಮಾತನ್ನು ಶಿಕ್ಷಕರು ಕಿವಿಗೊಟ್ಟು ಆಲಿಸುವವರೆಗೂ ಮಕ್ಕಳು ಶಿಕ್ಷಕರ ಹಿಂದೆ ಮುಂದೆ ಸುತ್ತುತ್ತಾ ಗಲಾಟೆ ಎಬ್ಬಿಸುತ್ತಲೇ ಇರುತ್ತಾರೆ. ಅವರು ಹೇಳಬೇಕಾದ ಮಾತು ಅವರು ತೋರಿಸಿಕೊಳ್ಳುವಷ್ಟು ಗಂಭೀರವಾದುದೇನೂ ಆಗಿರುವುದಿಲ್ಲ. 'ಮೇಡಂ, ನಾನು ನೀರು ಕುಡಿಯಬಹುದಾ?', 'ಮೇಡಂ, ನಾನು ಶೌಚಾಲಯಕ್ಕೆ ಹೋಗಬಹುದಾ?' ಎಂದೋ, ಅಥವಾ ಆತುರದಿಂದ, 'ಮೇಡಂ, ನಾನು ಇವತ್ತು ಬುತ್ತಿಗೆ ಅವಲಕ್ಕಿ ತಂದಿದ್ದೇನೆ' ಎಂಬಂತಹ ಸರ್ವೇಸಾಮಾನ್ಯ ಮಾತುಗಳೇ ಆಗಿರುತ್ತವೆ. ಆದರೆ ಅದನ್ನು ಅವರು ಅತ್ಯಂತ ತುರ್ತು ಎಂಬಂತೆಯೋ, ಏನೋ ರಹಸ್ಯವಾದುದನ್ನು ಶಿಕ್ಷಕರೊಂದಿಗೆ ಹಂಚಿಕೊಳ್ಳಲಿದ್ದಾರೆ ಎಂಬಂತೆಯೋ ತೋರ್ಪಡಿಸಿಕೊಳ್ಳುತ್ತಾರೆ!

## ಕಿವಿಗೊಡುವುದರ ಮತ್ತು ಆಲಿಸುವುದರ ನಡುವಿನ ಅಂತರ

'ಕಿವಿಗೊಡುವುದು' (hearing) ಮತ್ತು 'ಆಲಿಸುವುದರ' (listening) ನಡುವೆ ಅಂದರೆ, ಗಮನವಿಟ್ಟು ಕೇಳಿಸಿಕೊಳ್ಳುವುದರ ನಡುವೆ ಅಂತರವಿದೆ ಎಂಬುದನ್ನು ಮರೆಯುವುದು ಸುಲಭ. ಕಿವಿಗೊಡುವುದು ಎಂದರೆ, ನಮ್ಮ ಶರೀರದ ಮೂಲಕ ನಡೆಸುವ ಸ್ಪಷ್ಟವಾದ ದೈಹಿಕ ಸ್ಪಂದನೆ; ನಮ್ಮ ಸುತ್ತಮುತ್ತಲಿನ ಶಬ್ದಗಳನ್ನು ದಾಖಲಿಸಲು ಬೇಕಾದಂತೆ ನಮ್ಮ ಕಿವಿಗಳು ವಿನ್ಯಾಸಗೊಂಡಿವೆ. ಮತ್ತೊಂದೆಡೆ, ಗಮನವಿಟ್ಟು ಕೇಳಿಸಿಕೊಳ್ಳುವುದು ಎಂದರೆ, ಗ್ರಹಣಶಕ್ತಿಯ ಸ್ಪಂದನೆಯಾಗಿದೆ (cognitive response). ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಕೇಳಿಸಿಕೊಳ್ಳುವುದು ಎಂದರೆ, ಯಾರದೋ ಮಾತಿಗೆ ಕಿವಿಗೊಡುತ್ತಿದ್ದೇವೆ ಎಂದರ್ಥ– ಅವರೇನು ಹೇಳುತ್ತಿದ್ದಾರೋ ಅದಕ್ಕೆ ಮತ್ತು ಅದನ್ನು ಹೇಗೆ ಹೇಳಲಾಗುತ್ತಿದೆ ಎಂಬುದಕ್ಕೆ ಕಿವಿಗೊಡುತ್ತಿದ್ದೇವೆ. ಆ ಮೂಲಕ, ನಾವು ಮಾತನಾಡುವವನಿಗೆ ಪ್ರತಿಕ್ರಿಯಿಸಬಹುದು. ಈ ವಿರೋಧಾಭಾಸವನ್ನು ಗಮನದಲ್ಲಿಟ್ಟುಕೊಂಡಾಗ, ಮಕ್ಕಳನ್ನು ಕೇಳಿಸಿಕೊಳ್ಳುವುದು ಮತ್ತು ಅವರ ಮಾತನ್ನು ಕಿವಿಗೊಟ್ಟು ಆಲಿಸುವುದು ಎರಡೂ ವಿಭಿನ್ನ ಸಂಗತಿಗಳಾಗುತ್ತವೆ.

ಐದು ತಿಂಗಳಿಂದ ನಾನು ಶಾಲೆಯಲ್ಲಿ ಒಂದನೇ ತರಗತಿಗೆ ಶಿಕ್ಷಕಿಯಾಗಿದ್ದು, ನಾನು ಇಲ್ಲಿ ಕಲಿತ ಅತ್ಯಂತ ಮಹತ್ವದ ಸಂಗತಿ ಎಂದರೆ, ಮಕ್ಕಳ ಮಾತುಗಳನ್ನು ಕಿವಿಗೊಟ್ಟು ಕೇಳಿಸಿ–ಕೊಳ್ಳುವುದರ ಮೌಲ್ಯ. ಅನೇಕ ಮಕ್ಕಳು, ವಿಶೇಷವಾಗಿ ಕಡಿಮೆ ಆದಾಯದ ಕುಟುಂಬಗಳಿಂದ ಬಂದ ಸರ್ಕಾರಿ ಶಾಲಾ ಮಕ್ಕಳು, ತಮ್ಮ ಚಿಂತನೆಗಳಿಗೆ, ಯೋಚನೆಗಳಿಗೆ, ಕಲ್ಪನೆಗಳಿಗೆ ಮತ್ತು ತಮ್ಮ ಭಯ, ಬೇಸರಗಳಿಗೆ ಕಿವಿಯಾಗಲು ಆಸಕ್ತಿ ಉಳ್ಳವರನ್ನು ಕಂಡುಕೊಳ್ಳುವಲ್ಲಿ ವಿಫಲರಾಗುತ್ತಾರೆ. ಅವರ ಹೆತ್ತವರು ಹೆಚ್ಚಿನ ಅವಧಿ ಕೆಲಸದಲ್ಲಿ ಕಳೆಯಬಹುದು, ಒಡಹುಟ್ಟಿದವರು (ಇದ್ದರೆ) ಒಂದೋ ಅವರಿಗಿಂತ ತುಂಬಾ ದೊಡ್ಡವರಾಗಿರುತ್ತಾರೆ ಇಲ್ಲವೇ ತೀರಾ ಸಣ್ಣವರಾಗಿರುತ್ತಾರೆ; ಅವರ ಉಳಿದ ಕುಟುಂಬ ಎಲ್ಲೋ ದೂರದಲ್ಲಿ ವಾಸಿಸುತ್ತಿರುತ್ತಾರೆ. ಇದೆಲ್ಲಕ್ಕಿಂತ ಮುಖ್ಯವಾಗಿ, ಶಾಲೆಯಲ್ಲಿ ಸಾಮಾನ್ಯವಾಗಿ ಶಿಕ್ಷಕರು ಮಕ್ಕಳು ಏನು ಹೇಳುತ್ತಾರೆ ಎಂಬುದನ್ನು ತಾಳ್ಮೆಯಿಂದ ಕೇಳಿಸಿಕೊಳ್ಳುವಷ್ಟು ತಾಳ್ಮೆ ಮತ್ತು ಶಕ್ತಿ ಹೊಂದಿರುವುದಿಲ್ಲ. ಯಾಕೆಂದರೆ, ಮಕ್ಕಳ ಮಾತು ಅಪ್ರಸ್ತುತವಾದುದು ಎಂಬುದು ಅವರ ಸಾಮಾನ್ಯ ಅಭಿಪ್ರಾಯ.

ಈ ಎಲ್ಲಾ ಉಪೇಕ್ಷೆಗಳ / ಅನಾದರಗಳ ಮಧ್ಯೆ ಸಿಕ್ಕಿಹಾಕಿಕೊಂಡ ಮಕ್ಕಳು, ತಮ್ಮ ಮಾತಿಗೆ ಕಿವಿಗೊಡಬಲ್ಲವರನ್ನು ಥಟ್ಟನೆ ಗುರುತಿಸಿ, ಅವರಿಗೆ ಅಂಟಿಕೊಳ್ಳುತ್ತಾರೆ. ವಾಸ್ತವವಾಗಿ, ವಯಸ್ಕರೊಂದಿಗೆ ಮಾತನಾಡುವುದಕ್ಕಿಂತ ಮಕ್ಕಳೊಂದಿಗೆ ಮಾತುಕತೆ ಸ್ವಾರಸ್ಯಕರವಾಗಿರುತ್ತದೆ. ಯಾಕೆಂದರೆ, ಮಕ್ಕಳ ಅನಿರೀಕ್ಷಿತ ಪ್ರತಿಕ್ರಿಯೆ, ಅಸಾಂಪ್ರದಾಯಿಕ ರೀತಿಯ ಯೋಚನೆಗಳು ಮತ್ತು ರಚನಾತ್ಮಕವಲ್ಲದ ನಂಬಿಕೆಗಳು ಅಚ್ಚರಿ ಮೂಡಿಸುವಂತಿರುತ್ತವೆ.

## ಕೇಳುಗರಾಗಿ ಶಿಕ್ಷಕರು

ಶಾಲೆಯಲ್ಲಿ ಮಾರ್ಗದರ್ಶಕರಾಗಿ (ಶಿಕ್ಷಕರಾಗಿ), ಮಕ್ಕಳ ಮೌಖಿಕ ಅಭಿವ್ಯಕ್ತಿಗಳಿಗೆ ಸಮರ್ಪಕ ಅವಕಾಶ ಕಲ್ಪಿಸುವುದು ಬಹಳ ಮುಖ್ಯ. ಎನ್‌ಸಿಇಆರ್‌ಟಿ ಕೊಟ್ಟಿರುವಂತೆ ಪ್ರಾಥಮಿಕ ತರಗತಿಗಳಿಗೆ ಪುನರಾವರ್ತಿತ ಕಲಿಕೆಯ ಫಲಿತಾಂಶವು, 'ಒಂದು ಘಟನೆಯನ್ನು ವಿಸ್ತೃತವಾಗಿ ವಿವರಿಸಬಲ್ಲ ಸಾಮರ್ಥ್ಯ ಬೆಳೆಸುವುದು, ಕೊಟ್ಟಿರುವಂತಹ ಒಂದು ಕಾಲ್ಪನಿಕ ಸನ್ನಿವೇಶಕ್ಕೆ ಹೇಗೆ ಸ್ಪಂದಿಸುವುದು ಮತ್ತು ಅವರ ದೈನಂದಿನ ಅನುಭವಗಳನ್ನು ಹಂಚಿಕೊಳ್ಳುವ ಸಾಮರ್ಥ್ಯ ಬೆಳೆಸುವುದು' ಆಗಿರುತ್ತದೆ. ಇಂತಹ ಕಲಿಕೆಯ ಪರಿಣಾಮ / ಫಲಿತಾಂಶಗಳಿಗೆ ಸಣ್ಣ ವಯಸ್ಸಿನಿಂದಲೇ ಮಕ್ಕಳ ಸಮಾಜೋ– ಭಾವನಾತ್ಮಕ ಬೆಳವಣಿಗೆಯೊಂದಿಗೆ ನಂಟು ಇರುತ್ತದೆ. ಇವೆಲ್ಲವುಗಳಿಗಾಗಿ, ಹಂಚಿಕೊಂಡ ಮಾಹಿತಿಗಳನ್ನೆಲ್ಲಾ ಅರ್ಥ ಮಾಡಿಕೊಂಡು, ಅದನ್ನು ಪರಿಷ್ಕರಿಸಬಲ್ಲ / ಪ್ರಕ್ರಿಯೆ ಮಾಡಿ, ಇನ್ನಷ್ಟು ಚಿಂತನೆಯನ್ನು ರಚನಾತ್ಮಕವಾಗಿ ಪ್ರೇರೇಪಿಸಬಲ್ಲ ಒಬ್ಬ ಕ್ರಿಯಾಶೀಲ ಕೇಳುಗರ

ಅವಶ್ಯಕತೆ ಇರುತ್ತದೆ. ಶಾಲೆಯಲ್ಲಿರುವ ಶಿಕ್ಷಕರೇ ಇದಕ್ಕೆ ಸೂಕ್ತ ವ್ಯಕ್ತಿ. ಶಿಕ್ಷಕಿಯು ಮಕ್ಕಳ ಮಾತಿಗೆ ಕಿವಿಗೊಟ್ಟು ಆಲಿಸುವ ಜೊತೆಗೆ, ಮಾತಿನ ನಡುವೆ ವಿವರ ಕೇಳಿ ತಿಳಿದುಕೊಂಡು ಮಕ್ಕಳು ಹೇಳುವುದನ್ನು ಅರ್ಥ ಮಾಡಿಕೊಳ್ಳಲೂ ಇದು ಸಹಕಾರಿ.

### ತಾಜಾ ಅನುಭವಗಳು

ಒಂದು ದಿನ ನಾನು ಶಾಲೆಗೆ ಹೋಗಿ, ತರಗತಿಯೊಳಗೆ ಪ್ರವೇಶಿಸುವಷ್ಟರಲ್ಲಿ ರೂಬಿ (ಎಂಟು ವರ್ಷದ ಬಾಲಕಿ), ತನಗೆ ಹಿಂದಿನ ರಾತ್ರಿ ಚೇಳು ಕಚ್ಚಿತ್ತು ಎಂದು ಹೇಳಲು ಓಡೋಡಿ ಬಂದಳು. ನನಗೆ ಆಶ್ಚರ್ಯವಾಗಿ, ಹೇಗಾಯ್ತು, ನೀನು ಆರಾಮವಾಗಿ ಇದ್ದೀಯಾ ತಾನೆ, ನಿನ್ನ ಹೆತ್ತವರು ಏನು ಮಾಡಿದರು ಮುಂತಾದವುಗಳನ್ನು ವಿವರಿಸುವಂತೆ ಹೇಳಿದೆ. ಅವಳು, 'ಅಮ್ಮ ಮತ್ತು ಅಪ್ಪ ಏನೂ ಹೇಳಲಿಲ್ಲ. ನಾನೇ ಬೋರೊಪ್ಲಸ್ಹಚ್ಚಿದೆ' ಎಂದು ಹಿಂದಿಯಲ್ಲಿ ಹೇಳಿದಳು. ಅವಳ ಉತ್ತರ ತಮಾಷೆಯಾಗಿ ಕಂಡಿದ್ದಲ್ಲದೆ, ಸಮಾಧಾನವೂ ಆಯಿತು. ಯಾಕೆಂದರೆ ಅವಳಿಗೆ ಕಚ್ಚಿದ್ದು ಚೇಳು ಆಗಿರಲು ಸಾಧ್ಯವೇ ಇರಲಿಲ್ಲ. ಗಣೇಶ್(ಏಳು ವರ್ಷ), ಒಂದು ದಿನ ಎಂದಿನಂತೆ ಇಲ್ಲದೆ ಮೌನವಾಗಿದ್ದ. ಯಾಕೆ ಎಂದು ವಿಚಾರಿಸಿದಾಗ, 'ತಂದೆಯ ಸೈಕಲ್ಕಳುವಾಗಿದೆ. ನಾವು ಮಂಗೋಡಿ (Mangodi) ತಿನ್ನುತ್ತಿದ್ದಾಗ ಕಳ್ಳ ಬಂದು ಸೈಕಲ್ಎತ್ತಿಕೊಂಡು ಹೋಗಿಬಿಟ್ಟ' ಎಂದನು. ಆ ನಂತರದ ದಿನಗಳಲ್ಲಿ ನಾನು ಅವನನ್ನು ಪ್ರತಿ ದಿನವೂ 'ಸೈಕಲ್ಸಿಕ್ಕಿತೇ' ಎಂದು ವಿಚಾರಿಸುತ್ತಿದ್ದೆ. ಇಲ್ಲ ಎಂದು ಉತ್ತರಿಸುತ್ತಿದ್ದ. ಆದರೆ, ನಾನು ತರಗತಿ ಪ್ರವೇಶಿಸುವಾಗ ಮತ್ತು ತರಗತಿ ಮುಗಿಸಿ ಹೊರಡುವಾಗ ದಿನಾಲೂ ಅವನು ನನಗೆ ನಮಸ್ಕರಿಸಲು ಶುರು ಮಾಡಿದ. ಪ್ರೀತಿಯಿಂದ ಡುಗ್ಗು ಎಂದು ಕರೆಸಿಕೊಳ್ಳುತ್ತಿದ್ದ ಐದು ವರ್ಷದ ಹರಿ ಓಂ, ಪ್ರತಿದಿನವೂ ಕಣ್ಣಲ್ಲಿ ನೀರು ತುಂಬಿಕೊಂಡೇ ಶಾಲೆಗೆ ಬರುತ್ತಿದ್ದ. ಬಂದವನೇ, 'ಮೇಡಂ, ನಾವು ಮನೆಗೆ ಹೋಗುವುದು ಯಾವಾಗ? ನನ್ನ ಸಹೋದರ ಎಷ್ಟು ಹೊತ್ತಿಗೆ ಬರುತ್ತಾನೆ?' ಎಂದು ಕೇಳುತ್ತಿದ್ದ. ಶಾಲೆಯಲ್ಲಿ ಮರುಗಿಕೊಂಡೇ ಇರುತ್ತಿದ್ದ ಅವನಿಗೆ ಶಾಲೆಗೆ ಬರುವುದು ಇಷ್ಟವೇ ಇಲ್ಲದಿರುವುದು ಅಚ್ಚರಿಯ ಸಂಗತಿಯಾಗಿರಲಿಲ್ಲ. ಇದರಿಂದಾಗಿ ಅವನ ಯೋಚನಾ ಶಕ್ತಿ ಮತ್ತು ಕಲಿಕಾ ಸಾಮರ್ಥ್ಯಕ್ಕೂ ಧಕ್ಕೆಯಾಗುತ್ತಿರುವುದನ್ನು ನಾನು ಅರಿತೆ. ಹರಿ ಓಂ ಒಬ್ಬ ಅನಾಥ ಬಾಲಕ ಎಂದು ಕೆಲವೇ ದಿನಗಳಲ್ಲಿ ನನಗೆ ಗೊತ್ತಾಯಿತು. ಕೆಲವು ವಾರ ಗಮನಿಸಿದ ಬಳಿಕ, ಅವನಿಗೆ ಕಲಿಕಾ ನ್ಯೂನತೆ (learning disability) ಇರುವ ಸಂದೇಹ ಉಂಟಾಯಿತು. ಆದರೆ, ಅವನೊಂದಿಗೆ ಸೌಹಾರ್ದ ಸಂಬಂಧ ಬೆಳೆಸಿಕೊಳ್ಳಬೇಕಾದರೆ, ಅವನ ಮಾತಿಗೆ ಕಿವಿಗೊಡಬೇಕು, ಆತ್ಮೀಯವಾಗಿ ಮಾತನಾಡಬೇಕು ಮತ್ತು ನಿರ್ಭೀತ ವಾತಾವರಣವನ್ನು ನಿರ್ಮಿಸಿ, ಅವನು ತನ್ನ ಭಾವನೆಗಳನ್ನು ಹಂಚಿಕೊಳ್ಳುವಂತೆ ಮಾಡಬೇಕಾಗಿತ್ತು. ಅವನು ನನಗೆ ಕುಳ್ಳಿ ಟೀಚರ್('ಚೋಟಿ ಮೇಡಂ') ಎಂದು ಹೆಸರಿಟ್ಟಿದ್ದ. ಕ್ರಮೇಣ ಅವನ ಕಣ್ಣೀರು ನಿಂತುಹೋಗಿದ್ದಲ್ಲದೆ, ಆಗಾಗ ಅವನ ಮುಖದಲ್ಲಿ ನಗು ಮೂಡಲಾರಂಭಿಸಿತು ಹಾಗೂ ಕಲಿಯುವ ಆಸಕ್ತಿಯನ್ನು ತೋರಲಾರಂಭಿಸಿದ. ಕೆಳಗಿನ ಚಿತ್ರದಲ್ಲಿ, ನಾನು ಅವನ ಚಿತ್ರ ಬಿಡಿಸಿ ಅವನ ಹೆಸರು ಬರೆದೆ. ಪ್ರತಿಯಾಗಿ ಅವನು ನನ್ನ ಚಿತ್ರ ಬರೆದ. (ಚಿತ್ರ 2). 'ಇದು ನಾನು ತಾನೇ? ಹಾಗಿದ್ದರೆ ನನ್ನ ಕೂದಲು ಎಲ್ಲಿ? ನನ್ನ ಕೈ-ಕಾಲು ಎಲ್ಲಿ?" ಎಂದು ನಾನು ಕೇಳಿದಾಗ, ತಾನು ಬಿಡಿಸಿದ ಚಿತ್ರದಲ್ಲಿ ಅವೆಲ್ಲ ವಿವರಗಳನ್ನೂ ತಕ್ಷಣವೇ ಸೇರಿಸಿದ.

ಮಕ್ಕಳು ತಮಗೆ ಅನಿಸಿದ್ದನ್ನು ಪ್ರಾಮಾಣಿಕವಾಗಿ ನನ್ನೊಂದಿಗೆ ಮುಕ್ತವಾಗಿ ಹೇಳಿಕೊಳ್ಳುತ್ತಾರೆ. ಕೆಲವೊಮ್ಮೆ ತರಗತಿಯಲ್ಲಿನ ಚಟುವಟಿಕೆಗಳು ಅವರಿಗೆ ಇಷ್ಟವಾಗದೇ ಇದ್ದರೆ ಅವರು, 'ಟೀಚರ್, ನಮಗೆ ಇದು ಖುಷಿ ಕೊಡುತ್ತಿಲ್ಲ!' ಎಂದು ಮುಕ್ತವಾಗಿ ಹೇಳಿಕೊಂಡಿದ್ದಿದೆ. ಒಮ್ಮೆ ನನಗೆ ಪೆಚ್ಚೆನಿಸಿದರೂ, ಅವರ ಮುಕ್ತ ಭಾವನೆಯನ್ನಷ್ಟೇ ಪರಿಗಣಿಸುತ್ತೇನೆ. ಯಾಕೆಂದರೆ ಅದು ಅವರು ನನ್ನ ತರಗತಿಯಲ್ಲಿ ಆರಾಮವಾಗಿ ಇದ್ದಾರೆ ಎಂಬುದರ ಸಂಕೇತ.



ಚಿತ್ರ 1. ಹರಿ ಓಂನ ಸ್ಲೇಟಿನಲ್ಲಿ ನಾನು ಬಿಡಿಸಿದ ಅವನ ಚಿತ್ರ.



ಚಿತ್ರ 2. ಹರಿ ಓಂ ಬಿಡಿಸಿದ ನನ್ನ ಅಂದರೆ 'ಕುಳ್ಳಿ ಟೀಚರ್'ನ ಚಿತ್ರ

## ಚಿಟ್ಟೆಯ ಸಾಧನದೊಂದಿಗೆ ಕತೆ ಹೇಳಿದ ಮಕ್ಕಳು

ಚಿಟ್ಟೆಯ ಸಾಧನದೊಂದಿಗೆ ನಡೆಸಿದ ಸಂಭಾಷಣೆಯು, ನನ್ನ ತರಗತಿಯಲ್ಲಿ ನಾವು ಕೈಗೊಂಡ ಅತ್ಯುತ್ತಮ ಸಂಭಾಷಣೆಯಾಗಿ ಹೊರಹೊಮ್ಮಿತು. ಗಣಿತದ ಆರಂಭಿಕ ಹಂತದಲ್ಲಿ, ಎಣಿಕೆ ಮತ್ತು ಅಂಕಿಗಳ ಕುರಿತಾದ ಗುಣಾತ್ಮಕ ಅರಿವನ್ನು ಬೆಳೆಸಿ, 'ಗಣಿತಮಾಲಾ'ವನ್ನು ಬಳಸಲು ಪ್ರೋತ್ಸಾಹಿಸಲಾಗಿತ್ತು. ಬೇರೆಬೇರೆ ಬಣ್ಣಗಳ ಮಣಿಗಳನ್ನು ಕ್ರಮಬದ್ಧವಾಗಿ ಹತ್ತರ ಜೋಡಿಯಲ್ಲಿ ಪೋಣಿಸಲಾದ ಮಣಿಗಳ ಮಾಲೆ ಗಣಿತ್‌ಮಾಲಾ. ಪ್ರಾಥಮಿಕ ತರಗತಿಯ ಮಕ್ಕಳಿಗೆ, ಚಲನೆಯನ್ನು ಅರ್ಥವತ್ತಾಗಿ ಹೇಳಿಕೊಡುವ ವಿಧಾನ ಇದಾಗಿದೆ. 'ಗಣಿತಮಾಲಾ'ವು ಒಂದು ಕೈತೋಟವಾಗಿದ್ದು, ಅದರಲ್ಲಿನ ಮಣಿಗಳು ಹೂವುಗಳೆಂದೂ ಕಲ್ಪಿಸಿಕೊಂಡು, ಒಂದು ಸಣ್ಣ ಕಾಗದದ ತುಂಡನ್ನು ಹೂವಿನಿಂದ ಹೂವಿಗೆ ಹಾರುವ ಚಿಟ್ಟೆ ಎಂದೂ ಕಲ್ಪಿಸಿಕೊಳ್ಳುವ, ಗಣಿತದ ಮನರಂಜನಾತ್ಮಕ ಆಟವಿದು. ತರಗತಿಗಾಗಿ ನಾನು ಹಲವಾರು ಚಿಟ್ಟೆಗಳನ್ನು ಮಾಡುತ್ತಲೇ ಇದ್ದೆ. ಯಾಕೆಂದರೆ, ಹಿಂದೆ ಮಾಡಿದ್ದ ಚಿಟ್ಟೆಗಳು ಕಳೆದುಹೋಗಿಯೋ, ಹರಿದೋ, ಸಣ್ಣ ಮಕ್ಕಳು ತೆಗೆದುಕೊಂಡೋ ಕೈತಪ್ಪಿಹೋಗಿದ್ದವು. ಒಂದು ದಿನ ನಾನು ತರಗತಿಗೆ ಹೋಗಿ ನೋಡುವಾಗ, ಮತ್ತೆ ಒಂದು ಚಿಟ್ಟೆ ಕಳೆದುಹೋಗಿದ್ದು ಗಮನಕ್ಕೆ ಬಂತು. ಆಗ ನಾನು ಉತ್ಪ್ರೇಕ್ಷಿತ ದನಿಯಲ್ಲಿ, 'ಓಹೋ ನಮ್ಮ ಚಿಟ್ಟೆ ಬಹಳ ದಿನಗಳಿಂದ ಕಾಣಿಸುತ್ತಿಲ್ಲ. ಎಲ್ಲಿ ಹಾರಿಹೋದಳು ಅವಳು? ಅವಳೆಲ್ಲಿಯಾದರೂ ಬಿದ್ದು ಏಟು ಮಾಡಿಕೊಂಡಿದ್ದರೆ?' ಎಂದು ಹೇಳಿದೆ. ಆಗ ಮಕ್ಕಳಿಂದ ಬಂದ ಪ್ರತಿಕ್ರಿಯೆ ಹೀಗಿತ್ತು:

ವೈಶಾಲಿ: ಟೀಚರ್, ನಮ್ಮ ಚಿಟ್ಟೆ ಅವಳ ಹಳ್ಳಿಗೆ ಹೋಗಿರಬಹುದು.
ಅನುಜ್: ಹೌದು! ಹಾಗಾಗಿ ವಾಪಸ್‌ಬರಲು ಅವಳು ಇಷ್ಟೊಂದು ಸಮಯ ತೆಗೆದುಕೊಳ್ಳುತ್ತಿದ್ದಾಳೆ

ರೂಬಿ: ಅವಳು ಮನೆ ಕಟ್ಟಿಕೊಳ್ಳುವುದರಲ್ಲಿ ತೊಡಗಿಸಿಕೊಂಡಿರಬಹುದು.

ನಾನು: ಓಹೋ ಹಾಗೋ? ಈ ಮಾತು ಸರಿಯಾಗಿದೆ. ಮನೆ ಕಟ್ಟುವುದೆಂದರೆ ಸಾಕಷ್ಟು ಸಮಯ ಬೇಕಾಗುತ್ತದೆ. ಅವಳು ಇಟ್ಟಿಗೆಯಿಂದ ಮನೆ ಕಟ್ಟುತ್ತಿದ್ದಾಳಾ?

ರಿಷಿ: ಇಲ್ಲ ಟೀಚರ್. ಚಿಟ್ಟೆಗಳು ಹೂವಿನಲ್ಲಿ ವಾಸಿಸುತ್ತವೆ. ಅವಳು ಹೂವುಗಳಿಂದಲೇ ಮನೆ ಕಟ್ಟುತ್ತಿದ್ದಾಳೆ.

ಈ ಇಡೀ ಮಾತುಕತೆ ನನಗೆ ಬಹಳ ಆಸಕ್ತಿಕರವಾಗಿ ಕಂಡಿತು. ಮಕ್ಕಳೆಲ್ಲರೂ ತಮ್ಮ ಪಾಡಿಗೆ ತಮ್ಮತಮ್ಮ ಕಲ್ಪನೆಗಳಿಗೆ ಎಟುಕಿದಂತೆ ಕತೆಗಳನ್ನು ಕಲ್ಪಿಸಿಕೊಂಡು ಹೇಳಿಕೊಳ್ಳ–ತೊಡಗಿದರು! ಕೆಲವೊಮ್ಮೆ, ನಾನು ಸಹಜವಾಗಿ ಎಂಬಂತೆ, ಚಿಟ್ಟೆ ಕಳೆದುಹೋದುದರ ಬಗ್ಗೆ ನಿರಾಶೆ ವ್ಯಕ್ತಪಡಿಸುತ್ತೇನೆ. ಆಗ ಮಕ್ಕಳು ಯಾರಾದರೂ ತಕ್ಷಣವೇ ಕಾಗದದ ಚಿಟ್ಟೆ ಮಾಡಿ ನನಗೆ ತಂದುಕೊಟ್ಟು, 'ನೋಡಿ ಟೀಚರ್, ನಮ್ಮ ಚಿಟ್ಟೆಯ ತಂಗಿ ಬಂದಿದ್ದಾಳೆ' ಎಂದು ಹೇಳ ಕೊಡುತ್ತಿದ್ದರು. ಗಣಿತಮಾಲ–ದೊಂದಿಗೆ ಆಟವಾಡುವಾಗಲೆಲ್ಲಾ ನಾನು ಅವರನ್ನು ಎಚ್ಚರಿಸುತ್ತಲೇ ಇರುತ್ತೇನೆ. ಉದಾಹರಣೆಗೆ, ಯಾವುದಾದರೂ ವಿದ್ಯಾರ್ಥಿ ಕಾಗದದ ಚಿಟ್ಟೆಯನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದರೆ, ನಾನು, 'ಅಯ್ಯೋ ನಮ್ಮ ಚಿಟ್ಟೆ ತುಂಬಾ ಸೂಕ್ಷ್ಮ. ಅವಳನ್ನು ಜೋಪಾನವಾಗಿ ಹಿಡಿದುಕೊಳ್ಳಬೇಕು' ಎಂದು ಹೇಳುತ್ತೇನೆ. ಒಂದು ದಿನ ಅನುಜ್‌ಹೇಳಿದ: 'ಟೀಚರ್, ನಮ್ಮ ಚಿಟ್ಟೆಗೆ ಜ್ವರ ಬಂದಿದೆ. ಅವಳ ಮೈ ಸುಡುತ್ತಿದೆ!' ಎಂದು.

ಹರಿ ಓಂಗೆ ಈ ಆಟದ ಮುಂದುವರಿಕೆ ಬಹಳ ಚೆನ್ನಾಗಿ ಹೊಂದಿಕೆಯಾಯಿತು. ಅವನು ಇನ್ನೂ ಅಂಕಿಗೂ ಹಿಂದಿನ ಪರಿಕಲ್ಪನೆಯ ಹಂತದಲ್ಲಿದ್ದುದರಿಂದ, ಅಡ್ಡಾದಿಡ್ಡಿಯಾಗಿ ಎಣಿಸುವ ವೇಳೆ ಅವನು ಎರಡೆರಡು ಸಾಲಿನ ಮಣಿಗಳನ್ನು ತಳ್ಳುತ್ತಿದ್ದ. ಹಾಗಾಗಿ, 'ಹರಿ ಓಂ, ಈ ಚಿಟ್ಟೆ ತುಂಬಾ ಸಣ್ಣದು. ಅದು ಹಲವು ಹೂವುಗಳನ್ನು ಒಂದೇ ಬಾರಿಗೆ ತಿನ್ನಲಾರಳು. ಒಂದು ಸಲಕ್ಕೆ ಒಂದೇ ಮಣಿಯನ್ನು ತಳ್ಳು. ಇಲ್ಲದಿದ್ದರೆ ಅದು ಅವಳ ಗಂಟಲಲ್ಲಿ ಸಿಕ್ಕಿಹಾಕಿಕೊಂಡೀತು!' ಎಂದು ಅವನಿಗೆ ಹೇಳಿದೆ. ನನ್ನನ್ನು ನೇರವಾಗಿ ದಿಟ್ಟಿಸಿ, ನನ್ನ ಮಾತನ್ನು ಅರ್ಥೈಸಿಕೊಂಡ ಹರಿ ಓಂ, ನಂತರ ಒಂದೊಂದೇ ಮಣಿಗಳನ್ನು ತಳ್ಳಲಾರಂಭಿಸಿದ. ಆದರೆ ಕೆಲವೇ ಹೊತ್ತಿನಲ್ಲಿ ಮತ್ತೆ ಹಿಂದಿನಂತೆ ಒಂದೇ ಬಾರಿಗೆ ಅನೇಕ ಮಣಿಗಳನ್ನು ತಳ್ಳುತ್ತಾ, 'ಟೀಚರ್, ಚಿಟ್ಟೆಗೆ ಬಹಳ ಹಸಿವಾಗಿದೆ! . ಅವಳು ಇದನ್ನೆಲ್ಲಾ ತಿನ್ನುತ್ತಾಳೆ' ಎಂದು ಆತುರದಿಂದ ಹೇಳಿದ.



ಚಿತ್ರ 3. ಗಣಿತಮಾಲ ಮತ್ತು ಚಿಟ್ಟೆಯ ಸಾಧನದೊಂದಿಗೆ ಮಕ್ಕಳು ಆಟವಾಡುತ್ತಿರುವುದು.

## ವಿಮರ್ಶಾತ್ಮಕ ಆಲೋಚನೆಯ ಕಡೆಗೆ ಒಂದು ಹೆಜ್ಜೆ

ಮಕ್ಕಳ ಮಾತಿಗೆ ಕಿವಿಗೊಡುವುದೆಂದರೆ, ಮಾತುಕತೆಯನ್ನು ಸಮೃದ್ಧಗೊಳಿಸುವ ಮೂಲಕ ಎರಡೂ ದಿಕ್ಕಿನಲ್ಲಿ ಕಲಿಕೆಗೂ ಅವಕಾಶ ನೀಡುತ್ತದೆ. ನನ್ನ ಕೆಲವು ಅನುಭವಗಳ ಪ್ರಕಾರ, ಮಕ್ಕಳಿಗೆ ನಾವು ಅಂದುಕೊಂಡದ್ದಕ್ಕಿಂತ ಹೆಚ್ಚು ತಿಳುವಳಿಕೆ ಇರುತ್ತದೆ. ಒಂದು ದಿನ ತರಗತಿಯಲ್ಲಿ, ಹಿಂದಿಯ 'ರ' ಅಕ್ಷರಕ್ಕೆ ಸಂಬಂಧಿಸಿದ ಪದಗುಚ್ಛವನ್ನು ನಾವು ರಚಿಸುತ್ತಿದ್ದೆವು. 'ರ' ಅಕ್ಷರದಿಂದ 'ರೂಪಾಯಿ' (ರ ಸೇ ರೂಪಯೇ) ಎಂದು ನಾನು ಹಿಂದಿಯಲ್ಲಿ ಬರೆದಿದ್ದೆ. ಬರೆದು ಮುಗಿದ ಮೇಲೆ ನಾನು ಅಲ್ತಾಮಶ್‌ನ್ನು (ಏಳು ವರ್ಷ) ಕರೆದು ಮುಂದೆ ಬರುವಂತೆ ಹೇಳಿ, 'ರ' ಅಕ್ಷರದೊಂದಿಗೆ ನೀನು ಏನಾದರೂ ಗುರುತಿಸಬಲ್ಲೆಯಾ?" ಎಂದು ಕೇಳಿದೆ. ಅವನು, 'ರ ಸೇ ರೂಪಯೆ' ಎಂದು ಓದಿದಾಗ ಕೆಳಗಿನ ಮಾತುಕತೆ ಸೃಷ್ಟಿಯಾಯಿತು. ಅಭಯ್(ಆರು ವರ್ಷ) ಅವನ ಪಕ್ಕದಲ್ಲಿಯೇ ನಿಂತು ಕೇಳಿಸಿಕೊಳ್ಳುತ್ತಿದ್ದ.

ಅಲ್ತಾಮಶ್ : ಟೀಚರ್, ಡಾಲರ್ ಕೂಡಾ ಆಗುತ್ತದೆ

ನಾನು : ಡಾಲರ್ಅಂದರೆ ಏನು?

ಅಲ್ತಾಮಶ್ : ಒಂದು ಡಾಲರ್ಅಂದರೆ ಒಂದು ಸಾವಿರ ರೂಪಾಯಿಗೆ ಸಮ ಎಂದು ನನ್ನ ತಂದೆ ಹೇಳುತ್ತಿದ್ದರು.

ನಾನು : ಈ ಡಾಲರ್ಎಲ್ಲಿ ಬಳಕೆಯಾಗುತ್ತದೆ?

ಅಲ್ತಾಮಶ್ : ದಿಲ್ಲಿ ಮತ್ತು ಮುಂಬೈನಲ್ಲಿ.

ನಾನು : ಡಾಲರ್ಅಮ್ರಿಕದಲ್ಲಿ ಚಲಾವಣೆಯಾಗುತ್ತದೆ ಎಂದು ನನಗೆ ಅನಿಸುತ್ತದೆ. ಅಂದ ಹಾಗೆ ನೀನು ಅಮ್ರಿಕ ಎಂಬ ಹೆಸರು ಈ ಮೊದಲು ಕೇಳಿದ್ದೀಯಾ? ಅಮ್ರಿಕಾ ಎಲ್ಲಿದೆ?

ಅಭಯ್ : ಟೀಚರ್, ಅದು ಅಮ್ರಿಕಾ ಅಲ್ಲ ಅಮೆರಿಕಾ!




**ಚಿತ್ರ 1. ಹಿಂದಿಯರ ಅಕ್ಷರದಿಂದ ರಚಿಸಿರುವ ಪದಗುಚ್ಛಗಳನ್ನು ಬರೆದ ಕಪ್ಪುಹಲಗೆಯ ಮುಂದೆ ಅಲ್ತಾಮಶ್; ಮೇಲಿನ ಎಡತುದಿಯಲ್ಲಿ ರೂಪಾಯಿ ಎಂದು ಬರೆಯಲಾಗಿದೆ**

ಶಾಲೆಯಲ್ಲಿ ಶಿಕ್ಷಕಿ ಮಕ್ಕಳ ಮಾತನ್ನು ಸಕ್ರಿಯವಾಗಿ ಕಿವಿಗೊಟ್ಟು ಆಲಿಸುವುದರಿಂದ ಮಕ್ಕಳ ಚಿಂತನಾ ಕ್ರಮವನ್ನು ಉತ್ತೇಜಿಸಿದಂತಾಗುತ್ತದೆ. ಬಹುಶಃ ಇದು ಶಾಲಾ ಶಿಕ್ಷಣದಲ್ಲಿ ಪಠ್ಯಪುಸ್ತಕಗಳಂತಹ ಸಾಂಪ್ರದಾಯಿಕ ಸಾಧನಗಳಿಂದ ಸಾಧ್ಯವಾಗದ ಪ್ರಕ್ರಿಯೆ. ದೈನಂದಿನ ಪ್ರಸಂಗಗಳ ಕುರಿತು ಮಕ್ಕಳನ್ನು ಸಂವಾದದ ಮೂಲಕ ಗಂಭೀರ ಯೋಚನೆಗೆ ಸೆಳೆಯುವುದು, ಗಣಿತದ ಅಮೂರ್ತ ಪ್ರಶ್ನೆಗಳ ಮೂಲಕ ಸೆಳೆಯುವುದಕ್ಕಿಂತ ಸುಲಭ. ಈ ಎಲ್ಲವುಗಳಿಂದ, ಮಕ್ಕಳಿಗೆ ಕಿವಿಗೊಟ್ಟು ಆಲಿಸುವುದರಿಂದ, ನಾವು ಅವರ ಬಗ್ಗೆ ಕಾಳಜಿ ವಹಿಸುತ್ತೇವೆ ಎಂದೂ, ನೀವು ಶಾರೀರಿಕವಾಗಿ ಮತ್ತು ಮಾನಸಿಕವಾಗಿ ಹಾಜರಿದ್ದೀರಿ ಎಂದೂ ಮತ್ತು ನೀವು ನಿಮ್ಮ ಸಮಯ ಮತ್ತು ಶಕ್ತಿಯನ್ನು ವಿನಿಯೋಗಿಸುವ ಮೂಲಕ ಅವರನ್ನು ಗೌರವಿಸುತ್ತೀರಿ ಎಂದೂ ತೋರಿಸಿದಂತಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ, ಒಬ್ಬ ವಯಸ್ಕರು ಇನ್ನೊಬ್ಬ ವಯಸ್ಕರ ಮಾತನ್ನು ಗಮನವಿಟ್ಟು ಆಲಿಸುವುದೆಂದರೆ ಅವರನ್ನು ಗೌರವಿಸಿದಂತೆ. ಮಕ್ಕಳು ಕೂಡಾ ಇತರರಂತೆ ಗೌರವಿಸಲು ಅರ್ಹರಿರುತ್ತಾರೆ. ಅಲ್ಲದೆ, ಮಕ್ಕಳ ಸುರಕ್ಷೆ ಮತ್ತು ನಮ್ಮವರು ಎಂಬ ಭಾವವೂ ಸೇರಿಕೊಂಡು, ಮಕ್ಕಳಲ್ಲಿ ಶಾಲಾ ವ್ಯವಸ್ಥೆಯು ತಮ್ಮ ಜೀವನದ ಕೌಶಲಗಳನ್ನು ಕಲಿಯುವ/ಕಲಿಸುವ ಸ್ಥಳ ಎಂಬ ಬೆಚ್ಚನೆಯ ಭಾವವನ್ನು ಕಟ್ಟಿಕೊಡುತ್ತದೆ.

( ಮಕ್ಕಳ ಹಿತದೃಷ್ಟಿಯಿಂದ ಅವರ ಹೆಸರುಗಳನ್ನು ಬದಲಿಸಲಾಗಿದೆ).



**ಸುಕೃತಿ ಲಖ್ತಾಕಿಯಾ** ಅವರು ಮಧ್ಯಪ್ರದೇಶದ ಸಾಗರ್‌ನಲ್ಲಿರುವ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಅಸೋಸಿಯೇಟ್ ಆಗಿದ್ದಾರೆ. ಅವರು ದೆಹಲಿ–ಎನ್‌ಸಿಆರ್‌ನ ಶಿವ್ ನಾಡಾರ್ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಓದುವುದು, ಸಿನಿಮಾ ವೀಕ್ಷಣೆ, ಬರವಣಿಗೆ ಮತ್ತು ಪಕ್ಷಿ ವೀಕ್ಷಣೆ ಅವರಿಗೆ ಇಷ್ಟ. ಅವರನ್ನು sukriti.lakhtakia@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ರೋಹಿಣಿ ಮುಂಡಾಜೆ** | ಪರಿಶೀಲನೆ: **ಲತಾ ಕೆ.ಸಿ.**

ಉಲ್ಲಾಸದ ವಾತಾವರಣ ನಿರ್ಮಿಸಲು, ಶಿಕ್ಷಕರು ಮಕ್ಕಳೊಂದಿಗೆ ನೃತ್ಯ, ನಾಟಕದಂತಹ ಮೋಜಿನ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬೇಕು. ನಾವು ವಿದ್ಯಾರ್ಥಿಗಳನ್ನು ಅಪ್ಪಿಕೊಳ್ಳುವ, ಕೈಜೋಡಿಸುವ (ಹೈ–ಫೈವ್) ಮತ್ತು ನೀಡಲಾಗಿರುವ ಇತರ ಸನ್ನೆಗಳ ಮೂಲಕ ಬರಮಾಡಿಕೊಳ್ಳುತ್ತೇವೆ. ಅವರ ದಿನ ಹೇಗಿದೆ, ಅವರಿಗೆ ಏನು ಅನಿಸುತ್ತಿದೆ, ಅವರ ಮನಸ್ಥಿತಿ ಬದಲಾಗಿದ್ದರೆ ಅದಕ್ಕೆ ಕಾರಣ ಏನು ಇತ್ಯಾದಿಯನ್ನು ಅರ್ಥೈಸಿಕೊಳ್ಳಲು ಯತ್ನಿಸುತ್ತೇವೆ. ಮಕ್ಕಳು ತಮ್ಮನ್ನು ತಾವು ಅರ್ಥ ಮಾಡಿಕೊಳ್ಳಲು ಇದು ಸಹಕಾರಿ.

ಫರ್ಝಾನಾ ಬೇಗಂ, ಸಮಾಜಿಕ–ಭಾವನಾತ್ಮಕ ಕಲಿಕೆ, ಪುಟ ೩೩

# ಶಿಕ್ಷಕರ ಕಾಳಜಿ ಮತ್ತು ಕಳಕಳಿಯಿಂದ ರೂಪಾಂತರಗೊಂಡ ಶಾಲೆ

ಸುನಿತಾ ಸುರೇಶ್‌ರಾವ್

ಮಕ್ಕಳಲ್ಲಿ ಯಾವುದೇ ರೀತಿಯ ಕಲಿಕೆಯನ್ನು ಸಕ್ರಿಯಗೊಳಿಸಲು ಮತ್ತು ಅವರ ಸಮಗ್ರ ಅಭಿವೃದ್ಧಿಗೆ ಕೊಡುಗೆ ನೀಡಲು ಸಾಮಾಜಿಕವಾಗಿ ಮತ್ತು ಭಾವನಾತ್ಮಕವಾಗಿ ಅನುಕೂಲಕರ ವಾತಾವರಣವು ಪೂರ್ವಾಪೇಕ್ಷಿತವಾಗಿದೆ. ಈ ಲೇಖನದಲ್ಲಿ ನಾನು ವಿಜಯಪುರದ ಕನ್ನಡ ಮಾಧ್ಯಮ ಗಂಡು ಮಕ್ಕಳ ಶಾಲೆಯ (Kannada Boys' School - KBS) ಮಕ್ಕಳ ಅನುಭವಗಳನ್ನು ಮತ್ತು ಅತ್ಯಂತ ಕಠಿಣ ಸಂದರ್ಭಗಳಲ್ಲಿ ಅವರಿಗೆ ಭಾವನಾತ್ಮಕ ಬೆಂಬಲವನ್ನು (emotional support) ನೀಡುವಲ್ಲಿ ಅವರ ಶಿಕ್ಷಕರ ಸೃಜನಶೀಲತೆ ಮತ್ತು ಸಕಾರಾತ್ಮಕ ಪ್ರಯತ್ನಗಳನ್ನು ಪ್ರಸ್ತುತಪಡಿಸಲು ಬಯಸುತ್ತೇನೆ. ಅಪರಾಧ ಆರೋಪಗಳು, ಮದ್ಯಪಾನ, ಪೋಷಕರ ಸಾವು, ಮತ್ತು ಪೋಷಕರು ಅವರನ್ನು ತೊರೆದು ಹೋಗುವುದು ಅಲ್ಲಿನ ಮಕ್ಕಳು ಎದುರಿಸುತ್ತಿರುವ ಕೆಲವು ಸಮಸ್ಯೆಗಳಾಗಿದ್ದು, ಇವು ಭಾವನಾತ್ಮಕವಾಗಿ ಅವರ ಮನಸ್ಸಿನಲ್ಲಿ ಆಳವಾದ ಗಾಯಗಳನ್ನು ಉಂಟು ಮಾಡುತ್ತವೆ. ಹೀಗಾಗಿ ಇಲ್ಲಿನ ಶಿಕ್ಷಕರು ಜಾಗರೂಕರಾಗಿರಬೇಕಾಗಿದ್ದು, ಕೇವಲ ಶೈಕ್ಷಣಿಕ ವಿಷಯಗಳಲ್ಲಿ ಬೆಂಬಲಿಸುವುದು ಮಾತ್ರವಲ್ಲದೆ, ಅವರು ಪ್ರಬುದ್ಧರಾಗಿ, ಸ್ವತಂತ್ರರಾಗಿ ಬೆಳೆಯಲು ಮಕ್ಕಳ ಮನಸ್ಸಿನ ಭಾವನೆಗಳನ್ನು ಅರ್ಥ ಮಾಡಿಕೊಂಡು ಅವರಿಗೆ ಅಗತ್ಯವಿರುವ ಭಾವನಾತ್ಮಕ ಬೆಂಬಲವನ್ನು ಸಹ ನೀಡಬೇಕಾಗುತ್ತದೆ.

## ಮಕ್ಕಳ ಹಿನ್ನೆಲೆ ಮತ್ತು ಸಂದರ್ಭ

ವಿಜಯಪುರದ ( ಮೊದಲು ಬಿಜಾಪುರ ಎಂದು ಕರೆಯಲಾಗುತ್ತಿತ್ತು) ಬಹುಪಾಲು ಜನರು, ಕೃಷಿಯನ್ನು ಅವಲಂಬಿಸಿದ್ದಾರೆ. ಆದರೆ, ಸಕಾಲಕ್ಕೆ ಮಳೆಯಾಗದ ಕಾರಣ ಜೀವನೋಪಾಯ ಅರಸಿ ಅವರು ಬೇರೆ ಜಿಲ್ಲೆಗಳಿಗೆ ವಲಸೆ ಹೋಗುವಂತಾಗಿದೆ. ಜೀವನೋಪಾಯ ಅರಸಿ ಈ ಊರಿಗೆ ವಲಸೆ ಬಂದಿರುವ ಅನ್ಯ ರಾಜ್ಯಗಳ ಜನರು ಸಣ್ಣಪುಟ್ಟ ಕೆಲಸ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಹೀಗಾಗಿ ರೈಲು ನಿಲ್ದಾಣದ ಬಳಿ ಇರುವ ಶಾಲೆಗೆ ನಗರದ ವಿವಿಧೆಡೆಯಿಂದ ಹಲವಾರು ಮಕ್ಕಳು ಬರುತ್ತಿದ್ದಾರೆ. ಅವರಲ್ಲಿ ಅನೇಕರು ತಮ್ಮ ಪೋಷಕರಿಂದ ನಿರ್ಲಕ್ಷಿಸಲ್ಪಟ್ಟಿದ್ದಾರೆ ಜೊತೆಗೆ, ಅವರಲ್ಲಿ ಹೆಚ್ಚಿನವರು ಏಕ ಪೋಷಕರಿಂದ (single parent) ಬೆಳೆಸಲ್ಪಡುತ್ತಿದ್ದಾರೆ. ಪೋಷಕರು, ತಮ್ಮ ಮಕ್ಕಳನ್ನು ನೋಡಿಕೊಳ್ಳುವ ಕೆಲಸದಿಂದ ಕೆಲವು ಗಂಟೆಗಳ ಕಾಲ ಬಿಡುವು ಸಿಗುವುದರಿಂದ ಆ ಸಮಯವನ್ನು ದೈನಂದಿನ ಕೂಲಿಗಾಗಿ ಬಳಸಿಕೊಳ್ಳಲು ಸಾಧ್ಯವಾಗುತ್ತದೆ ಎಂಬುವುದೂ ಸೇರಿದಂತೆ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಹಲವು ಕಾರಣಗಳನ್ನು ಅವರು ಹೊಂದಿದ್ದಾರೆ. ಶಾಲೆಯಲ್ಲಿದ್ದಾಗ ಮಕ್ಕಳಿಗೆ ಕನಿಷ್ಠ ಒಂದು ಹೊತ್ತಿನ (ಮಧ್ಯಾಹ್ನದ ಊಟ) ಊಟವಾದರೂ ದೊರಕುತ್ತದೆ ಎಂಬ ಭರವಸೆಯ ಅಂಶವನ್ನೂ ಇದು ಒಳಗೊಂಡಿದೆ.

ಮೊದಲೇ ಆರ್ಥಿಕ ತೊಂದರೆಗಳನ್ನು ಎದುರಿಸುತ್ತಿದ್ದ ಈ ಸಮುದಾಯಗಳು ಸಾಂಕ್ರಾಮಿಕ ರೋಗದಿಂದ ಮತ್ತಷ್ಟು ತೀವ್ರವಾಗಿ ತತ್ತರಿಸಿವೆ. ಈ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಬೇರೆಬೇರೆ ಕುಟುಂಬಗಳಿಗೆ ಸೇರಿದ ಇಬ್ಬರು ಮಕ್ಕಳು ಕೋವಿಡ್ ಸಾಂಕ್ರಾಮಿಕ ರೋಗದಿಂದಾಗಿ ತಮ್ಮ ತಾಯಿಯನ್ನು ಕಳೆದುಕೊಂಡಿದ್ದಾರೆ. ಅದರಲ್ಲಿ ಒಂದು ಮಗುವಿನ ಕುಟುಂಬವು ಒಂದರಿಂದ ಐದನೇ ತರಗತಿಯವರೆಗೆ ಓದುತ್ತಿರುವ ನಾಲ್ಕು ಮಕ್ಕಳನ್ನು ಒಳಗೊಂಡಿದೆ. ಅವರ ತಂದೆ ದಿನಗೂಲಿ ಕೆಲಸಗಾರರಾಗಿದ್ದು, ಪ್ರತಿ ರಾತ್ರಿ ಕುಡಿದು ತಡವಾಗಿ ಮನೆಗೆ ಬರುತ್ತಾರೆ. ಅವರು ತನ್ನ ಮಕ್ಕಳ ಬಗ್ಗೆ ಕಾಳಜಿ ವಹಿಸುವುದಿಲ್ಲ. ಮಕ್ಕಳು ತುಂಬಾ ಚಿಕ್ಕವರಾಗಿದ್ದು, ಅವರಿಗೆ ಆಹಾರ, ಸ್ನಾನ ಮತ್ತು ಬಟ್ಟೆ ತೊಡಿಸಲು ಬೇರೆಯವರ ಸಹಾಯ ಬೇಕಾಗಿದೆ.

ಅವರು ಹರಿದ ಕೊಳಕು ಬಟ್ಟೆಯನ್ನು ಧರಿಸಿ, ಬೆಳಗಿನ ಉಪಾಹಾರವನ್ನೂ ಸೇವಿಸದೆ ಶಾಲೆಗೆ ಬರುತ್ತಿದ್ದರು. ಸಾಂಕ್ರಾಮಿಕದ ಸಮಯದಲ್ಲಿ ಅವರ ಪರಿಸ್ಥಿತಿ ತುಂಬ ಶೋಚನೀಯವಾಗಿತ್ತು. ತಂದೆಗೆ ಕೆಲಸವಿಲ್ಲದ ಕಾರಣ ಮತ್ತು ಶಾಲೆಯನ್ನು ಮುಚ್ಚಿದ್ದರಿಂದ ಮಕ್ಕಳಿಗೆ ದಿನದಲ್ಲಿ ಒಂದು ಹೊತ್ತಿನ ಊಟವೂ ಸಿಗುತ್ತಿರಲಿಲ್ಲ. ಇನ್ನೊಂದು ಮಗುವಿಗೆ ನರ್ಸರಿ ತರಗತಿಯಲ್ಲಿ ಕಲಿಯುತ್ತಿರುವ ಸಹೋದರಿ ಇದ್ದಾಳೆ. ಅವರ ತಂದೆ ಅವರನ್ನು ನೋಡಿಕೊಳ್ಳುತ್ತಿದ್ದರೂ, ಮಗು ತನ್ನ ಚಿಕ್ಕ ತಂಗಿಯನ್ನು ಶಾಲೆಗೆ ಕರೆತರಬೇಕು ಮತ್ತು ಅವನು ಇಡೀ ದಿನ ಶಾಲೆಯಲ್ಲಿ ಅವಳೊಂದಿಗೆ ಇರಬೇಕಾಗುತ್ತದೆ.

ಇಂತಹ ನಿರ್ಲಕ್ಷ್ಯ, ಸರಿಯಾದ ಕಾಳಜಿ ಮತ್ತು ಬೆಂಬಲದ ಕೊರತೆಯಿಂದಾಗಿ ಮಕ್ಕಳು ಶಾಲೆಯಲ್ಲಿ ಕಲಿಯಲು ಸಾಧ್ಯವಾಗುತ್ತಿಲ್ಲ. ಜೀವನೋಪಾಯವನ್ನು ಕಳೆದುಕೊಳ್ಳುವಿಕೆ, ಮದ್ಯಪಾನ ಮತ್ತು ಏಕ ಪೋಷಕತ್ವ ಮುಂತಾದವು ಮಕ್ಕಳ ಮೇಲೆ ಆಳವಾದ ಪ್ರಭಾವವನ್ನು ಬೀರುವ ಹಲವಾರು ಅಂಶಗಳಲ್ಲಿ ಕೆಲವಾಗಿವೆ.

## ಶಿಕ್ಷಕರ ಪ್ರಯತ್ನ

ಶಾಲೆಯಲ್ಲಿ ಒಂದರಿಂದ ಏಳನೇ ತರಗತಿಯವರೆಗೆ 81 ಮಕ್ಕಳಿದ್ದು, ಹೆಚ್ಚಿನ ಮಕ್ಕಳು ಇದೇ ರೀತಿಯ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಈ ಮಧ್ಯೆ ಶಾಲೆಯ ಮೂವರು ಶಿಕ್ಷಕರು ಈ ಪರಿಸ್ಥಿತಿಯನ್ನು ನಿಭಾಯಿಸಲು ಮಾರ್ಗಗಳನ್ನು ಕಂಡು–ಕೊಂಡರು. ಅವರೆಲ್ಲರೂ ಮಕ್ಕಳ ಬಗ್ಗೆ ಕಾಳಜಿ ಮತ್ತು ಕಳಕಳಿಯನ್ನು ಹೊಂದಿದ್ದರಿಂದ ಅವರು ತಮ್ಮ ತರಗತಿಯ ಮಕ್ಕಳ ಹಿನ್ನೆಲೆಯನ್ನು ಚೆನ್ನಾಗಿ ಅರಿತುಕೊಂಡಿದ್ದರು. ಮೂವರು ಶಿಕ್ಷಕರು – ಒಬ್ಬರು ನಲಿ–ಕಲಿ ತರಗತಿಯನ್ನು, ಇನ್ನೊಬ್ಬರು ನಾಲ್ಕನೇ ಮತ್ತು ಐದನೇ ತರಗತಿಯನ್ನು ಮತ್ತೊಬ್ಬರು ಆರು ಮತ್ತು ಏಳನೇ ತರಗತಿಯನ್ನು ಮಕ್ಕಳ ಕಲಿಕೆ ಮತ್ತು ಸರ್ವತೋಮುಖ ಬೆಳವಣಿಗೆಯ ಮೇಲೆ ತಮ್ಮ ಗಮನವನ್ನು ಕೇಂದ್ರೀಕರಿಸುವ ತಂಡವಾಗಿ ಹಗಲಿರುಳು ಕೆಲಸ ಮಾಡಿದರು. ಉದ್ಯೋಗ ನಷ್ಟ ಮತ್ತು ಸಾವುಗಳು ಬಡತನಕ್ಕೆ ಕಾರಣವಾದಾಗ, ಶಿಕ್ಷಕರು ಮೊದಲ ಹಂತವಾಗಿ ಈ ಕುಟುಂಬಗಳಿಗೆ ಪಡಿತರವನ್ನು ನೀಡುವಲ್ಲಿ ಸಹಾಯ ಮಾಡಿದರು.

ಅವರು ಶಾಲೆಯಲ್ಲಿ ಮತ್ತು ಮಕ್ಕಳಿಗೆ ಕಲಿಸುವ ವಿಧಾನಗಳಲ್ಲಿ ಕೆಲವು ಬದಲಾವಣೆಗಳನ್ನು ತರಲು ಕ್ರಮಗಳನ್ನು ತೆಗೆದುಕೊಂಡರು. ಉದಾಹರಣೆಗೆ, ಇಬ್ಬರು ಮಕ್ಕಳಿರುವ ಕುಟುಂಬದಲ್ಲಿ, ಒಬ್ಬರು ಮೂರನೇ ತರಗತಿಯಲ್ಲಿ ಓದುತ್ತಿದ್ದರೆ, ಆ ವೇಳೆಯಲ್ಲಿ 4 ವರ್ಷದ ಇನ್ನೊಂದು ಮಗುವನ್ನು ಶಾಲೆಯ ಸಿಬ್ಬಂದಿ ನೋಡಿಕೊಂಡರು. ಈ ಕುಟುಂಬವು ತಮ್ಮ ಮಕ್ಕಳನ್ನು ನಿಯಮಿತವಾಗಿ ಶಾಲೆಗೆ ಕಳುಹಿಸುತ್ತಿದೆ ಎಂಬುದು ಪ್ರಶಂಸನೀಯವಾಗಿದೆ, ಆದರೆ ಎರಡೂ ಮಕ್ಕಳನ್ನು ಶಾಲೆಗೆ ಕಳುಹಿಸುವುದು ಸಮಸ್ಯೆಯನ್ನು ಪ್ರಸ್ತುತಪಡಿಸುತ್ತದೆ. ಇನ್ನೊಂದು ಪ್ರಕರಣದಲ್ಲಿ ತಾಯಿಯನ್ನು ಕಳೆದುಕೊಂಡ ಇಬ್ಬರು ಮಕ್ಕಳು ಬೆಳಗಿನ ಉಪಾಹಾರವನ್ನೂ ಮಾಡದೆ ಶಾಲೆಗೆ ಬರುತ್ತಿದ್ದರು. ಅವರು ಅಸ್ತವ್ಯಸ್ತವಾಗಿ, ಕೂದಲು ಕೆದರಿಕೊಂಡು ಮತ್ತು ಶಾಲೆಯ ಶಿಸ್ತನ್ನು ಅನುಸರಿಸದೆ ಬರುತ್ತಿದ್ದರು. ಹಿರಿಯ ಮಕ್ಕಳಿಗೆ ತಮ್ಮ ಕೂದಲನ್ನು ಬಾಚಿಕೊಳ್ಳುವ ಮತ್ತು ಎಣ್ಣೆ ಹಚ್ಚಿಕೊಳ್ಳುವ ಜವಾಬ್ದಾರಿಯನ್ನು ನೀಡಲಾಯಿತು ಮತ್ತು ಶಿಕ್ಷಕರು ಎಣ್ಣೆ, ಬಾಚಣಿಗೆ ಮತ್ತು ಕನ್ನಡಿಯನ್ನು ಒದಗಿಸಿದರು. ಮಕ್ಕಳಿಗೆ ಸರಿಯಾದ ಬಟ್ಟೆ ಇರಲಿಲ್ಲ, ಆದರೆ ಶಾಲೆಯವರು ನೀಡಿದ ಸಮವಸ್ತ್ರ ಅದಕ್ಕೆ ನೆರವಾಯಿತು. ತಮ್ಮ ಎಲ್ಲಾ ವೈಯಕ್ತಿಕ ಸಮಸ್ಯೆಗಳ ನಡುವೆಯೂ ಶಿಕ್ಷಕರ ನಿರಂತರ ಪ್ರೋತ್ಸಾಹದಿಂದಾಗಿ ಪ್ರಸಕ್ತ ವರ್ಷದಲ್ಲಿ ಮಕ್ಕಳು ಹಿಂದಿನ ಎರಡು ತರಗತಿಗಳ ಕಲಿಕೆಯ ಫಲಿತಾಂಶಗಳನ್ನು ಉತ್ತಮವಾಗಿ ಪಡೆಯಲು ಸಾಧ್ಯವಾಯಿತು. ಪ್ರತಿಯೊಬ್ಬ ಮಗುವಿಗೆ 'ಪ್ರತಿಯೊಬ್ಬರಿಗೂ ಅವರ ಸಾಮರ್ಥ್ಯದ ಪ್ರಕಾರ' ವಿಧಾನದ ಮೂಲಕ ಕಲಿಸಲಾಗುತ್ತಿರುವುದರಿಂದ, ತರಗತಿಯಲ್ಲಿರುವ ಹೆಚ್ಚಿನ ಮಕ್ಕಳು ವೇಗವಾಗಿ ಕಲಿಯುವವರಾಗುತ್ತಿದ್ದಾರೆ ಎಂಬುದನ್ನು ಗಮನಿಸಲಾಗಿದೆ. ಈ ಮೂವರು ಶಿಕ್ಷಕರು ಸುಧಾರಿತ ಕಲಿಕಾ ಫಲಿತಾಂಶಗಳ ಬಗ್ಗೆ ತಿಳಿದಿರುವುದರಿಂದ, ಬೋಧನಾ ವಿಧಾನದಂತಹ ಪೂರಕ ಅಭ್ಯಾಸಗಳನ್ನು ಅವರ ತರಗತಿಯ ಪ್ರಕ್ರಿಯೆಗಳಲ್ಲಿ ಗಮನಿಸಬಹುದು. ಪರಿಣಾಮಕಾರಿ ಕಲಿಕೆಗಾಗಿ ಶಿಕ್ಷಕರು ಬೋಧನಾ ಕಲಿಕಾ ಸಾಮಗ್ರಿ (TLM)ಗಳನ್ನು ತಯಾರಿಸುತ್ತಾರೆ ಮತ್ತು ಬಳಸುತ್ತಾರೆ (ಚಿತ್ರಗಳು 1–3).

ಭಾವನಾತ್ಮಕ ಬೆಂಬಲವನ್ನು ಖಾತರಿಪಡಿಸುವುದು

ನಲಿ – ಕಲಿ ತರಗತಿಯಲ್ಲಿ ಓದುತ್ತಿದ್ದ ತಾಯಂದಿರನ್ನು ಕಳೆದುಕೊಂಡಿದ್ದ ಮೂವರು ಮಕ್ಕಳು, ಆರಂಭದಲ್ಲಿ ತಮ್ಮ ಕಲಿಕೆಗೆ ಸಂಬಂಧಿಸಿದಂತೆ ಶಿಕ್ಷಕರು ಏನಾದರೂ ಕಟುವಾಗಿ ಹೇಳಿದರೆ ತಾಯಿಯನ್ನು ನೆನೆದು ಕಣ್ಣೀರು ಸುರಿಸುತ್ತಿದ್ದರು. ಹಾಗಾಗಿ, ಶಿಕ್ಷಕರು ಅವರೊಂದಿಗೆ ಮೃದುವಾಗಿ ವರ್ತಿಸಲು, ವೈಯಕ್ತಿಕ ಗಮನವನ್ನು ನೀಡಲು ಮತ್ತು ಕಾಳಜಿಯನ್ನು ತೋರಿಸಲು ಹೆಚ್ಚಿನ ಮುತುವರ್ಜಿ ವಹಿಸಿದರು. ಪುಸ್ತಕಗಳನ್ನು ಖರೀದಿಸಲು ಸಾಧ್ಯವಾಗದಂತಹ ಹಾಗೂ ಮಕ್ಕಳಅಗತ್ಯಗಳನ್ನು ನೋಡಿಕೊಳ್ಳಲು ಸಾಧ್ಯವಾಗದ ಪೋಷಕರನ್ನು ಗುರುತಿಸಿ ಎಲ್ಲಾ ರೀತಿಯ ಪರಿಸ್ಥಿತಿಗಳನ್ನು ಎದುರಿಸಲು ಶಿಕ್ಷಕರು ಅವರಿಗೆ ದಯೆ, ತಾಳ್ಮೆಯಿಂದ ಚಿಕ್ಕ ಸಾಧನೆಗೂ ಉತ್ಸಾಹ ಮತ್ತು ಮೆಚ್ಚುಗೆಯನ್ನು ನೀಡುವ ಮೂಲಕ ಕಲಿಕೆಗೆ ಪೂರಕ ವಾತಾವರಣವನ್ನು ನಿರ್ಮಿಸಿದರು. ಕಲಿಕೆಯಲ್ಲಿ ಸಾಧಿಸಿದ ಬದಲಾವಣೆಗಳು ಮತ್ತು ಪ್ರಗತಿಗೆ ಶಿಕ್ಷಕರು – ಮಕ್ಕಳು ಮತ್ತು ಪೋಷಕರೊಂದಿಗೆ ಹೊಂದಿರುವ ಉತ್ತಮ ಸಂವಹನ, ಚಟುವಟಿಕೆ ಆಧಾರಿತ ಕಲಿಕೆ, ಪ್ರತಿ ಮಗುವಿನ ಕಲಿಕೆಯ ಮಟ್ಟವನ್ನು ಆಧರಿಸಿ ಬೋಧನೆ–ಕಲಿಕೆ ಪ್ರಕ್ರಿಯೆ ಮತ್ತು ಮಕ್ಕಳನ್ನು ಗೌರವದಿಂದ ನಡೆಸಿಕೊಳ್ಳುವುದು ಮತ್ತು ಪ್ರೀತಿಗಳೇ ಕಾರಣವಾಗಿವೆ.

ಹಾಜರಾತಿ ಮತ್ತು ಮನೆ ಭೇಟಿ

ನಿಯಮಿತ ಹಾಜರಾತಿ ಬಹಳ ಮುಖ್ಯವಾಗಿದ್ದು, ಆ ಮೂಲಕ ಯಾವುದೇ ಮಗು ಸತತ ಮೂರು ದಿನಗಳವರೆಗೆ ಗೈರುಹಾಜರಾದರೆ, ಶಿಕ್ಷಕರು ವೈಯಕ್ತಿಕವಾಗಿ ಪೋಷಕರಿಗೆ ಕರೆ ಮಾಡಿ ಮಗುವಿನ ಬಗ್ಗೆ ವಿಚಾರಿಸುತ್ತಾರೆ. ಇದು ಶಿಕ್ಷಕರಿಗೆ ಮಕ್ಕಳ ಬಗ್ಗೆ ಕಾಳಜಿ ಇದೆ ಎಂಬುದನ್ನು ಪೋಷಕರಿಗೆ ಮನವರಿಕೆಮಾಡಿಸಿದೆ.

ಪ್ರತಿ ತಿಂಗಳು ಅಥವಾ ಎರಡು ತಿಂಗಳಿಗೊಮ್ಮೆ ಪೋಷಕರೊಂದಿಗೆ ಸಭೆ ನಡೆಸಲಾಗುತ್ತದೆ, ಅಲ್ಲಿ ಮಗುವಿನ ಕಾರ್ಯಕ್ಷಮತೆಯನ್ನು ಚರ್ಚಿಸಲಾಗುತ್ತದೆ. ಪೋಷಕರು ಸಭೆಗೆ ಗೈರುಹಾಜರಾಗಿದ್ದರೆ, ಆ ಮನೆಗೆ ಭೇಟಿ ನೀಡಲಾಗುತ್ತದೆ ಮತ್ತು ಮಗುವಿನ ಕಾರ್ಯಕ್ಷಮತೆಯನ್ನು ಪೋಷಕರೊಂದಿಗೆ ಚರ್ಚಿಸಲಾಗುತ್ತದೆ, ಇದರಿಂದ ಮಗು ಅಧ್ಯಯನದಲ್ಲಿ ತೊಡಗಿಸಿ ಕೊಳ್ಳುವಂತೆ ಮಾಡಿದಂತಾಗುತ್ತದೆ.

ಹೊಸ ಮಗು ದಾಖಲಾದಾಗ, ಶಿಕ್ಷಕರು ಕುಟುಂಬದ ಹಿನ್ನೆಲೆಯ ಬಗ್ಗೆ ತಿಳಿದುಕೊಳ್ಳುತ್ತಾರೆ, ಹೀಗಾಗಿ ಮಗು ತರಗತಿಗೆ ಹೊಂದಿಕೊಳ್ಳಲು ಮತ್ತು ತರಗತಿಯಲ್ಲಿ ಉಳಿದ ಮಕ್ಕಳು ಅವರನ್ನು ಒಪ್ಪಿಕೊಳ್ಳಲು ಸಹಾಯ ಮಾಡುತ್ತದೆ.

ಶಿಸ್ತು

ಮಕ್ಕಳು ಒಮ್ಮೆ ಶಾಲಾ ಆವರಣವನ್ನು ಪ್ರವೇಶಿಸಿದ ಮೇಲೆ, ಶಾಲೆಯ ಸಮಯ ಮುಗಿದ ನಂತರವೇ ಅವರನ್ನು ಮನೆಗೆ ಬಿಡಲು ಅನುಮತಿಸಲಾಗುತ್ತದೆ. ಶಾಲೆಯಾದ್ಯಂತ ಸ್ವಚ್ಛತೆಯನ್ನು ಕಾಪಾಡಲಾಗಿದೆ. ಶೌಚಾಲಯಗಳಿಗೆ ಸಾಕಷ್ಟು ನೀರನ್ನು ಒದಗಿಸಿರುವುದರಿಂದ ಮತ್ತು ವಿದ್ಯಾರ್ಥಿಗಳು ಅದನ್ನು ಸಮರ್ಪಕವಾಗಿ ಬಳಸುವುದರಿಂದ, ಅವುಗಳನ್ನು ಉತ್ತಮವಾಗಿ ನಿರ್ವಹಿಸಲಾಗುತ್ತದೆ ಮತ್ತು ಸ್ವಚ್ಛವಾಗಿ ಇರಿಸಲಾಗುತ್ತದೆ. ಮಧ್ಯಾಹ್ನದ ಬಿಸಿಯೂಟದ ಯೋಜನೆಯಡಿ ನೀಡುವ ಆಹಾರವನ್ನು ಮಕ್ಕಳು ವ್ಯರ್ಥ ಮಾಡುವುದಿಲ್ಲ.

## ಇತರ ವಿಧಾನಗಳು

ಎಲ್ಲಾ ಶಿಕ್ಷಕರು ಸಮನ್ವಯದಿಂದ ಕೆಲಸ ಮಾಡುತ್ತಾರೆ ಮತ್ತು ಪರಸ್ಪರರಿಂದ ಕಲಿಯಲು ಹಿಂಜರಿಯುವುದಿಲ್ಲ. ಅವರು ತರಗತಿಯ ಕಲಿಕಾ ಸಾಮಗ್ರಿಗಳು ಮತ್ತು ಇತರೆ ಸಂಪನ್ಮೂಲಗಳನ್ನು ಸಹ ಹಂಚಿಕೊಳ್ಳುತ್ತಾರೆ. ಅವರು ಶಾಲೆಯಲ್ಲಿನ ಕಾರ್ಯಕ್ರಮಗಳು ಮತ್ತು ಸೌಲಭ್ಯಗಳ ಉದ್ದೇಶ ಮತ್ತು ಪ್ರಾಮುಖ್ಯತೆಯನ್ನು ಅರ್ಥಮಾಡಿಕೊಳ್ಳುವುದು, ಹಾಗೂ ಅವುಗಳ ಸರಿಯಾದ ಅನುಷ್ಠಾನ ಮತ್ತು ನಿರ್ವಹಣೆಯನ್ನು ಖಚಿತಪಡಿಸಿಕೊಳ್ಳುತ್ತಾರೆ. ಶಿಕ್ಷಕರ ಪ್ರಕಾರ, ಊಟ, ಹಾಲು, ಬಾಳೆಹಣ್ಣು, ಕಡಲೆಕಾಯಿ ಮಿಠಾಯಿ/ಚಿಕ್ಕಿ ಮತ್ತು ಮೊಟ್ಟೆಗಳನ್ನು ನೀಡುವುದು ಮಕ್ಕಳಲ್ಲಿ ಶಕ್ತಿ ಮತ್ತು ಉತ್ಸಾಹದ ಮಟ್ಟವನ್ನು ಹೆಚ್ಚಿಸಿದೆ.

ಶಾಲೆ ಮತ್ತು ಸಮುದಾಯವು ಮಕ್ಕಳ ಕಲಿಕೆಯ ಸಾಧನೆಗಳು ಮತ್ತು ಬದಲಾವಣೆಗಳನ್ನು ಪ್ರಶಂಸಿಸಲು ಮತ್ತು ಗೌರವಿಸಲು ಪ್ರಾರಂಭಿಸಿದೆ. ಇದಕ್ಕೆ ಮುಖ್ಯ ಕಾರಣ ಮಕ್ಕಳನ್ನು ಅರ್ಥಮಾಡಿಕೊಳ್ಳುವ ಮನೋಭಾವದಲ್ಲಿ ಬದಲಾವಣೆ ಮತ್ತು ಕಲಿಕೆಗೆ ಪೂರಕವಾದ ವಾತಾವರಣವನ್ನು ನಿರ್ಮಿಸುವ ಮೂಲಕ ಅವರಲ್ಲಿ ಸರ್ವತೋಮುಖ ಅಭಿವೃದ್ಧಿಯನ್ನು ತರಲು ಸಕ್ರಿಯವಾಗಿ ಶ್ರಮಿಸುತ್ತಿರುವುದು. ನಾವು ಮಕ್ಕಳನ್ನು ನೋಡುವ, ಸಂಬೋಧಿಸುವ ಮತ್ತು ನಡೆಸಿಕೊಳ್ಳುವ ರೀತಿ ಅವರ ಕಲಿಕೆಯ ಮೇಲೆ ಹೇಗೆ ಪರಿಣಾಮ ಬೀರುತ್ತದೆ ಎಂಬುದಕ್ಕೆ ಈ ಶಾಲೆಯು ಅತ್ಯುತ್ತಮ ಉದಾಹರಣೆಯಾಗಿದೆ.




ಚಿತ್ರ 1. 1-100 ಸಂಖ್ಯೆಯ ಚಾರ್ಟ್‌ಗಳಲ್ಲಿ ಕೆಲವು ನಿರ್ದಿಷ್ಟ ಸಂಖ್ಯೆಯ ಗುಣಕಗಳನ್ನು ಗುರುತಿಸುವುದು



ಚಿತ್ರ 2. ಸ್ಕೇಲ್ ಅಥವಾ ಸಂಖ್ಯೆಯ ರೇಖೆಯನ್ನು ಬಳಸಿಕೊಂಡು ಎರಡು ಸಂಖ್ಯೆಗಳ ಲಸಾಅ (LCM)ವನ್ನು ಕಂಡುಹಿಡಿಯುವುದು



ಚಿತ್ರ 3. 1-100 ಸಂಖ್ಯೆಯ ಚಾರ್ಟ್‌ಗಳಲ್ಲಿ 3,8 ಮತ್ತು 12 ಸಂಖ್ಯೆಯ ಗುಣಕಗಳನ್ನು ಗುರುತಿಸುವುದು

---



**ಸುನಿತಾ ಸುರೇಶರಾವ್** ಅವರು ಕರ್ನಾಟಕದ ವಿಜಯಪುರದಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಜಿಲ್ಲಾ ಸಂಯೋಜಕರಾಗಿದ್ದಾರೆ. ಅವರು ಈ ಹಿಂದೆ ಮಾನವ ಸಂಪನ್ಮೂಲ ಮತ್ತು ಯುವ ನಾಯಕತ್ವ ಅಭಿವೃದ್ಧಿ ಕ್ಷೇತ್ರಗಳಲ್ಲಿ ವಿವಿಧ ಮಾನವ ಅಭಿವೃದ್ಧಿ ಏಜೆನ್ಸಿಗಳೊಂದಿಗೆ ಕೆಲಸ ಮಾಡಿದ್ದಾರೆ. ಪ್ರಯಾಣ ಮತ್ತು ಸಂಗೀತ ಕೇಳುವುದು ಅವರ ನೆಚ್ಚಿನ ಹವ್ಯಾಸಗಳಾಗಿವೆ. ಅವರನ್ನು sunita@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಶ್ರೀನಿಧಿ ಅಡಿಗ** | ಪರಿಶೀಲನೆ: **ಲತಾ ಕೆ.ಸಿ.**

# ಕಲಿಕಾ ತೊಂದರೆಗಳಿರುವ ಮಕ್ಕಳಿಗೆ ಸಮಾಜೋ-ಭಾವನಾತ್ಮಕ ಬೆಂಬಲ

ಮಾಲಾ ಆರ್. ನಟರಾಜನ್

## ಡಿಸ್ಲೆಕ್ಸಿಯಾ (ಅಥವಾ ಕಲಿಕಾ ವೈಕಲ್ಯ) ಅಂದರೇನು?

ಡಿಸ್ಲೆಕ್ಸಿಯಾ ಇರುವ ಮಕ್ಕಳು ಇತರ ಮಕ್ಕಳಷ್ಟೇ ಚುರುಕಾಗಿರುತ್ತಾರೆ, ಆದರೆ ಅವರ ಸಾಮರ್ಥ್ಯ ಮತ್ತು ಶೈಕ್ಷಣಿಕ ಸಾಧನೆಯ ನಡುವೆ ಒಂದು ಅಂತರವಿರುತ್ತದೆ. ಅವರಿಗೆ ಕಲಿಕೆಯಲ್ಲಿ ಎದುರಾಗುವ ತೊಡಕುಗಳು ಅವರ ಬುದ್ಧಿಮತ್ತೆಯ ಸಮಸ್ಯೆಯಿಂದ (ಅವರ ಬುದ್ಧಿಮತ್ತೆಯ ಪ್ರಮಾಣವು (IQ) ಸಾಮಾನ್ಯವಾಗಿ ಇತರ ಮಕ್ಕಳಷ್ಟೇ ಅಥವಾ ಅದಕ್ಕಿಂತ ಹೆಚ್ಚಿನದ್ದಾಗಿರುತ್ತದೆ) ಉಂಟಾಗುವುದಿಲ್ಲ. ತೊಂದರೆಯಾಗುವುದು ಏಕೆಂದರೆ, ಅವರ ಮೆದುಳಿನಲ್ಲಿ ನರತಂತುಗಳ ವಿನ್ಯಾಸ ವಿಭಿನ್ನವಾಗಿರುತ್ತದೆ, ಅದು ಅವರು ಮಾಹಿತಿಗಳನ್ನು ಸ್ವೀಕರಿಸುವ ಮತ್ತು ಸಂಸ್ಕರಿಸುವ ಪ್ರಕ್ರಿಯೆಯ ಮೇಲೆ ಪರಿಣಾಮ ಬೀರುತ್ತದೆ. ಇಂತಹ ತೊಂದರೆಯಿರುವ ಮಕ್ಕಳಿಗೆ ಓದಲು, ಕಾಗುಣಿತ ಗುರುತಿಸಲು, ಬರೆಯಲು ಅಥವಾ ಗಣಿತದಲ್ಲಿ ಕಷ್ಟವಾಗುತ್ತದೆ. ಅದರೊಂದಿಗೆ ಸಂಗತಿಗಳನ್ನು ಸಂಯೋಜಿಸುವುದು, ಯೋಜಿಸುವುದು ಮತ್ತು ಆದ್ಯತೆಗಳನ್ನು ನೀಡುವುದು, ಆವೇಗಾತ್ಮಕ ಮತ್ತು ಭಾವನಾತ್ಮಕ ನಿಯಂತ್ರಣ ಮುಂತಾದ ಕಾರ್ಯಗಳನ್ನು ನಿರ್ವಹಿಸುವಾಗಲೂ ಅವರಿಗೆ ಕಷ್ಟವಾಗಬಹುದು.

ಶಾಲೆಯ ಪರಿಸರದಲ್ಲಿ ಒಂದು ಮಗುವು ದಿನದ ಹೆಚ್ಚಿನ ಸಮಯದಲ್ಲಿ ತಾನು ಕಲಿತ ಶೈಕ್ಷಣಿಕ ಕೌಶಲಗಳನ್ನು ಪ್ರದರ್ಶಿಸುತ್ತಿರಬೇಕಾಗುತ್ತದೆ. ಅಂತಹ ಸನ್ನಿವೇಶದಲ್ಲಿ ಮಗುವೊಂದು ಓದಲು, ಕಾಗುಣಿತ ಹೇಳಲು, ಹಲಗೆಯ ಮೇಲೆ ಬರೆದದ್ದನ್ನು ಕಾಪಿ ಮಾಡಲು, ಉತ್ತರ ಬರೆಯಲು, ಗಣಿತ ಮಾಡಲು ತಿಣುಕಾಡುವಾಗ ಬಹಳ ಸಲ ಶಿಕ್ಷಕರು ಮತ್ತು ಪಾಲಕರು ಹತಾಶರಾಗುತ್ತಾರೆ, ಹಾಗೂ ಸಹಪಾಠಿಗಳು ಆ ಮಗುವನ್ನು ನೋಡಿ ಅಪಹಾಸ್ಯ ಮಾಡುವ ಸಾಧ್ಯತೆಗಳೂ ಇರುತ್ತವೆ. ಆ ಮಗುವು `ಯಾತಕ್ಕೂ ಬಾರದವ', `ಆಲಸಿ', ಅಥವಾ `ಬಹಳ ಮಂದ' ಎಂಬ ಹಣೆಪಟ್ಟಿಗಳನ್ನೂ ನೀಡಲಾಗುತ್ತದೆ. ಆ ಮಗುವಿನ ಒಳಿತನ್ನು ಬಯಸುವ (ಹಿತವನ್ನೇ ಬಯಸುವ) ಪೋಷಕರು ಮತ್ತು ಶಿಕ್ಷಕರು `ಶೈಕ್ಷಣಿಕವಾಗಿ ಪ್ರಗತಿ ತೋರಿಸಬೇಕೆಂದರೆ ಅಭ್ಯಾಸ ಮಾಡಬೇಕು' ಎಂದು ಮಗುವನ್ನು ಅವಿರತವಾಗಿ ಒತ್ತಾಯಿಸುತ್ತಿರುತ್ತಾರೆ. ಆಗ ಮಗುವು ತನ್ನ ಆ ಚಿತ್ರಣವನ್ನು ಮುರಿದು ತನ್ನ ಸಹಪಾಠಿಗಳ ಸಮಕ್ಕೆ ಬರಬೇಕು, ಸಹಪಾಠಿಗಳೊಂದಿಗೆ ಬೆರೆತುಕೊಳ್ಳಬೇಕು ಎಂಬ ಒತ್ತಡಕ್ಕೆ ಸಿಲುಕಿ ಕಷ್ಟಪಡುತ್ತಿರುತ್ತದೆ. ಹೆಚ್ಚಿನ ಸಲ ಈ ರೀತಿಯ ಅನುಭವಗಳು ಮಗುವನ್ನು ಭಾವನಾತ್ಮಕವಾಗಿ ಘಾಸಿಗೊಳಿಸುತ್ತಿರುತ್ತವೆ ಮತ್ತು ಅದೇ ನಂತರ ಅವರ ಕಲಿಕೆ ಹಾಗೂ ಇತರ ಚಟುವಟಿಕೆಗಳಿಗೆ ಅಡ್ಡಬರುತ್ತಿರುತ್ತದೆ. ಒಂದು ಮಗುವಿನ ಭಾವನಾತ್ಮಕ ಆರೋಗ್ಯವನ್ನು ಮಗುವಿನ ಸಮವಯಸ್ಕ ಸಂಗಡಿಗರು, ಸ್ವಂತದ ಕುಟುಂಬ, ಶಾಲಾ ಶಿಕ್ಷಕರು ಮತ್ತು ಕೆಲಸಗಾರರು ನೇರವಾಗಿ ಪ್ರಭಾವಿಸುತ್ತಿರುತ್ತಾರೆ. ಕೆಲವು ಪರಿಸರಗಳಲ್ಲಿ ಸಂತಸದಿಂದ ಇರುವ ಮಗುವು ಇನ್ನೂ ಕೆಲವು ಪರಿಸರಗಳಲ್ಲಿ ದುಃಖದಿಂದಿರುತ್ತದೆ. ಉದಾಹರಣೆಗೆ ಓದುವ ಕಷ್ಟವಿರುವ ಮಗುವು ಓಟದ ಮೈದಾನದಲ್ಲಿ ಒಳ್ಳೆಯ ಸಾಧನೆ ತೋರಬಹುದು. ಅಲ್ಲಿ ಓಡುವ ಆಟಗಳಲ್ಲಿ ಮಗುವು ಖುಷಿಯಿಂದ ಒತ್ತಡ ಮುಕ್ತವಾಗಿ ಪಾಲ್ಗೊಳ್ಳುತ್ತದೆ ಮತ್ತು ಅಲ್ಲಿ ಅದಕ್ಕೆ ಒಂದು ರೀತಿ ತಾನು ಆರೋಗ್ಯದಿಂದ ಇದ್ದೇನೆ ಎಂಬ ಭಾವ ದೊರೆಯಬಹುದು. ಆದರೆ ಅದರ ಬದಲಿಗೆ ಓದಿನ ತರಗತಿಗಳಲ್ಲಿ ಅದಕ್ಕೆ ಆಗುವ ವೈಫಲ್ಯಗಳು ಮತ್ತು ಅದರಿಂದ ಎದುರಿಸಬಹುದಾದ ಅಪಹಾಸ್ಯ ಅದಕ್ಕೆ ಆಳವಾದ ಗಾಯವನ್ನೇ ಮಾಡುವ ಸಾಧ್ಯತೆ ಇದೆ; ಅದರ ಪರಿಣಾಮವಾಗಿ ಆ ಮಗುವು ನಿಧಾನವಾಗಿ ತರಗತಿಯೊಳಗೆ ತನ್ನದೇ ಕೋಶವೊಂದರೊಳಗೆ ಬಂಧಿಯಾಗಬಹುದು. ಮನಸ್ಸನ್ನು ಜರ್ಜರಿತಗೊಳಿಸುವ ಅಂತಹ ಹೊರೆಯೊಂದನ್ನು ಹೊತ್ತು ಶಾಲೆಗೆ ಹೋಗುವ ಮಗುವಿಗೆ ಅದು ಎಂತಹ ಒತ್ತಡಮಯ ಬದುಕಾಗಬಹುದು ಎಂದು ನೀವೇ ಯೋಚಿಸಿ!

ಈ ಮಗುವಿಗೆ ಹೇಗೆ ಸಹಾಯ ಮಾಡಬಹುದು?

ಮೌಲ್ಯಮಾಪನ

ಡಿಸ್ಲೆಕ್ಸಿಯಾ ಇರುವ ಮಕ್ಕಳು ತರಗತಿಯ ಇತರ ಮಕ್ಕಳಷ್ಟೇ ಚುರುಕಾಗಿರುತ್ತಾರೆ ಎನ್ನುವುದನ್ನು ಮತ್ತೊಮ್ಮೆ ನೆನಪಿಸುತ್ತೇನೆ. ಆದರೂ ಅವರಿಗೆ ಕಲಿಸುವಾಗ ಅವರು ಕಲಿಯುವಂತಹ ವಿಧಾನದಲ್ಲಿ ಕಲಿಸುವುದು ಬಹಳ ಅವಶ್ಯವಾಗುತ್ತದೆ. ಅಂದರೆ ಅಂತಹ ಕಷ್ಟವುಳ್ಳ ಪ್ರತೀ ಮಗುವಿಗೂ ಅಗತ್ಯವಾಗುವ ವಿಶಿಷ್ಟ ಕಲಿಕಾ ಶೈಲಿಯಲ್ಲಿ ಕಲಿಸಬೇಕಾಗುತ್ತದೆ. ಮಗುವಿನ ಸಾಮರ್ಥ್ಯಗಳನ್ನು ಬಳಸಿ ಮಗುವಿಗೆ ಅಗತ್ಯವಿರುವ ಕೌಶಲಗಳನ್ನು ರೂಪಿಸುವ ಪ್ರತ್ಯೇಕ ಶಿಕ್ಷಣ ಯೋಜನೆಯೊಂದು (IEP: Individualized education plan) ಅಂತಹ ಒಂದು ಬೆಂಬಲ ವ್ಯವಸ್ಥೆಯಾಗಬಲ್ಲುದು. ಈ ಪರಿಹಾರ ಬೋಧನೆಯು (remedial sessions) ವ್ಯವಸ್ಥಿತವಾದ, ಸ್ಪಷ್ಟ ವಿನ್ಯಾಸಗಳನ್ನು ಹೊಂದಿದ, ಬಹು ಮಾದರಿಯ ಮತ್ತು ಬಹುಬಗೆಯ ಬುದ್ಧಿಮತ್ತೆಗಳೊಂದಿಗೆ (Multiple Intelligences) ಸಮನ್ವಯೀಕೃತಗೊಂಡ ವಿಧಾನವನ್ನು ಅಳವಡಿಸಿ–

ಕೊಂಡಿರುತ್ತದೆ. ಒಂದು ಮಗುವು ಶೈಕ್ಷಣಿಕವಾಗಿ ಕಷ್ಟಪಡುತ್ತಿರುವುದಕ್ಕೆ ಅದಕ್ಕಿರುವ ಡಿಸ್ಲೆಕ್ಸಿಯಾ ಕಾರಣ ಎಂಬ ಅನುಮಾನವಿರುವಾಗ ಅಥವಾ ಆ ದೋಷವು ವೈದ್ಯಕೀಯವಾಗಿ ಖಚಿತಗೊಂಡಾಗ ಮಾತ್ರವೇ ಈ ವಿಶೇಷ ಶಿಕ್ಷಣ ಯೋಜನೆಯ ನೆರವನ್ನು ನೀಡಬಹುದು. ಮಗುವು ಕಲಿಯಲು ಕಷ್ಟಪಡುತ್ತಿರುವಾಗ ಆ ಕಷ್ಟಗಳು ಯಾವ ಬಗೆಯವು ಎಂಬುದನ್ನು ನಿರ್ಧರಿಸಲು (ಅಥವಾ ಗುರುತಿಸಲು) ಮಗುವಿನ ಶಿಕ್ಷಕರು ಮಗುವನ್ನು ಒಂದು ವ್ಯವಸ್ಥಿತ ಕ್ರಮದಲ್ಲಿ (ಪರಿಶೀಲನಾ ಪಟ್ಟಿ – checklist – ಬಳಸಿ) ಗಮನಿಸುತ್ತಿರಬೇಕಾಗುತ್ತದೆ. ಅಗತ್ಯವಿದ್ದರೆ ಪ್ರಮಾಣೀಕೃತ ಸಾಧನಗಳೊಂದಿಗೆ (ಅದಕ್ಕೆಂದೇ ವಿಶೇಷ ಶಿಕ್ಷಣ ತಜ್ಞರಿದ್ದರೆ ಅಥವಾ ತರಬೇತಿ ಪಡೆದ ಮಾನಸಿಕ ತಜ್ಞರಿದ್ದರೆ ಅವರ ಮೂಲಕ) ಪರಿಶೀಲನೆಯನ್ನೂ ಮಾಡಿಸಿ ಮಗುವಿಗೆ ಯಾವ ಕ್ಷೇತ್ರಗಳಲ್ಲಿ ತೊಂದರೆಗಳಿವೆ ಎಂಬುದನ್ನು ಮತ್ತು ಸಂಬಂಧಿಸಿದ ಉಪ–ಕೌಶಲಗಳನ್ನು, ತೊಂದರೆಗಳು ಯಾವ ಪ್ರಮಾಣದಲ್ಲಿವೆ ಎಂಬುದನ್ನೂ ಸಹ ನಿರ್ಣಯಿಸಬಹುದು.

ಮಗುವಿನ ವೈಕಲ್ಯತೆಯನ್ನು ನಿರ್ಣಯಿಸಿದ ವರದಿಯ ನಂತರ ಅದನ್ನು ಆಧರಿಸಿ ಮಗುವಿಗೆ ಕಲಿಕೆಯನ್ನು ಸರಾಗ ಮಾಡಿಕೊಡುವ ಬಹು–ಆಯಾಮಗಳ ಕಲಿಕಾ ವಿಧಾನವೊಂದನ್ನು ರೂಪಿಸಬಹುದು. ಈ ವರದಿಯು ಪರಿಹಾರ ಶಿಕ್ಷಣಕ್ಕೆ ಒಂದು ಆಧಾರವಾಗುವುದು ಮಾತ್ರವಲ್ಲ, ಆ ವಿಶಿಷ್ಟ ಮಗುವಿಗೆ ಅಗತ್ಯವಿರುವ ಕೌಶಲಗಳನ್ನು ರೂಪಿಸಲು ಮತ್ತು ಬೆಳೆಸಿಕೊಂಡು ಹೋಗಲು ಮಾಡಬೇಕಾದ ಚಟುವಟಿಕೆಗಳನ್ನು ಶಿಫಾರಸು ಮಾಡಬಹುದು. ಅಷ್ಟೇ ಅಲ್ಲ, ಬೋರ್ಡ್ ಪರೀಕ್ಷೆಗಳ ಸಲುವಾಗಿ ತರಗತಿಯಲ್ಲಿ ಮಾಡಬಹುದಾದ ಹೊಂದಾಣಿಕೆಗಳು ಮತ್ತು ವಿನಾಯಿತಿಗಳನ್ನೂ ಸಹ ವರದಿಯು ನಮ್ಮ ಗಮನಕ್ಕೆ ತರುತ್ತದೆ.

ತರಗತಿ ಮತ್ತು ಪರೀಕ್ಷಾ ಹೊಂದಾಣಿಕೆಗಳು

ಡಿಸ್ಲೆಕ್ಸಿಯಾ ಮಕ್ಕಳ ಸಲುವಾಗಿ ತರಗತಿಯಲ್ಲಿ ವಿಶೇಷ ಹೊಂದಾಣಿಕೆ ಮಾಡುವುದರಿಂದ ಮಗುವು ಕಲಿಕೆಯ ಮೇಲೆಯೇ ಗಮನ ಕೊಡಲು ಅನುಕೂಲವಾಗುತ್ತದೆ, ಬದಲಿಗೆ ತಾನು ಇನ್ನೂ ಅಗತ್ಯ ಕೌಶಲಗಳನ್ನು ದಕ್ಕಿಸಿಕೊಂಡಿರದ ಉಪ–ಕೆಲಸಗಳ ಮೇಲೆ ಪ್ರಯತ್ನ ಹಾಕುವುದು ತಪ್ಪುತ್ತದೆ. ಉದಾಹರಣೆಗೆ, ಬರೆಯುವ ಯಾಂತ್ರಿಕ ಕ್ರಿಯೆಯಲ್ಲಿ ಕಷ್ಟವಿರುವ ಮಗುವು ತನ್ನ ಎಲ್ಲ ಸಮಯವನ್ನೂ ಕರಿಹಲಗೆ ಅಥವಾ ಪುಸ್ತಕದಿಂದ ನಕಲು ಮಾಡುವ, ನೋಟ್ಸ್ ಬರೆದುಕೊಳ್ಳುವ ಕ್ರಿಯೆಯೊಳಗೇ ಕಳೆದುಬಿಡುತ್ತದೆ, ಬರೆದುಕೊಳ್ಳುತ್ತಿರುವುದನ್ನು ಅರ್ಥ ಮಾಡಿಕೊಳ್ಳಲು ಅದಕ್ಕೆ ಸಮಯವೇ ಇರುವುದಿಲ್ಲ. ಅದೇ ಮಗುವಿಗೆ ಒಂದು ಧ್ವನಿಮುದ್ರಣ ಯಂತ್ರ ಅಥವಾ ನೋಟ್ಸಿನ ನಕಲು ಪ್ರತಿ ಬಳಸಲು ಅನುಮತಿ ಕೊಟ್ಟರೆ ಮಗುವು ತರಗತಿಯ ಪಾಠಗಳಲ್ಲಿ ಏನು ಹೇಳಕೊಡಲಾಗುತ್ತದೆಯೋ ಆ ಅಂಶಗಳನ್ನು ಗ್ರಹಿಸುವ ಕ್ರಿಯೆಯಲ್ಲಿ ತನ್ನೆಲ್ಲ ಶ್ರಮ ಹಾಕಲು ಸಾಧ್ಯ ಆಗುತ್ತದೆ. ಅದೇ ರೀತಿ ಪ್ರೌಢಶಾಲೆಗಳಲ್ಲಿ ಪ್ರತೀ ಪರೀಕ್ಷಾ ಮಂಡಳಿಯೂ (ಬೋರ್ಡ್) ಡಿಸ್ಲೆಕ್ಸಿಯಾ ಇರುವ ಮಕ್ಕಳಿಗೆ ವಿವಿಧ ರೀತಿಯ ವಿನಾಯಿತಿಗಳನ್ನು ನೀಡುತ್ತದೆ. ಕೆಲವು ಮಂಡಳಿಗಳಲ್ಲಿ ಅಂತಹ ಮಕ್ಕಳು ಗಣಿತ ಪರೀಕ್ಷೆ ಬರೆಯದೇ ಇದ್ದರೂ ನಡೆಯುತ್ತದೆ (ಮಕ್ಕಳಿಗೆ ಸಂಖ್ಯೆಗಳನ್ನು ಕಲಿಯಲು ಕಷ್ಟವಿದ್ದಾಗ), ಅಥವಾ ದ್ವಿತೀಯ ಭಾಷಾ ಪರೀಕ್ಷೆಯಿಂದಲೂ ವಿನಾಯಿತಿ ನೀಡಲಾಗುತ್ತದೆ (ಮಗುವಿಗೆ ನಿಶ್ಚಿತವಾಗಿ ಭಾಷೆಯನ್ನು ಕಲಿಯಲು ಕಷ್ಟಗಳಿದ್ದಾಗ). ಈ ಮಕ್ಕಳಿಗೆ ಪರೀಕ್ಷೆಗಳಲ್ಲಿ ಎಲ್ಲರಿಗಿಂತ ಹೆಚ್ಚಿನ ಸಮಯ ನೀಡುವುದು, ಕ್ಯಾಲ್ಕುಲೇಟರ್ ಬಳಸಲು ಅನುಮತಿ ನೀಡುವುದು, ಬರೆಯಲು ಅಥವಾ ಓದಲು ಮತ್ತೊಬ್ಬರನ್ನು ಒದಗಿಸುವುದು ಹೀಗೆ ಇನ್ನೂ ಅನೇಕ ವಿನಾಯಿತಿಗಳನ್ನು ನೀಡಲಾಗುತ್ತದೆ. ಇಂತಹ ಬೆಂಬಲ ವ್ಯವಸ್ಥೆಗಳು ಡಿಸ್ಲೆಕ್ಸಿಯಾದ ತೊಂದರೆಗಳನ್ನು ನಿರ್ವಹಿಸುವ ಒತ್ತಡವನ್ನು ಇಳಿಸುತ್ತವೆ. ಆ ಮೂಲಕ ವಿದ್ಯಾರ್ಥಿಗೆ ಇತರ ಕ್ಷೇತ್ರಗಳಲ್ಲಿ ಉತ್ತಮ ಸಾಧನೆಯನ್ನು ತೋರಲು ಒಂದು ಪ್ರಚೋದಕ ಪರಿಸರವನ್ನು ಒದಗಿಸುತ್ತವೆ.

ತರಗತಿ ಕೋಣೆಯ ಪ್ರಕ್ರಿಯೆಗಳು ಮತ್ತು ಸಂಗಡಿಗರಿಗೆ ಸೂಕ್ಷ್ಮತೆಯನ್ನು ಕಲಿಸುವುದು

ಶಾಲೆಯೊಳಗಿನ ಬದುಕು ಕೇವಲ ಪರೀಕ್ಷೆಗಳು ಮತ್ತು ಶೈಕ್ಷಣಿಕ ಸಾಧನೆಗಳಿಗಷ್ಟೇ ಸೀಮಿತವಾದುದಲ್ಲ; ದಿನನಿತ್ಯದ ಚಟುವಟಿಕೆಗಳೂ ಸವಾಲೊಡ್ಡಬಹುದು. ಉದಾಹರಣೆಗೆ, ಶಾಲೆಯಲ್ಲಿ ಬೋಧನೆ ಮತ್ತು ಕಲಿಕೆಯ ಪ್ರಕ್ರಿಯೆಯಲ್ಲಿ ಗಟ್ಟಿಯಾಗಿ ಓದುವ ತರಗತಿಗಳು ಮಹತ್ವದ ಪಾತ್ರ ವಹಿಸುತ್ತವೆ. ಡಿಸ್ಲೆಕ್ಸಿಯಾ ಇರುವ ಮಕ್ಕಳಲ್ಲಿ ಕೆಲವರಿಗೆ ಭಾಷಾಜ್ಞಾನವು ಉತ್ತಮವಾಗಿದ್ದರೂ ಓದಲು ಕಷ್ಟಪಡುತ್ತಿರುತ್ತಾರೆ, ಈ ಮಕ್ಕಳಿಗೆ ಗಟ್ಟಿಯಾಗಿ ಓದುವ ತರಗತಿಗಳು ದೊಡ್ಡ ಸವಾಲಾಗಬಹುದು. ಸ್ವಾಭಾವಿಕವಾಗಿಯೇ ಡಿಸ್ಲೆಕ್ಸಿಯಾ ಇರುವ ಮಗುವು ತನ್ನ ಸುತ್ತಲೂ ಕವಚವೊಂದನ್ನು ನಿರ್ಮಿಸಿಕೊಳ್ಳುತ್ತದೆ, ತರಗತಿಯ ಪ್ರಕ್ರಿಯೆಗಳಲ್ಲಿ ಆಸಕ್ತಿ ಕಳೆದುಕೊಳ್ಳುತ್ತದೆ ಮತ್ತು ಶಾಲೆಯನ್ನೂ ಬಿಡಬಹುದು.

ಅಂತಹ ಸನ್ನಿವೇಶದಲ್ಲಿ ಶಿಕ್ಷಕರು ಮೊದಲು ಮಾದರಿ ಓದನ್ನು ತೋರಿಸಿಕೊಟ್ಟ ನಂತರ ತಮ್ಮ ಬೋಧನೆಯಲ್ಲಿ 'ಪದಗುಚ್ಛಗಳ ಓದು' (phrasal reading) ಮತ್ತು 'ಜೋಡಿ ವ್ಯವಸ್ಥೆ' ಅಥವಾ 'ಸಂಗಡಿಗನೊಂದಿಗೆ ಓದುವ ವ್ಯವಸ್ಥೆ' (buddy system)ಯನ್ನು ಅಳವಡಿಸಿಕೊಳ್ಳಬಹುದು. ಕಷ್ಟಪಡುತ್ತಿರುವ ಓದುಗನಿಗೆ ಶಿಕ್ಷಕರು ಕ್ರಿಯಾಪದಕ್ಕಿಂತ ಮೊದಲು ಬರುವ ಪದಗಳನ್ನು ಒಂದು ಇಡೀ ತುಣುಕಿನಂತೆ ಮತ್ತು ಅದೇ ರೀತಿ ಕ್ರಿಯಾಪದದ ನಂತರ ಬರುವ ಪದಗಳನ್ನು ಒಂದು ತುಣುಕಿನಂತೆ ಗುಂಪು ಮಾಡಲು ಹೇಳಬಹುದು, ಆಗ ಮಗುವು ಪ್ರತೀ ಪದವನ್ನೂ ಓದುತ್ತ ಹೋಗುವ ಬದಲು ಎರಡು ಅರ್ಥಪೂರ್ಣ ಪದಗುಚ್ಛಗಳ ನಡುವೆ ಸ್ವಲ್ಪ ನಿಲ್ಲಿಸಿ ಓದಬಹುದು. ಶಿಕ್ಷಕರು ಮೊದಲು ಮಾದರಿ ಓದನ್ನು ತೋರಿಸಿದ ನಂತರ ಗುಂಪು ಓದನ್ನು ನಡೆಸುವುದರಿಂದ ಮಕ್ಕಳಿಗೆ ಪಠ್ಯ ಮತ್ತು ಪಠ್ಯದೊಳಗಿನ ಹೊಸ ಪದಗಳು ಪರಿಚಯವಾಗುತ್ತವೆ. 'ಓದುವ ಸಂಗಡಿಗ'ನೊಬ್ಬ ಅಗತ್ಯವಿರುವ

ಹಂದರವನ್ನು ಒದಗಿಸುತ್ತಾನೆ/ಳೆ, ಪದಗುಚ್ಛಗಳ ಓದು ಪದಗಳನ್ನು ಗುಚ್ಛಗಳನ್ನಾಗಿಸಿ ಓದನ್ನು ಸುಲಭಗೊಳಿಸುತ್ತದೆ. ಹೀಗಾದಾಗ ಮಗುವಿಗೆ ತರಗತಿಯ ಚಟುವಟಿಕೆಗಳಲ್ಲಿ ಭಾಗವಹಿಸಲು ಆತ್ಮವಿಶ್ವಾಸ ಹೆಚ್ಚುತ್ತದೆ, ಸಂಗಡಿಗರು ತಾನು ಓದಲು ಕಷ್ಟಪಡುವುದನ್ನು ನೋಡಿ ಅಪಹಾಸ್ಯ ಮಾಡಬಹುದೆಂಬ ಭಯ ಇಲ್ಲವಾಗುತ್ತದೆ. 'ಸಂಗಡಿಗನೊಂದಿಗೆ ಓದುವ ವ್ಯವಸ್ಥೆಯು' ಡಿಸ್ಲೆಕ್ಸಿಯಾ ಇರುವ ಮಗುವಿಗೊಂದೇ ಅಲ್ಲ ಎಲ್ಲಾ ಮಕ್ಕಳಿಗೂ ಸಹಾಯ ಮಾಡುತ್ತದೆ, ಪರಸ್ಪರ ಒಬ್ಬರು ಇನ್ನೊಬ್ಬರ ಕಾಳಜಿ ಮಾಡುತ್ತ ಜವಾಬ್ದಾರಿಯುತವಾಗಿ ವರ್ತಿಸಲು ಕಲಿಸುತ್ತದೆ. ಅದು ಸಾಧ್ಯವಾಗುವುದು ಸಂಗಡಿಗರಿಗೆ ಅವರ ಪಾಲಕರು ಮತ್ತು ಶಿಕ್ಷಕರು ಸೂಕ್ಷ್ಮತೆಯನ್ನು ಕಲಿಸಿದಾಗಲೇ. ಡಿಸ್ಲೆಕ್ಸಿಯಾವನ್ನು ಕುರಿತು ತಿಳುವಳಿಕೆ ಮೂಡಿಸುವುದು, ಅದರ ತೊಂದರೆಗಳ ಬಗೆಗೆ ತಿಳಿಸಿ-ಕೊಡುವುದು, ಅವರಿಗೂ ಸಮಾನ ಅವಕಾಶಗಳನ್ನು ನೀಡುವುದು, ಡಿಸ್ಲೆಕ್ಸಿಯಾ ಇರುವ ಮಕ್ಕಳ ಸಾಮರ್ಥ್ಯಗಳನ್ನು ಗುರುತಿಸುವುದು, ಈ ಮಕ್ಕಳಿಗೆ ಕಿರುಕುಳ ಕೊಡುವ ಮಕ್ಕಳನ್ನು ನಿಭಾಯಿಸುವುದು ಇವೆಲ್ಲ ಆ ಹಾದಿಯಲ್ಲಿ ಇಡುವ ಹೆಜ್ಜೆಗಳು. ಹೀಗಾದಾಗ ಮಕ್ಕಳು ವೈಕಲ್ಯಗಳನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಲು ಕಲಿಯುತ್ತಾರೆ ಮತ್ತು ಡಿಸ್ಲೆಕ್ಸಿಯಾ ಇರುವ ಮಕ್ಕಳು ಅವರ ಸಾಮರ್ಥ್ಯವನ್ನು ತಲುಪಲು ಸೂಕ್ತ ಬೆಂಬಲ ನೀಡುವ ಒಂದು ಸಾಮಾಜಿಕ ಜವಾಬ್ದಾರಿಯನ್ನು ತೆಗೆದುಕೊಂಡಂತಾಗುತ್ತದೆ.

ಪ್ರತಿಭೆಗಳನ್ನು ಗುರುತಿಸುವುದು

ಶಾಲೆಯ ವಾರ್ಷಿಕೋತ್ಸವವೆಂಬುದು ಶೈಕ್ಷಣಿಕ ಪ್ರಗತಿಯ ಪ್ರದರ್ಶನ ಮಾತ್ರವಲ್ಲ. ಒಂದು ಮಗುವಿನಲ್ಲಿ ಹುದುಗಿರುವ ಪ್ರತಿಭೆಯನ್ನು ಪ್ರದರ್ಶಿಸಲು ಮತ್ತು ಗುರುತಿಸಲು ಅದೊಂದು ವೇದಿಕೆಯಾಗಿರುತ್ತದೆ. ಅದು ಮಗುವಿನಲ್ಲಿ ಆತ್ಮಗೌರವವನ್ನು ಬೆಳೆಸುತ್ತದೆ. ಬಹಳ ಸಲ ಡಿಸ್ಲೆಕ್ಸಿಯಾ ಇರುವ ಮಕ್ಕಳಿಗೆ ಶೈಕ್ಷಣಿಕವಾಗಿ ಉತ್ತಮ ಸಾಧನೆ ತೋರಲು ಆಗುತ್ತಿರುವುದಿಲ್ಲ, ಅದು ಪಕ್ಷಪಾತ ಧೋರಣೆಗೆ ದಾರಿಯಾಗುತ್ತದೆ. ಪಠ್ಯೇತರ ಚಟುವಟಿಕೆಗಳಿಗೆ ಆಯ್ಕೆ ಮಾಡುವಾಗ (ಉದಾಹರಣೆಗೆ ವಾರ್ಷಿಕೋತ್ಸವದ ಕಾರ್ಯಕ್ರಮಗಳಿಗೆ ಮಕ್ಕಳನ್ನು ಆಯ್ಕೆ ಮಾಡಿಕೊಳ್ಳುವಾಗ) ಅವರ ಶೈಕ್ಷಣಿಕ ಸಾಧನೆಯನ್ನು ಅವಲಂಬಿಸಿ ಅಂತಹ ಮಕ್ಕಳನ್ನು ಬದಿಗೊತ್ತಲಾಗುತ್ತದೆ. ಡಿಸ್ಲೆಕ್ಸಿಯಾ ಇರುವ ಮಕ್ಕಳಲ್ಲಿ ಹುದುಗಿರುವ ಪ್ರತಿಭೆಯನ್ನು ಗುರುತಿಸಿ ಅದಕ್ಕೊಂದು ಅವಕಾಶ ಮಾಡಿಕೊಡುವುದು ಬಹಳ ಮುಖ್ಯ ಎನ್ನುವುದನ್ನು ಶಿಕ್ಷಕರು ಅರ್ಥ ಮಾಡಿಕೊಳ್ಳಬೇಕು. ಅವರ ಪ್ರತಿಭೆಯನ್ನು ಗುರುತಿಸಿದಾಗ ಅದು ಅವರಿಗೆ ಆತ್ಮವಿಶ್ವಾಸವನ್ನು ತಂದುಕೊಡುವುದು ಮಾತ್ರವಲ್ಲ ಶಾಲೆಯ ಚಟುವಟಿಕೆಗಳ ಬಗೆಗೂ ಆಸಕ್ತಿ ಹೆಚ್ಚಾಗುತ್ತದೆ. ಸಾಮರ್ಥ್ಯಗಳು ಉತ್ತಮ ಕಲಿಕೆಗೆ ದಾರಿ ಮಾಡಿಕೊಡುತ್ತವೆ ಮತ್ತು ಅವುಗಳಿಗೆ ಬೇಕಾದ ಅಗತ್ಯಗಳಿಂದ ಎದುರಾಗುವ ಸಮಸ್ಯೆಗಳನ್ನು ದಾಟಲೂ ಅವಕಾಶ ಮಾಡಿಕೊಡುತ್ತವೆ.

ಆಟ

ಆಟವು ಮಕ್ಕಳ ಸಮಾಜೋ- ಭಾವನಾತ್ಮಕ ಬೆಳವಣಿಗೆಗೆ ಬಹುಮುಖ್ಯವಾದ ದಾರಿಯಾಗಿದೆ. ಎಲ್ಲರನ್ನೂ ಒಳಗೊಂಡು ಆಡುವ ಪರಿಸರವಿದ್ದರೆ ಡಿಸ್ಲೆಕ್ಸಿಯಾ ಇರುವ ಮಗುವಿಗೆ ಸಮವಯಸ್ಕರೊಡನೆ ಕಲಿಯುತ್ತ ಕಾರ್ಯನಿರ್ವಹಣೆಯ ಕೌಶಲವನ್ನು ರೂಪಿಸಿಕೊಳ್ಳಲು ಒಂದು ಅವಕಾಶವನ್ನು ಕಲ್ಪಿಸುತ್ತದೆ. ಆವೇಗವನ್ನು ನಿಯಂತ್ರಿಸಿಕೊಳ್ಳುವುದು, ಮುಕ್ತ ಆಲೋಚನೆ, ಸಂಘಟನಾ ಕೌಶಲ, ಎಲ್ಲ ಕ್ರಮದಲ್ಲಿ ಸಂಯೋಜಿಸುವುದು ಮತ್ತು ಸ್ವ-ನಿರ್ವಹಣೆಯಂತಹ ಬದುಕಿನ ಕೌಶಲಗಳನ್ನು ದಕ್ಕಿಸಿಕೊಳ್ಳಲು ಅದಕ್ಕಿಂತ ಉತ್ತಮವಾದ ಬೇರೆ ತಂತ್ರಗಳು ಇವೆಯೇ?

ಅದರೊಂದಿಗೆ ಸಾಕ್ಷರತೆಯ ಅನೇಕ ಕೌಶಲಗಳನ್ನು ದಕ್ಕಿಸಿಕೊಳ್ಳಲು ಆಟವು ಎಲ್ಲರೂ ಒಪ್ಪಿಕೊಂಡ ಒಂದು ಪರ್ಯಾಯ ಹಾದಿಯಾಗಿದೆ. ಉದಾಹರಣೆಗೆ, ಭಾಷಾ ಬೆಳವಣಿಗೆಯು ಆಟದ ಮೂಲಕ ಸ್ವಾಭಾವಿಕವಾಗಿ ನಡೆಯುತ್ತಿರುತ್ತದೆ, ಹೊಸ ಪದಗಳನ್ನು ಆಲಿಸಲು ಮತ್ತು ಅವುಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸಲು, ಸಮರ್ಪಕವಾಗಿ ಅನ್ವಯಿಸಲು ಅದು ಅನೇಕ ಅವಕಾಶಗಳನ್ನು ಒದಗಿಸುತ್ತದೆ. ಅದಕ್ಕಿಂತ ಹೆಚ್ಚಾಗಿ ಹೆಚ್ಚು-ಕಡಿಮೆ, ದೊಡ್ಡದು-ಚಿಕ್ಕದು ಎಂಬ ಪರಿಕಲ್ಪನೆಗಳು ಆಟದ ಅವಿಭಾಜ್ಯ ಅಂಗಗಳಾಗಿವೆ. ಅನೇಕ ಆಟಗಳಲ್ಲಿ ಲೆಕ್ಕ ಮಾಡುವುದು, ಅಂಕಗಳನ್ನು ಎಣಿಸುವಂತಹ ಕೌಶಲಗಳನ್ನು ಬೇಡುತ್ತವೆ, ಆ ಮೂಲಕ ಸಂಖ್ಯಾಜ್ಞಾನದ ಕೌಶಲಗಳನ್ನು ಬೆಳೆಸಿಕೊಳ್ಳಲು ಅವಕಾಶ ಒದಗಿಸುತ್ತವೆ. ಈ ರೀತಿ ಆಟದಿಂದ ಸಿಗುವ ಪಠ್ಯೇತರ ವಾತಾವರಣವು ಡಿಸ್ಲೆಕ್ಸಿಯಾ ಇರುವ ಮಗುವಿನ ಬೆಳವಣಿಗೆಗೆ ಪೋಷಣೆಯನ್ನು ಒದಗಿಸುತ್ತದೆ.

ಎಲ್ಲಿಂದ ಆರಂಭಿಸುವುದು?

ಮೇಲೆ ಹೇಳಿದ ಎಲ್ಲಾ ಕ್ರಮಗಳೂ ಸಾಧ್ಯವಾಗಬೇಕೆಂದರೆ ಮಗುವಿನ ಬದುಕಿನಲ್ಲಿ ಮುಖ್ಯ ಪಾತ್ರವನ್ನು ವಹಿಸುವ ಶಿಕ್ಷಕರು ಮತ್ತು ಪಾಲಕರು ಮಗುವಿನ ನರವೈಜ್ಞಾನಿಕ ಸ್ಥಿತಿಯನ್ನು (neurological condition) ಅರಿತು ಅದನ್ನು ಒಪ್ಪಿಕೊಳ್ಳಲು ಸಿದ್ಧರಾಗಬೇಕು. ಆದ್ದರಿಂದ ಈ ನರವೈಜ್ಞಾನಿಕ ಸ್ಥಿತಿಯ ಬೇರೆಬೇರೆ ಅಂಶಗಳನ್ನು ಕುರಿತು ಅರಿವು ಮೂಡಿಸಲು ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಅತ್ಯವಶ್ಯ. ಈ ಸ್ಥಿತಿಯನ್ನು ಕುರಿತು ತಿಳುವಳಿಕೆ ಹೇಳಬಲ್ಲ ತಜ್ಞರ ಸಹಯೋಗದೊಂದಿಗೆ ಶಾಲೆಗಳು ಅಂತಹ ಕಾರ್ಯಕ್ರಮಗಳನ್ನು ಆಯೋಜಿಸಬಹುದು. ಈ ಕುರಿತು ಅರಿವು ಪಡೆದ ಪಾಲಕರು ಮತ್ತು ಶಿಕ್ಷಕರು ಡಿಸ್ಲೆಕ್ಸಿಯಾ ಇರುವ ಮಕ್ಕಳ ಸಾಮರ್ಥ್ಯಗಳನ್ನು ಗುರುತಿಸಿ ಅವರ ದೌರ್ಬಲ್ಯಗಳನ್ನು ಅರ್ಥ ಮಾಡಿಕೊಂಡು ಅವರೊಂದಿಗೆ ಸಮರ್ಪಕವಾಗಿ ಸಂವಹನ ನಡೆಸಲು (ಒಡನಾಡಲು) ಶಕ್ತರಾಗುತ್ತಾರೆ. ಅವರು ಅಂತಹ ಮಕ್ಕಳ

ಬೆಳವಣಿಗೆಯನ್ನು ಪೋಷಿಸುವಂತಹ ಒಂದು ಪರಿಸರವನ್ನು ನಿರ್ಮಿಸುವುದು ಮಾತ್ರವಲ್ಲ, ಆ ಮಕ್ಕಳ ಬೆಳವಣಿಗೆಗೆ ಸಹಾಯವಾಗುವಂತಹ ಕಾರ್ಯಕ್ರಮಗಳನ್ನು ರೂಪಿಸಲು ಅವರೇ ಸಕ್ರಿಯವಾಗಿ ಮೊದಲ ಹೆಜ್ಜೆಗಳನ್ನಿಡುವಂತಾಗುತ್ತದೆ. ಅವರೆಲ್ಲ ಒಟ್ಟಾಗಿ (ಪಾಲಕರು, ಶಿಕ್ಷಕರು ಮತ್ತು ಶಾಲೆ) ಡಿಸ್ಲೆಕ್ಸಿಯಾ ಇರುವ ಮಕ್ಕಳನ್ನು ಒಪ್ಪಿಕೊಳ್ಳುತ್ತಾರೆ, ಅವರು ಹೆಚ್ಚು ಕ್ರಿಯಾಶೀಲರಾಗುವಂತೆ, ಸಂತೋಷದಿಂದ ಇರುವಂತೆ ಮಾಡಲು ಅವರಿಗೆ ಅಗತ್ಯವಿರುವ ಸಮಾಜೋ–ಭಾವನಾತ್ಮಕ ಅಟ್ಟಣಿಗೆಯನ್ನು ಒದಗಿಸುವ ಮೂಲಕ ಅವರನ್ನು ಸಶಕ್ತರನ್ನಾಗಿ ಮಾಡುತ್ತಾರೆ ಮತ್ತು ಅವರನ್ನು ಮೇಲಿನ ಹಂತಕ್ಕೆ ಒಯ್ಯುತ್ತಾರೆ.

---



**ಮಾಲಾ. ಆರ್. ನಟರಾಜನ್** ಇವರು ಡಿಸ್ಲೆಕ್ಸಿಯಾ ಇರುವ ಮಕ್ಕಳಿಗೆ ಕಲಿಸಲು ವಿಶೇಷ ತರಬೇತಿ ಪಡೆದ ಶಿಕ್ಷಕಿಯಾಗಿದ್ದಾರೆ. ಪ್ರಸ್ತುತ ಮದ್ರಾಸಿನ ಡಿಸ್ಲೆಕ್ಸಿಯಾ ಅಸೋಸಿಯೇಶನ್ ನಲ್ಲಿ ಕೆಲಸ ಮಾಡುತ್ತಿದ್ದಾರೆ. ಮಾಹಿತಿ ತಂತ್ರಜ್ಞಾನದ ಕಾರ್ಪೊರೇಟ್ ವಿಭಾಗದಲ್ಲಿ ಅವರು ಕೆಲಸ ಮಾಡಿದ್ದಾರೆ ಮತ್ತು ಬೋಧನೆಯಲ್ಲಿ ತೀವ್ರ ಆಸಕ್ತಿಯಿರುವ ಇವರು ಈ ಯೋಜನೆಗಳಿಗೆ ಪ್ರಾಯೋಗಿಕ ಒಳನೋಟಗಳನ್ನು ನೀಡಿದ್ದಾರೆ. ಅವರನ್ನು mala.m@mdachennai.com ಇ–ಮೇಲ್ ನಲ್ಲಿ ಸಂಪರ್ಕಿಸಬಹುದು.

ಅನುವಾದ: **ಪ್ರಜ್ಞಾ ಎಲ್.ಎಸ್.** | ಪರಿಶೀಲನೆ: **ನಾಗಮಣಿ ಎಸ್. ಎನ್.**

ಒತ್ತಡ ಮತ್ತು ಆತಂಕವು ಬದಲಾವಣೆಗಳು ಮತ್ತು ಕಷ್ಟಗಳಿಗೆ ನೀಡುವ ಸಾಮಾನ್ಯ ಪ್ರತಿಕ್ರಿಯೆಗಳಾಗಿವೆ, ಇದು ಬಾಲ್ಯದಿಂದಲೂ ಸಹ ಪ್ರತಿಯೊಬ್ಬರ ಜೀವನದ ಭಾಗವಾಗಿದೆ. ಒತ್ತಡ ಮತ್ತು ಆತಂಕವು ಋಣಾತ್ಮಕ ಸಂದರ್ಭಗಳಲ್ಲಿ ಉಂಟಾಗುವ ಭಯಾನಕ ಭಾವನೆಗಳು ಎಂದು ನಾವು ಆಗಾಗ್ಗೆ ನಂಬುತ್ತೇವೆ. ಆದಾಗ್ಯೂ, ಸಂತೋಷದ ಸಂದರ್ಭಗಳ (ಶಾಲಾ ಘಟನೆಗಳು, ರಜೆಗಳು ಅಥವಾ ಸಾಮಾಜಿಕ ಹವ್ಯಾಸಗಳಂತಹ) ನಿರೀಕ್ಷೆಯು ಕೆಲವೊಮ್ಮೆ ಒತ್ತಡವನ್ನು ಉಂಟುಮಾಡಬಹುದು. ಏನನ್ನಾದರೂ ನಿರೀಕ್ಷಿಸುವ ಸಂದರ್ಭ ಬಂದಾಗ, ಮಾರ್ಪಡಿಸಬೇಕಾದ ಅಥವಾ ರಕ್ಷಿಸಬೇಕಾದಾಗ, ಮಕ್ಕಳು ಒತ್ತಡ ಮತ್ತು ಆತಂಕವನ್ನು ಅನುಭವಿಸುತ್ತಾರೆ. ಅವರಿಗೆ ಮುಖ್ಯವಾದ ವಿಷಯವು ಅಪಾಯಕ್ಕೆ ಸಿಲುಕಿದಾಗ, ಅವರು ಆತಂಕಕ್ಕೊಳಗಾಗುತ್ತಾರೆ. ನನ್ನ ಅನೇಕ ವಿದ್ಯಾರ್ಥಿಗಳು ತರಗತಿಯ ಮುಂದೆ ಅಥವಾ ಬೆಳಗ್ಗಿನ ಶಾಲಾ ಸಭೆಯಲ್ಲಿ ಮಾತನಾಡಬೇಕಾದಾಗ ಒತ್ತಡ ಮತ್ತು ಆತಂಕಕ್ಕೆ ಒಳಗಾಗುತ್ತಾರೆ. ಈ ಆತಂಕವನ್ನು ಹೋಗಲಾಡಿಸಲು, ನಾನು ಅವರನ್ನು ವಿವಿಧ ಒತ್ತಡ–ನಿವಾರಕ ಚಟುವಟಿಕೆಗಳಲ್ಲಿ (stress-relieving activities) ತೊಡಗಿಸಿದೆ.

# ಸಾಮಾನ್ಯ ಶಾಲೆಗಳಲ್ಲಿ ವಿಶೇಷ ಮಕ್ಕಳು

ಪಲ್ಲವಿ ದತ್ತಾ

ಏಳು ವರ್ಷದ ನೇಹಾ, ಭೋಪಾಲ್‌ನ ಪ್ರಮುಖ ಶಾಲೆಯೊಂದರಲ್ಲಿ ಎರಡನೇ ತರಗತಿಯಲ್ಲಿ ಓದುತ್ತಿರುವ ಬುದ್ಧಿವಂತ ವಿದ್ಯಾರ್ಥಿನಿ. ತನ್ನ ಶಿಕ್ಷಕರ ನೆಚ್ಚಿನ ಶಿಷ್ಯೆಯಾಗಿರುವ ಆಕೆ ತನ್ನ ಓರಗೆಯ ಗುಂಪಿನಲ್ಲಿ ನಾಯಕಿ. ಶೈಕ್ಷಣಿಕವಾಗಿ ಉತ್ತಮ ಸಾಧನೆ ಮಾಡುತ್ತಿರುವ ನೇಹಾ ತನ್ನ ಸಹಪಾಠಿಗಳಿಗೆ ಅವರ ಶಾಲೆಯ ಕೆಲಸಗಳಲ್ಲೂ ಸಹಾಯ ಮಾಡಲು ಇಷ್ಟಪಡುತ್ತಾಳೆ. ಅವಳು ಎಷ್ಟೊಂದು ಲವಲವಿಕೆಯಿಂದ ಇದ್ದಾಳೆ ಎಂದರೆ ಅವಳಿಗೆ ದೃಷ್ಟಿಹೀನತೆಯಿದೆ ಎಂಬುದೇ ಮರೆತುಹೋಗುತ್ತದೆ. ಆಕೆಯ ಪಠ್ಯಪುಸ್ತಕಗಳಲ್ಲಿ ಅಕ್ಷರಗಳನ್ನು ತೂತು ಮಾಡಿ, ಚುಚ್ಚಿ ಮೂಡಿಸಲಾಗಿದೆ (ಬ್ರೈಲ್), ಮುದ್ರಿಸಲಾಗಿಲ್ಲ.

ನೇಹಾಗೆ ನಾಲ್ಕು ವರ್ಷ ವಯಸ್ಸಾಗುವವರೆಗೆ ಯಾವುದೇ ಔಪಚಾರಿಕ ಶಿಕ್ಷಣ ದೊರೆತಿರಲಿಲ್ಲ. ಅವರ ಮನೆಯ ಸುತ್ತಮುತ್ತಲಿನ ಹೆಚ್ಚಿನ ಶಾಲೆಗಳು ವಿಶೇಷಚೇತನ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಲು ಸುಸಜ್ಜಿತವಾಗಿಲ್ಲದ ಕಾರಣ ಆಕೆಯ ಪೋಷಕರು ಅವಳನ್ನು ಮನೆಯಲ್ಲೇ (ಹೋಮ್-ಸ್ಕೂಲಿಂಗ್) ತಮ್ಮ ಕೈಲಾದಷ್ಟು ತರಬೇತುಗೊಳಿಸಿದ್ದರು. ಅವಳು ತನ್ನ ಮುಖ್ಯವಾಹಿನಿಯ ಶಾಲೆಯಲ್ಲಿ ಇತರ ಸಹಪಾಠಿಗಳಿಗಿಂತ ವಯಸ್ಸಿನಲ್ಲಿ ಹೆಚ್ಚು ದೊಡ್ಡವಳಾದರೆ ಹೇಗೆ ಸುಧಾರಿಸುತ್ತಾಳೆ, ಅವಳು ಇತರ ಮಕ್ಕಳಿಂದ ಪ್ರತ್ಯೇಕಿಸಲ್ಪಟ್ಟರೆ ಅಥವಾ ಕೆಟ್ಟದಾಗಿ ನಡೆಸಿಕೊಳ್ಳಲ್ಪಟ್ಟರೆ ಅಥವಾ ಬಹಿಷ್ಕರಿಸಲ್ಪಟ್ಟರೆ ತನ್ನನ್ನು ತಾನು ಹೇಗೆ ನಿಭಾಯಿಸಿಕೊಳ್ಳುತ್ತಾಳೆ ಎಂದು ಅವರು ತಮ್ಮ ಮಗುವಿನ ಬಗ್ಗೆ ಚಿಂತಿತರಾಗಿದ್ದರು. ಆಗ ಆಕೆಯ ಪೋಷಕರಿಗೆ ದೈಹಿಕ ಮತ್ತು ಬೌದ್ಧಿಕ ಅಸಾಮರ್ಥ್ಯ ಹೊಂದಿರುವ ಮಕ್ಕಳು ಮತ್ತು ವಯಸ್ಕರೊಂದಿಗೆ ಕಾರ್ಯನಿರ್ವಹಿಸುವ 'ಆರುಷಿ' ಎಂಬ ಲಾಭರಹಿತ ಸಂಸ್ಥೆಯ ಬಗ್ಗೆ ತಿಳಿಯಿತು. ಆನಂತರ ನೇಹಾಳನ್ನು ಅಲ್ಲಿಗೆ ಕರೆತಂದರು,

ತಮ್ಮ ಮೂಲಭೂತ ತತ್ವದ ಭಾಗವಾಗಿ, 'ಆರುಷಿ' ಸಂಸ್ಥೆಯಲ್ಲಿ ಮಕ್ಕಳು ಮತ್ತು ವಿಕಲಚೇತನರು 'ವಿಶೇಷ ಅಗತ್ಯತೆಗಳನ್ನು' ಪೂರೈಸುವ ಪರಿಸರದಿಂದ ಹೊರಬರುವಂತೆ ಪ್ರಯತ್ನಿಸುತ್ತದೆ ಮತ್ತು 'ಮುಖ್ಯವಾಹಿನಿ' ಸಮಾಜದಲ್ಲಿ ಹೊಂದಿಕೊಳ್ಳಲು ಅನುವು ಮಾಡಿಕೊಡುವ ಜೀವನ ಕೌಶಲಗಳೊಂದಿಗೆ ಅವರನ್ನು ಸಬಲಗೊಳಿಸುತ್ತದೆ.

## ವಿಶೇಷ ಶಾಲೆಗಳ ಅಗತ್ಯ ಏಕೆ ಮತ್ತು ಯಾವಾಗ

ಸುಮಾರು 2 ರಿಂದ 6 ವರ್ಷ ವಯಸ್ಸಿನ ವಿಶೇಷಚೇತನ ಮಕ್ಕಳು ಸಾಮಾನ್ಯ ಶಾಲೆಗಳಿಗೆ ಅರ್ಹರಾಗಿದ್ದರೆ, ಅವರನ್ನು ಒಂದನೇ ತರಗತಿಗೆ ಕಳುಹಿಸುವ ನಿರ್ಧಾರವು ವ್ಯಕ್ತಿನಿಷ್ಠವಾದುದು ಮತ್ತು ಅದು ಮಗುವಿನ ಅಂಗವೈಕಲ್ಯದ ಸ್ವರೂಪ ಮತ್ತು ತೀವ್ರತೆಯನ್ನು ಆಧರಿಸಿದೆ. ಸಣ್ಣ ಪ್ರಮಾಣದ ಅಥವಾ ಮಧ್ಯಮ ಮಟ್ಟದ ಅಂಗವೈಕಲ್ಯ ಹೊಂದಿರುವ ಈ ವಯಸ್ಸಿನ ಮಕ್ಕಳು ಸಾಮಾನ್ಯ ಶಾಲೆಗಳಿಗೆ ಹೊಂದಿಕೊಳ್ಳುವ ಉತ್ತಮ ಅವಕಾಶವನ್ನು ಹೊಂದಿರುತ್ತಾರೆ.

ದೃಷ್ಟಿ ಅಥವಾ ಶ್ರವಣ ಸಂಬಂಧಿತ ಅಸಾಮರ್ಥ್ಯಗಳನ್ನು ಹೊಂದಿರುವ ಮಕ್ಕಳು ಯಾವುದೇ ವಯಸ್ಸಿನಲ್ಲಿ ಸಾಮಾನ್ಯ ಶಾಲೆಗೆ ಹೋಗಬಹುದು. ಏಕೆಂದರೆ ಅವರ ವೈಕಲ್ಯತೆ ಸಂಪೂರ್ಣವಾಗಿ ದೈಹಿಕವಾಗಿರುತ್ತದೆ ಮತ್ತು ಅದು ಬೌದ್ಧಿಕತೆಗೆ ಸಂಬಂಧಿಸಿರುವುದಿಲ್ಲ. ಡೌನ್ ಸಿಂಡ್ರೋಮ್, ಸ್ವಲೀನತೆ (ಆಟಿಸಂ) ಮತ್ತು ಇತರ ಬೌದ್ಧಿಕ ಅಸಾಮರ್ಥ್ಯಗಳಿರುವ ಮಕ್ಕಳು, ಅವರ ಬೆಳವಣಿಗೆಯ ಮೈಲಿಗಲ್ಲುಗಳು ನಿಗದಿತ ಸಮಯಕ್ಕಿಂತ ವಿಳಂಬವಾಗಿದ್ದರೂ ಸಹ ಸಾಮಾನ್ಯ ಶಾಲೆಗಳಿಗೆ ಹೋಗಬಹುದು ಆದರೆ ಅವರು ಹಾಗೆ ಶಾಲೆಗೆ ಹೋಗುವ ಮೊದಲು ಶಾಲಾಸಿದ್ಧತೆಗೆ ಬೆಂಬಲ ಮತ್ತು ತರಬೇತಿಯ ಅಗತ್ಯವಿರುತ್ತದೆ.

ವಿಶೇಷ ಮಕ್ಕಳು ಮುಖ್ಯವಾಹಿನಿಯ ಶಾಲೆಯಲ್ಲಿ ಓದುವಾಗ, ಅವರ ಮತ್ತು ಉಳಿದವರ ನಡುವಿನ ಸಂವಹನವು ವಿಕಲಚೇತನ ಮಕ್ಕಳ ಪರವಾಗಿ ಹೋರಾಡುವವರನ್ನು ರೂಪಿಸುತ್ತದೆ. ವಿಕಲಚೇತನರಲ್ಲದ ಮಕ್ಕಳು ವಿಕಲಚೇತನ ಮಕ್ಕಳ ಅಗತ್ಯಗಳು ಮತ್ತು ಸಾಮರ್ಥ್ಯಗಳ ಬಗ್ಗೆ ಬಾಲ್ಯದಾರಂಭದಲ್ಲಿಯೇ ಅರಿವನ್ನು ಬೆಳೆಸಿಕೊಳ್ಳುತ್ತಾರೆ, ಇದು ಸಮಾಜದಲ್ಲಿ ವಿಶೇಷಚೇತನರಿಗೆ ಸರಿಯಾದ ಸ್ಥಾನವನ್ನು ಕಲ್ಪಿಸಲು ಮಾತ್ರವಲ್ಲದೆ ಪರಾನುಭೂತಿಯುಳ್ಳ, ನ್ಯಾಯಯುತ ಮತ್ತು ಸಮ ಸಮಾಜವನ್ನು ನಿರ್ಮಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

ಅಂಗವೈಕಲ್ಯ ಹೊಂದಿರುವ ಮಗುವಿನ ಆರೈಕೆಯ ಅತ್ಯಂತ ನಿರ್ಣಾಯಕ ಭಾಗವೆಂದರೆ ಆರಂಭಿಕ ಹಂತದಲ್ಲಿಯೇ ಅದನ್ನು ಗುರುತಿಸುವುದು ಮತ್ತು ಅದನ್ನು ಸರಿಪಡಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗುವುದು. ಆರಂಭಿಕ ವರ್ಷಗಳಲ್ಲಿ ಬೆಳವಣಿಗೆಯ ವಿಳಂಬಗಳನ್ನು ಪೋಷಕರು ಮತ್ತು ಶಿಕ್ಷಕರು ಗಮನಿಸಬೇಕು. ಯಾವುದೇ ಬೆಳವಣಿಗೆಯ ಮೈಲಿಗಲ್ಲು ತಪ್ಪಿಹೋದರೆ ಅಥವಾ ವಿಳಂಬವಾದರೆ ಮೊದಲು, ಮಕ್ಕಳ ವೈದ್ಯರನ್ನು ಸಂಪರ್ಕಿಸಬೇಕು ಮತ್ತು ಅವರ ಸಲಹೆಯ ಮೇರೆಗೆ ಮಗುವನ್ನು ಅದರ ಅಗತ್ಯತೆಗಳನ್ನು ಪೂರೈಸುವ ಸಂಸ್ಥೆ ಮತ್ತು ಶಾಲೆಗೆ ದಾಖಲಿಸಬೇಕು. ಅಂತಹ ಸ್ಥಳದಲ್ಲಿ, ಸಲಹೆಗಾರರು

ಮತ್ತು ಮನಶಾಸ್ತ್ರಜ್ಞರು ಮಗು ಎದುರಿಸುತ್ತಿರುವ ತೊಂದರೆಯನ್ನು ಅರ್ಥಮಾಡಿಕೊಳ್ಳಲು ರೋಗನಿರ್ಣಯ ಪರೀಕ್ಷೆಗಳಂತಹ ವಿಧಾನಗಳನ್ನು ಬಳಸುತ್ತಾರೆ ಮತ್ತು ಅಗತ್ಯವಿರುವ ಮಧ್ಯಪ್ರವೇಶಕ್ಕೆ ಯೋಜನೆಯನ್ನು ರೂಪಿಸುತ್ತಾರೆ. ತಮ್ಮ ಮಗು ವಿಶೇಷಚೇತನ ಎಂಬುದಕ್ಕಾಗಿ ಅದನ್ನು ಅತಿಯಾಗಿ ರಕ್ಷಿಸುವ ಅಥವಾ ಮಗುವಿನ ವಿಕಲತೆಯನ್ನು ನಿರಾಕರಿಸುವ ಮನೋಭಾವವುಳ್ಳ ಆರೈಕೆದಾರರು ಮಗುವಿಗೆ ಸೂಕ್ತವಾದ ಚಿಕಿತ್ಸೆ ಮತ್ತು ಬೆಂಬಲವನ್ನು ಪಡೆಯುವ ಪ್ರಕ್ರಿಯೆಯನ್ನು ತಡೆಯುತ್ತಾರೆ. ಹಾಗಾದಾಗ ವಿಶೇಷ ಚೇತನರು ತಮ್ಮ ಜೀವನದ ಮೇಲೆ ಸ್ವಾತಂತ್ರ್ಯ ಮತ್ತು ನಿಯಂತ್ರಣವನ್ನು ಪಡೆದುಕೊಳ್ಳುವ ಅವಕಾಶದಿಂದ ವಂಚಿತರಾಗುತ್ತಾರೆ.

## ಶಾಲಾ ಸಿದ್ಧತಾ ಕಾರ್ಯಕ್ರಮ

ಆರುಷಿಯಲ್ಲಿನ ವಿಶೇಷ ಶಿಕ್ಷಕರು ನೇಹಾಗೆ ಬ್ರೈಲ್ ಲಿಪಿಯನ್ನು ಕಲಿಸುವತ್ತ ಗಮನಹರಿಸಿದರು, ಅದರೊಂದಿಗೆ ವೃತ್ತಿನಿರತ ಚಿಕಿತ್ಸಕರು (ಆಕ್ಯುಪೇಶನಲ್ ಥೆರಪಿಸ್ಟ್) ಓಡಾಡುವ, ದೈನಂದಿನ ಜೀವನಕ್ಕೆ ಅಗತ್ಯವಿರುವ ಇತರ ಕೌಶಲಗಳನ್ನು ಕಲಿಸಲು ಸಹಾಯ ಮಾಡಿದರು. ಆರುಷಿಯಲ್ಲಿನ ಶಿಕ್ಷಕರು ಬ್ರೈಲ್ ಓದಲು ಸಾಧ್ಯವಾಗುವಂತೆ ಮೌಖಿಕ ಮತ್ತು ಇಂದ್ರಿಯ ಸೂಕ್ಷ್ಮತೆ ಗಳಿಸುವ ವ್ಯಾಯಾಮಗಳನ್ನು ಪ್ರಾರಂಭಿಸಿದರು. ಇದರೊಂದಿಗೆ, ಅಲ್ಲಿನ ಶಿಕ್ಷಕರು ಮುಖ್ಯವಾಹಿನಿಯ ಶಿಕ್ಷಣಕ್ಕಾಗಿ ಆಕೆಯ ಸಾಮರ್ಥ್ಯ ಮತ್ತು ಸಿದ್ಧತೆಯನ್ನು ಮೌಲ್ಯಮಾಪನ ಮಾಡಿದರು. ನೇಹಾಳನ್ನು ಒಂದು ಸಾಮಾನ್ಯ ಶಾಲೆಯಲ್ಲಿ ಯಶಸ್ವಿಯಾಗಿ ತೊಡಗಿಸುವುದನ್ನು ನಿರ್ಧರಿಸಲು ಆರು ತಿಂಗಳು ಹಿಡಿಯಿತಾದರೂ ಆಕೆ ಅದರಲ್ಲಿಯೂ ಸಹ ಯಶಸ್ವಿಯಾಗ-ಬಲ್ಲಳು ಎಂಬುದು ತಿಳಿಯಿತು.

ಕೊಶಿಶ್ ಎಂಬುದು, ಆರುಷಿಯಲ್ಲಿ, ಸಾಮಾನ್ಯ ಶಾಲೆಗಳಲ್ಲಿ ದಾಖಲಾಗದ ಐದು ವರ್ಷದೊಳಗಿನ ವಿಕಲಚೇತನ ಮಕ್ಕಳಿಗಾಗಿ ನಡೆಸಲಾಗುವ ಶಾಲಾ ಸಿದ್ಧತೆಯ ಕಾರ್ಯಕ್ರಮವಾಗಿದೆ. ಇಲ್ಲಿ, ಸೆರೆಬ್ರಲ್ ಪಾಲ್ಸಿ, ಕಲಿಕೆಯ ತೊಂದರೆಗಳು ಮತ್ತು ಇತರ ದೈಹಿಕ ನ್ಯೂನತೆಗಳು ಮತ್ತು ನಿಧಾನಗತಿಯ ಬೆಳವಣಿಗೆಗಳನ್ನು ಹೊಂದಿರುವ ಮಕ್ಕಳು, ಮೂಲಭೂತ ಅಗತ್ಯ ಶಾಲಾ ಸಿದ್ಧತಾ ಕೌಶಲಗಳೊಂದಿಗೆ ಸಿದ್ಧಗೊಳ್ಳುತ್ತಾರೆ, ಆದ್ದರಿಂದ ಅವರನ್ನು ಶೀಘ್ರವಾಗಿ ಸಾಮಾನ್ಯ ಶಾಲೆಗಳಿಗೆ ಸೇರಿಸಬಹುದು. ಅವರ ವಿಕಲಚೇತನ ಸ್ವರೂಪ ಮತ್ತು ಕಾರಣವನ್ನು ಮೌಲ್ಯಮಾಪನ ಮಾಡಿದ ನಂತರ, ಅವರ ಚಿಕಿತ್ಸೆಗಾಗಿ ವಿವರವಾದ ಯೋಜನೆಯನ್ನು ತಯಾರಿಸಲಾಗುತ್ತದೆ. ಬೌದ್ಧಿಕ ಅಸಾಮರ್ಥ್ಯ ಹೊಂದಿರುವ ಮಕ್ಕಳು ಸಂಯೋಜನೆ, ಕಣ್ಣಲ್ಲಿ ಕಣ್ಣಿಟ್ಟು ನೋಡುವ, ಗಮನ ನೀಡುವ ಅವಧಿಯನ್ನು ಸುಧಾರಿಸಲು ಆಕ್ಯುಪೇಶನಲ್ ಥೆರಪಿಯನ್ನು ಪಡೆಯುತ್ತಾರೆ ಅದರೊಂದಿಗೆ ದೀರ್ಘಾವಧಿಯವರೆಗೆ ಕುಳಿತುಕೊಳ್ಳುವ ಮತ್ತು ಕೈಯಲ್ಲಿ ಮಾಡುವ ಕೆಲಸಗಳತ್ತ ಗಮನವನ್ನು ಕೇಂದ್ರೀಕರಿಸಲು, ತರಬೇತಿ ಪಡೆಯುವುದರಿಂದ ಅವರು ಸಾಮಾನ್ಯ ತರಗತಿಗಳಲ್ಲಿ ಹೊಂದಿಕೊಳ್ಳಲು ಸುಲಭವಾಗುತ್ತದೆ.

ಮಾತನಾಡುವ ತೊಂದರೆ ಹೊಂದಿರುವ ಮಕ್ಕಳು ವಾಕ್ ಚಿಕಿತ್ಸೆಯನ್ನು ಪಡೆಯುತ್ತಾರೆ. ಮಗುವಿಗೆ ಶ್ರವಣ ದೋಷವಿದೆಯೇ ಎಂದೂ ಚಿಕಿತ್ಸಕರು ನಿರ್ಧರಿಸುತ್ತಾರೆ. ಹಾಗಿದ್ದಲ್ಲಿ, ಅವರು ಶ್ರವಣ ಸಾಧನದ ಅಗತ್ಯ ಮತ್ತು ಪರಿಣಾಮಕಾರಿತ್ವವನ್ನು ನಿರ್ಧರಿಸುತ್ತಾರೆ. ಮಗುವು ಸಹಾಯವಿಲ್ಲದೆ ಕೇಳಬಹುದು ಆದರೆ ಇನ್ನೂ ಮಾತನಾಡುತ್ತಿಲ್ಲ ಎಂಬುದನ್ನು ಕಂಡುಕೊಂಡರೆ, ಈ ಮಕ್ಕಳಿಗೆ ಸಹಾಯ ಮಾಡಲು ಸ್ಪೀಚ್ ಥೆರಪಿಸ್ಟ್‌ಗಳು ಪರ್ಯಾಯ ವಿಧಾನಗಳನ್ನು ಬಳಸುತ್ತಾರೆ. ಈ ಚಿಕಿತ್ಸೆಗಳು ದೀರ್ಘಾವಧಿಯದ್ದಾಗಿರುತ್ತವೆ ಮತ್ತು ಮಗುವನ್ನು ಸಾಮಾನ್ಯ ಶಾಲೆಗೆ ಸಂಯೋಜಿತಗೊಂಡ ನಂತರವೂ ಮುಂದುವರಿಯುತ್ತವೆ.

ಆಟದ (ಪ್ಲೇ-ವೇ) ವಿಧಾನವನ್ನು ಬಳಸಿಕೊಂಡು, ವಿಶೇಷ ಶಿಕ್ಷಕರು ಮಕ್ಕಳಿಗೆ ಶ್ರಾವ್ಯ, ದೃಶ್ಯ ಮತ್ತು ಸ್ಪರ್ಶ ಪ್ರಚೋದಕಗಳನ್ನು ಪರಿಚಯಿಸುತ್ತಾರೆ. ಕಲಿಯಲು ಮಗುವಿನ ಸಿದ್ಧತೆ, ಅದರ ಭಾವನಾತ್ಮಕ ಮತ್ತು ದೈಹಿಕ ಸಾಮರ್ಥ್ಯಗಳಂತಹ ಅಂಶಗಳಿಂದ ಮಾರ್ಗದರ್ಶಿಸಲ್ಪಟ್ಟ ಶಿಕ್ಷಕರು, ಮಕ್ಕಳು 'ವಿಶೇಷ' ಎಂಬ ಕಿರಿದಾದ ಮಿತಿಗಳನ್ನು ಮೀರಿ ಜಗತ್ತಿನಲ್ಲಿ ಬೆಳವಣಿಗೆ ಹೊಂದಲು ಅಗತ್ಯವಿರುವ ಕೌಶಲ ಮತ್ತು ಸಾಧನಗಳೊಂದಿಗೆ ಮಕ್ಕಳನ್ನು ಸಜ್ಜುಗೊಳಿಸಲು ಅನೇಕ ತಂತ್ರಗಳನ್ನು ಬಳಸುತ್ತಾರೆ ಮತ್ತು ಅವರು ಸ್ವತಂತ್ರವಾಗಿ ಬದುಕಲು ಮತ್ತು ತಮ್ಮ ಕೆಲಸಗಳನ್ನು ಮಾಡಿಕೊಳ್ಳಲು ತರಬೇತಿ ನೀಡುತ್ತಾರೆ.

ಬ್ರೈಲ್, ಐಂದ್ರಿಯಕ ಮತ್ತು ಚಲನಾ ವ್ಯಾಯಾಮಗಳು ನೇಹಾಳ ತರಬೇತಿಯ ಕೇಂದ್ರಬಿಂದುವಾಗಿದ್ದರೆ, ಪ್ರತಿ ಮಗುವಿಗೆ ಆರುಷಿಯಲ್ಲಿ ನೀಡಲಾಗುವ ತಂತ್ರ ಮತ್ತು ಚಿಕಿತ್ಸೆಗಳು ಅವರ ಅಗತ್ಯಗಳಿಗೆ ಅನುಗುಣವಾಗಿ ಭಿನ್ನಭಿನ್ನವಾಗಿರುತ್ತವೆ. ಉದಾಹರಣೆಗೆ, ಡೌನ್ ಸಿಂಡ್ರೋಮ್ ಇರುವ ಮಕ್ಕಳು ಕೇವಲ ದೈಹಿಕ ಮಿತಿಗಳನ್ನು ಅನುಭವಿಸುವುದಿಲ್ಲ, ಬೆಳವಣಿಗೆ ಮತ್ತು ಸಾಮಾಜಿಕ ಸವಾಲುಗಳನ್ನು ಸಹ ಅನುಭವಿಸುತ್ತಾರೆ ಮತ್ತು ಸಾಮಾನ್ಯವಾಗಿ ಸ್ಪಷ್ಟವಾಗಿ ಮಾತನಾಡಲು ಕಷ್ಟಪಡಬಹುದು. ಆಗ ಅವರ ಕಲಿಕೆಗಳು ವಾಕ್ ಚಿಕಿತ್ಸೆ, ಬೇರೆಯವರೊಂದಿಗೆ ಕಣ್ಣಲ್ಲಿ ಕಣ್ಣಿಟ್ಟು ಸಂಪರ್ಕ ಸಾಧಿಸುವುದು ಮತ್ತು ಶೈಕ್ಷಣಿಕ ಜ್ಞಾನವನ್ನು ಗಳಿಸುವುದರೊಂದಿಗೆ ಸಾಮಾಜಿಕ ಕೌಶಲಗಳನ್ನು ಚುರುಕುಗೊಳಿಸುವುದನ್ನು ಒಳಗೊಂಡಿರುತ್ತದೆ. ಅವರ ಸಾಮಾಜೀಕರಣ ಕೌಶಲಗಳು ಕೋಶಿಶ್‌ನಲ್ಲಿನ ಬೋಧಕರು ಗಮನಹರಿಸುವ ಮತ್ತೊಂದು ಬೆಳವಣಿಗೆಯ ಕ್ಷೇತ್ರವಾಗಿದೆ. ಇಂಥ ತರಬೇತಿಯಿಲ್ಲದೆ, ಈ ಮಕ್ಕಳು ಮಿಶ್ರ (ವಿಶೇಷಚೇತನ ಮತ್ತು ಸಾಮಾನ್ಯ ಮಕ್ಕಳ) ತರಗತಿಯಲ್ಲಿ ಚೆನ್ನಾಗಿ ಹೊಂದಿಕೊಳ್ಳಲು ಸಾಧ್ಯವಿಲ್ಲ.

## ಆರೈಕೆದಾರರೊಂದಿಗೆ ಸಮಾಲೋಚನೆ

ನೇಹಾಳನ್ನು ಸಾಮಾನ್ಯ ಶಾಲೆಗೆ ಕಳುಹಿಸುವ ಬಗ್ಗೆ ಆತಂಕ ಹೊಂದಿದ್ದ ನೇಹಾಳ ಪೋಷಕರಿಗೆ ಈ ಬಗ್ಗೆ ಸಲಹೆ ನೀಡಲಾಯಿತು. ದೃಷ್ಟಿಮಾಂದ್ಯರಿಗಾಗಿ ಇರುವ ಶಾಲೆಗಳು ಉತ್ತಮ ಉದ್ದೇಶ ಹೊಂದಿವೆ ಮತ್ತು ಅವರಿಗೆ ಸಾಕಷ್ಟು ಬೆಂಬಲವನ್ನು ನೀಡುತ್ತವೆ, ಆದರೆ ನೇಹಾಳ ಕಲಿಕೆ ಮತ್ತು ಅನುಭವಗಳನ್ನು ಅವು ಸೀಮಿತಗೊಳಿಸುತ್ತವೆ ಎಂದು ಸಲಹೆಗಾರರು ಅವರಿಗೆ ವಿವರಿಸಿದರು. ಅಂಗವಿಕಲರಲ್ಲದ ಮಕ್ಕಳ ಸಹವಾಸ ಮತ್ತು ನಡವಳಿಕೆಯ ಪ್ರಭಾವವು ನೇಹಾಳ ಬೆಳವಣಿಗೆಯಲ್ಲಿ ವೇಗವರ್ಧಕವಾಗಿರುತ್ತದೆ. ಅಂಗ-ವೈಕಲ್ಯತೆಯನ್ನು ಮೀರಿ ಎಲ್ಲ ಅವಕಾಶಗಳನ್ನು ಹೊಂದುವುದು ಮಗುವಿನ ಹಕ್ಕು, ತಮ್ಮ ಸಾಮರ್ಥ್ಯವನ್ನು ಒರೆಗೆ ಹಚ್ಚುವುದನ್ನು ಮಕ್ಕಳು ಆನಂದಿಸುತ್ತಾರೆ. ಆರುಷಿಯಲ್ಲಿ, ಮಕ್ಕಳು ಶಾಲೆಯಂತೆಯೇ ಮನೆಯಲ್ಲಿಯೂ ಅದೇ ಸಬಲೀಕರಣವನ್ನು ಅನುಭವಿಸುತ್ತಾರೆ ಎಂದು ಖಚಿತಪಡಿಸಿಕೊಳ್ಳಲು ಪೋಷಕರಿಗೂ ಸಮಾಲೋಚನೆ ನೀಡಲಾಗುತ್ತದೆ.

## ಶಾಲಾ ಪ್ರವೇಶದ ನಂತರ

ಬ್ರೈಲ್ ಮತ್ತು ಆಕ್ಯುಪೇಷನಲ್ ಥೆರಪಿಯಲ್ಲಿ ಕೌಶಲ ತರಬೇತಿಯ ಜೊತೆಗೆ, ನೇಹಾ ಶಾಲಾಪೂರ್ವ ಪಠ್ಯಕ್ರಮದ ತರಬೇತಿ ಪಡೆದಿದ್ದಳು. ಆದ್ದರಿಂದ ಆಕೆ ಈ ಆಯಾಮದಲ್ಲೂ ತನ್ನ ಓರಗೆಯವರಿಗೆ ಸರಿಸಮಾನವಾಗಿ ಕಲಿಕಾ ವೇಗವನ್ನು ಹೊಂದಿದ್ದಳು. ನೇಹಾ, ಆಕೆಯ ಪೋಷಕರು ಮತ್ತು ಅವಳ ಶಿಕ್ಷಕರು ಮಾಡಿದ ಎಲ್ಲಾ ಕಠಿಣ ಪರಿಶ್ರಮದ ಫಲವಾಗಿ, 2021 ರಲ್ಲಿ ಸರ್ಕಾರಿ ಶಾಲೆಗೆ ನೇರವಾಗಿ ಒಂದನೇ, ಆರು ವರ್ಷದ ಮಗುವಿಗೆ ಸೂಕ್ತವಾದ ತರಗತಿಗೆ ಸೇರುವಂತಾಯಿತು.

ನೇಹಾ ಶಾಲೆಯ ಅವಧಿ ಮುಗಿದ ನಂತರ ಕೂಡ ಆರುಷಿಗೆ ಬರುವುದನ್ನು ಮುಂದುವರೆಸಿದ್ದಾಳೆ, ಅಲ್ಲಿ ಆಕೆ ತನ್ನ ಶಿಕ್ಷಣಕ್ಕೆ ಅಗತ್ಯವಿರುವ ಹೆಚ್ಚುವರಿ ಬೆಂಬಲವನ್ನು ಪಡೆಯುತ್ತಾಳೆ. ಇದರೊಂದಿಗೆ ಅಲ್ಲಿ ಆಕೆಗೆ ಶಾಲಾ ಜೀವನದ ಇತರ ಪಠ್ಯೇತರ ಚಟುವಟಿಕೆಗೆಗೂ ಸಹಾಯ ದೊರಕುತ್ತದೆ. ನಾಟಕ, ಸಂಗೀತ, ನೃತ್ಯ, ಯೋಗ ಮತ್ತು ಕರಕುಶಲ ಕೌಶಲಗಳು ವಿಕಲಚೇತನ ಮಕ್ಕಳ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ ಮತ್ತು ಅವರ ಸಮಗ್ರ ಬೆಳವಣಿಗೆಗೆ ಪೂರಕ ವಾತಾವರಣವನ್ನು ಒದಗಿಸಲು ಆರುಷಿ ಈ ಎಲ್ಲ ವಿಧಾನಗಳನ್ನು ಬಳಸಿಕೊಳ್ಳುತ್ತದೆ. ವ್ಯಕ್ತಿತ್ವ ವಿಕಸನದಲ್ಲಿ ರಂಗಭೂಮಿ ನಿರ್ಣಾಯಕ ಪಾತ್ರ ವಹಿಸುತ್ತದೆ. ಕಾಗದ ಕತ್ತರಿಸುವುದು, ಮಡಿಚುವುದು ಮತ್ತು ಅಂಟಿಸುವುದು ವಿಶೇಷವಾಗಿ ಆಟಿಸಂ ಸ್ಪೆಕ್ಟ್ರಮ್‌ನಲ್ಲಿರುವ ಮಕ್ಕಳಿಗೆ ಕೈ-ಕಣ್ಣಿನ ಸಂಯೋಜನೆ ಮತ್ತು ಸೂಕ್ಷ್ಮ ಚಲನಾ ಕೌಶಲಗಳನ್ನು ಸುಧಾರಿಸುತ್ತದೆ.

## ಶಿಕ್ಷಕರೊಂದಿಗೆ ಕೆಲಸ

ಅಸಾಮರ್ಥ್ಯವುಳ್ಳ ಮಗುವಿನ ಈ ಸಂಪೂರ್ಣ ಪ್ರಯಾಣದಲ್ಲಿ ವಿಕಲಾಂಗತೆ ಇಲ್ಲದೆ ತಮ್ಮ ಓರಗೆಯವರೊಂದಿಗೆ ಓದುವ ಮತ್ತು ಬೆಳೆಯುವಲ್ಲಿ ಶಾಲೆಯ ಶಿಕ್ಷಕರು ಪ್ರಮುಖ ಪಾತ್ರವನ್ನು ವಹಿಸುತ್ತಾರೆ ಮತ್ತು ಸಾಮಾನ್ಯ ಶಾಲಾ ವ್ಯವಸ್ಥೆಯಲ್ಲಿ ಈ ಮಕ್ಕಳ ಯಶಸ್ಸು ಶಿಕ್ಷಕರ ಮೇಲೆ ಅವಲಂಬಿತವಾಗಿರುತ್ತದೆ. ಆದ್ದರಿಂದ, ಈ ಶಿಕ್ಷಕರು ವಿಕಲಚೇತನ ಮಕ್ಕಳು ಸಾಮಾನ್ಯ ಶಾಲೆಗಳಲ್ಲಿ ಅಧ್ಯಯನ ಮಾಡುವ ಅಗತ್ಯವನ್ನು ಅರ್ಥಮಾಡಿಕೊಳ್ಳುತ್ತಾರೆ ಮತ್ತು ಅವರು ಸಾಧ್ಯವಿರುವ ಎಲ್ಲ ರೀತಿಯಲ್ಲಿ ಇದನ್ನು ಬೆಂಬಲಿಸುತ್ತಾರೆ. ಅಲ್ಲದೆ, ವಿಕಲಚೇತನ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ನಿರಾಕರಿಸುವಲ್ಲಿ ಮುಖ್ಯವಾಹಿನಿಯ ಶಾಲೆಗಳು ಉಲ್ಲೇಖಿಸಿದ ಮುಖ್ಯ ಕಾರಣವೆಂದರೆ ತರಬೇತಿ ಪಡೆದ ಸಿಬ್ಬಂದಿಯ ಕೊರತೆ. ಈ ಕೊರತೆಯನ್ನು ನಿವಾರಿಸಲು, ಆರುಷಿಯು ಶಾಲಾ ಶಿಕ್ಷಕರು ಮತ್ತು ಆಡಳಿತಗಾರರಿಗೆ ತರಬೇತಿ ಮತ್ತು ಜಾಗೃತಿ ಕಾರ್ಯಕ್ರಮಗಳನ್ನು ಆಯೋಜಿಸುತ್ತದೆ, ಅದು ಅಂಗವೈಕಲ್ಯತೆ ಬಗ್ಗೆ ಇರುವ ಮಿಥ್ಯೆಗಳು ಮತ್ತು ತಪ್ಪು ಕಲ್ಪನೆಗಳನ್ನು ಹೋಗಲಾಡಿಸುತ್ತದೆ ಹಾಗೂ ಮುಖ್ಯವಾಹಿನಿಯ ಶಾಲೆಗಳಲ್ಲಿ ವಿಕಲಾಂಗ ಮಕ್ಕಳ ಕಲಿಕೆಯ ಮಹತ್ವವನ್ನು ಒತ್ತಿ ಹೇಳುತ್ತದೆ.

ಅವರು ಪರಿಚಯಾತ್ಮಕ ಕಾರ್ಯಾಗಾರ (ಓರಿಯೆಂಟೇಶನ್ ವರ್ಕ್ ಶಾಪ್)ಗಳನ್ನು ನಡೆಸುತ್ತಾರೆ, ಇದರಲ್ಲಿ ಶಿಕ್ಷಕರು ತಮ್ಮ ತರಗತಿಯ ಅನುಭವಗಳನ್ನು ತಜ್ಞರೊಂದಿಗೆ ಹಂಚಿಕೊಳ್ಳುತ್ತಾರೆ, ತಜ್ಞರು ವಿಶೇಷ ಚೇತನ ಮಕ್ಕಳ ಅಗತ್ಯಗಳನ್ನು ಅರ್ಥ ಮಾಡಿಕೊಳ್ಳಲು ಶಿಕ್ಷಕರಿಗೆ ಸಹಾಯ ಮಾಡುತ್ತಾರೆ. ಶಿಕ್ಷಕರಿಗೆ ನವೀಕೃತ ಬೋಧನಾ ಸಾಮಗ್ರಿಗಳು, ಬೋಧನಾ ವಿಧಾನ ಮತ್ತು ವಿಕಲಚೇತನ ಮಕ್ಕಳಿರುವ ತರಗತಿಗಳಲ್ಲಿ ಅವರು ಬಳಸಿಕೊಳ್ಳಬಹುದಾದ ತಂತ್ರಗಳನ್ನು ಪರಿಚಯ ಮಾಡಿಸಲಾಗುತ್ತದೆ. ಇದರೊಂದಿಗೆ ಮಕ್ಕಳು ಅನುಭವಿ-ಸುತ್ತಿರುವ ಕಲಿಕೆಯ ಹಾಗೂ ಇತರ ತೊಂದರೆಗಳನ್ನು ಗುರುತಿಸುವ ಮತ್ತು ನಿರ್ಣಯಿಸುವ ವಿಧಾನಗಳನ್ನು ಸಹ ಶಿಕ್ಷಕರು ಕಲಿಯುತ್ತಾರೆ. ಹಲವು ವರ್ಷಗಳಲ್ಲಿ, ಮಧ್ಯಪ್ರದೇಶ ಮತ್ತು ಛತ್ತೀಸ್‌ಗಢದಲ್ಲಿ ಮೂರು ಲಕ್ಷಕ್ಕೂ ಹೆಚ್ಚು ಸರ್ಕಾರಿ ಶಾಲಾ ಶಿಕ್ಷಕರು ಈ ಪರಿಚಯಾತ್ಮಕ ಕಾರ್ಯಾಗಾರ ಮತ್ತು ತರಬೇತಿಗಳಿಗೆ ಹಾಜರಾಗಿದ್ದಾರೆ.

ಶಾಲೆಗಳಲ್ಲಿ ಅವರ ಕೆಲಸವನ್ನು ಬೆಂಬಲಿಸಲು, ಆರುಷಿಯು ಶಿಕ್ಷಕರಿಗೆ ಬೋಧನಾ ಸಾಧನಗಳನ್ನು ಒದಗಿಸುತ್ತದೆ, ಉದಾಹರಣೆಗೆ ದೇವನಾಗರಿ ಮತ್ತು ಇಂಗ್ಲಿಷ್‌ನಲ್ಲಿನ ವರ್ಣಮಾಲೆಗಳ ಚಾರ್ಟ್‌ಗಳ ಜೊತೆಗೆ ಬ್ರೈಲ್ ಮತ್ತು ಸಂಕೇತ ಭಾಷೆಯಲ್ಲಿ ಅದಕ್ಕೆ ಅನುಗುಣವಾದ ಚಿಹ್ನೆಗಳು. ದೃಷ್ಟಿ ದೋಷಗಳನ್ನು ಹೊಂದಿರುವ ಮಕ್ಕಳಿಗೆ ಬ್ರೈಲ್ ಮತ್ತು

ಗಣಿತವನ್ನು ಕಲಿಸುವ ಮತ್ತು ಶ್ರವಣ ಸಮಸ್ಯೆ ಇರುವವರಿಗೆ ಸಂಕೇತ ಭಾಷೆಯನ್ನು ಕಲಿಸುವ ಕುರಿತು ಇದು ವೀಡಿಯೊ ಟ್ಯುಟೋರಿಯಲ್‌ಗಳನ್ನು ಸಹ ಸೃಷ್ಟಿಸಿದೆ.

## ವಿಶೇಷಚೇತನ ಮಕ್ಕಳಿರುವ ತರಗತಿಗಳ ಶಿಕ್ಷಕರಿಗೆ ಸಾಮಾನ್ಯ ಸಲಹೆಗಳು

- ಸ್ನೇಹಿತರ ಗುಂಪಿನಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡುವ ವ್ಯವಸ್ಥೆಯನ್ನು ಪ್ರಾರಂಭಿಸುವುದು ಮತ್ತು ಅವರಿಗೆ ಸಹಾಯ ಮಾಡಲು ಸಿದ್ಧರಿರುವ ಮತ್ತು ಸಮರ್ಥರಾಗಿರುವ ಇತರ ವಿದ್ಯಾರ್ಥಿಗಳೊಂದಿಗೆ ಅವರನ್ನು ಕೂರಿಸುವುದು
- ವಿಕಲಚೇತನರಿಗೆ ಸಹಾಯ ಮಾಡಲು, ಅವರಿಗೆ ಬದಲಾಗಿ ಪರೀಕ್ಷೆ ಬರೆಯಲು, ಟಿಪ್ಪಣಿ ಬರೆದುಕೊಡಲು ಮತ್ತು ಓದುಗರಾಗಲು ಓರಗೆಯವರನ್ನು ಸ್ವಯಂ ಸೇವಕರಾಗುವಂತೆ ಪ್ರೋತ್ಸಾಹಿಸುವುದು
- ಪಠ್ಯಗಳು, ಪರೀಕ್ಷೆಗಳು ಮತ್ತು ವಿವಿಧ ಕಾರ್ಯಯೋಜನೆಗಳಲ್ಲಿ/ ಅಸೈನ್ಮೆಂಟ್‌ಗಳಲ್ಲಿ ಅವರಿಗೆ ಹೆಚ್ಚಿನ ಸಮಯಾವಕಾಶವನ್ನು ನೀಡುವುದು.
- ಸೂಚನೆಗಳನ್ನು ಮತ್ತು ಪ್ರಶ್ನೆಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲಾಗಿದೆ ಎಂದು ಖಾತ್ರಿಪಡಿಸಿಕೊಳ್ಳಲು ಅವನ್ನು ಪುನರಾವರ್ತಿಸುವುದು.




ಚಿತ್ರ 1. ಬ್ರೈಲ್ ಲಿಪಿಯನ್ನು ಅರ್ಥಮಾಡಿಕೊಳ್ಳುವುದು, ಒಂದು ಬೋಧನಾ ಸಾಧನ

ದೃಷ್ಟಿ ವಿಕಲತೆ ಹೊಂದಿರುವ ಮಗು ತರಗತಿಯಲ್ಲಿದ್ದಾಗ:

- ಸ್ಪರ್ಶ(ಮುಟ್ಟಿ ನೋಡುವ) ಬೋಧನೆಯನ್ನು ಹೆಚ್ಚಿಸುವುದು
- ಸಾಧ್ಯವಿರುವಲ್ಲಿ ಚಿತ್ರಗಳ ಬದಲಿಗೆ 3D ಮಾದರಿಗಳನ್ನು ಬಳಸುವುದು
- ಮಾದರಿಗಳು ಲಭ್ಯವಿಲ್ಲದಿದ್ದರೆ ಚಿತ್ರಗಳನ್ನು ವಿವರಿಸುವುದು
- ಸನ್ನೆಗಳು ಅಥವಾ ದೈಹಿಕ ಅಭಿವ್ಯಕ್ತಿಗಳ ಬದಲಿಗೆ ಧ್ವನಿ ಸೂಚನೆಗಳು ಮತ್ತು ಸುಳಿವುಗಳನ್ನು ಬಳಸುವುದು
- ದೃಷ್ಟಿ ವಿಕಲತೆ ಹೊಂದಿರುವ ವಿದ್ಯಾರ್ಥಿಗಳನ್ನು ತರಗತಿಯ ಮುಂಭಾಗದಲ್ಲಿ ಕೂರಿಸುವುದು

ಶ್ರವಣದೋಷವುಳ್ಳ ಮಗು ತರಗತಿಯಲ್ಲಿದ್ದಾಗ:

- ಹೆಚ್ಚು ದೃಶ್ಯ ಸಾಧನಗಳ ಮೂಲಕ ಬೋಧಿಸುವುದು
- ಯಾವುದೇ ಸೂಚನೆ ನೀಡಿದರೂ ಅದರ ಲಿಖಿತ ಪ್ರತಿಗಳು ಮತ್ತು ದೃಶ್ಯ ಸಾಧನಗಳನ್ನು ಒದಗಿಸುವುದು
- ತರಗತಿಯಲ್ಲಿ ಬಳಸಲಾಗುವ ವೀಡಿಯೊಗಳಲ್ಲಿ ಉಪ ಶೀರ್ಷಿಕೆಗಳನ್ನು ಬಳಸುವುದು
- ತರಗತಿಯ ಮುಂಭಾಗದಲ್ಲಿ ಅವರನ್ನು ಕೂರಿಸುವುದು. ಇದರಿಂದ ಅವರು ಸುಲಭವಾಗಿ ತುಟಿಯ ಚಲನೆಯನ್ನು ಅನುಸರಿಸಿ ಅದನ್ನು ಅರ್ಥಮಾಡಿಕೊಳ್ಳುವುದರ ಮೂಲಕ ಓದಬಹುದು




**ಚಿತ್ರ 2. ವಿಶೇಷ ಚೇತನ ಮಕ್ಕಳಿರುವ ತರಗತಿಯ ಶಿಕ್ಷಕರಿಗೆ ಕೆಲವು ಸರಳ ಸೂಚನೆಗಳು**

## ಸಾರಾಂಶ

ಮುಖ್ಯವಾಹಿನಿಯ ಶಿಕ್ಷಣದಲ್ಲಿ ಸೇರ್ಪಡೆಯಾಗಲು ಆರುಷಿ ೫೦೦ಕ್ಕೂ ಹೆಚ್ಚು ಮಕ್ಕಳಿಗೆ ಬೆಂಬಲ ನೀಡಿದೆ. ಈ ಪ್ರತಿಯೊಂದು ಯಶಸ್ಸಿನ ಕಥೆಯ ಹಿಂದೆ ತಮ್ಮ ತರಗತಿಯಲ್ಲಿನ ಮಗುವೊಂದು ಯಶಸ್ವಿಯಾಗಲು ಸಹಾಯ ಮಾಡುವುದಕ್ಕಾಗಿ ಹೆಚ್ಚಿನ ಜವಾಬ್ದಾರಿಯನ್ನು ಹೊರಲು ಸಿದ್ಧರಿರುವ ಶಾಲಾ ಶಿಕ್ಷಕರಿದ್ದಾರೆ. ಅಗತ್ಯವಿರುವ ವಿಶೇಷ ಕ್ರಮಗಳ ಬಗ್ಗೆ ಅರಿವು ಹೊಂದಿರುವ ಶಿಕ್ಷಕರು, ತಮ್ಮ ಸಾಮಾನ್ಯ ಕೆಲಸಕ್ಕಿಂತ ಭಿನ್ನವಾಗಿದ್ದರೂ ವಿದ್ಯಾರ್ಥಿಗಳ ಪ್ರಯಾಣವನ್ನು ಬೆಂಬಲಿಸಿದರು. ಅಂತಹ ಪ್ರತಿಯೊಬ್ಬ ಶಿಕ್ಷಕರು ವಿಶೇಷಚೇತನ ಮಕ್ಕಳಿಗೆ ಸಾಮಾನ್ಯ ಶಾಲೆಗಳಲ್ಲಿ ಸಮೃದ್ಧ ಜೀವನವನ್ನು ನಡೆಸಲು ಮತ್ತು ಸಮಾಜದಲ್ಲಿ ಅವರಿಗೆ ಸೂಕ್ತವಾದ ಸ್ಥಾನವನ್ನು ಕಂಡುಕೊಳ್ಳಲು ಅವಕಾಶ ಒದಗಿಸುವಲ್ಲಿ ವೇಗವರ್ಧಕರಾಗಿ ಕಾರ್ಯ-ನಿರ್ವಹಿಸಿದ್ದಾರೆ.


* ಮಕ್ಕಳ ಗುರುತನ್ನು ರಕ್ಷಿಸಲು ಹೆಸರುಗಳನ್ನು ಬದಲಾಯಿಸಲಾಗಿದೆ.




**ಪಲ್ಲವಿ ದತ್ತಾ** ಇವರು ಒಬ್ಬ ನಿರ್ದಿಷ್ಟ ವಿಷಯಾಧಾರಿತ ಲೇಖಕರು, ಭೋಪಾಲ್‌ನಲ್ಲಿ ನೆಲೆಸಿದ್ದಾರೆ. ತರಬೇತಿ ಪಡೆದ ಸಾಫ್ಟ್‌ವೇರ್ ಇಂಜಿನಿಯರ್ ಆಗಿರುವ ಇವರು ಪ್ರಸ್ತುತ ತಂತ್ರಜ್ಞಾನ ಮತ್ತು ಕಥೆ ಹೇಳುವ ವಿಭಾಗದಲ್ಲಿ ಬರೆಯುತ್ತಾರೆ. ಇವರು ಆರುಷಿಯಲ್ಲಿ ಸ್ವಯಂಸೇವಕರಾಗಿದ್ದಾರೆ ಮತ್ತು ಅಲ್ಲಿನ ಅದ್ಭುತ ಕಥೆಗಳಿಗೆ ಧ್ವನಿಯಾಗುವ ಆಶಯ ಹೊಂದಿದ್ದಾರೆ. ಅವರನ್ನು pallaveedutta@gmail.com ನಲ್ಲಿ ಸಂಪರ್ಕಿಸಬಹುದು.

ಅನುವಾದ: **ಶ್ರೀನಿಧಿ ಅಡಿಗ** | ಪರಿಶೀಲನೆ: **ನಾಗಮಣಿ ಎಸ್.ಎನ್.**


ಉದಾಹರಣೆಗೆ, ಒಂದು ಮಗುವು ಭಾಷೆ ಹಾಗೂ ಗಣಿತಕ್ಕೆ ಸಂಬಂಧಿಸಿ ಶ್ರೇಣಿಗೆ ತಕ್ಕ, ಸಾಮರ್ಥ್ಯಗಳನ್ನು ಹೊಂದಿದ್ದರೂ (Grade - appropriate competencies) ಅಭಿವ್ಯಕ್ತಿ ಸಾಮರ್ಥ್ಯಗಳ ಮೂಲಕ ಆ ಮಗುವಿನ ದುರ್ಬಲ ಸಮಾಜೋ – ಭಾವನಾತ್ಮಕ ಸ್ಥಿತಿಯು ಪ್ರತಿಫಲಿಸುತ್ತದೆ. ಇವುಗಳಲ್ಲಿ ತನ್ನನ್ನು ಮುಕ್ತವಾಗಿ ವ್ಯಕ್ತಪಡಿಸುವ ಸಾಮರ್ಥ್ಯದ ಕೊರತೆ, ಸ್ವಯಂ ಅರಿವಿನ ಕೊರತೆ, ಒಂದು ತಂಡವಾಗಿ ಕೆಲಸ ಮಾಡಬಲ್ಲ ಸಾಮರ್ಥ್ಯ, ಸಹವರ್ತಿಗಳ ಕಷ್ಟಗಳ ಬಗ್ಗೆ ಸೂಕ್ಷ್ಮ ಮನೋ-ಭಾವವನ್ನು ಹೊಂದಿರುವ ಮತ್ತು ಸುತ್ತಮುತ್ತಲಿನ ಜನರ ಇಷ್ಟಗಳು ಮತ್ತು ಇಷ್ಟವಿಲ್ಲದಿರುವ ಸಂಗತಿಗಳನ್ನು ಅರಿತು-ಕೊಂಡು ಒಬ್ಬರ ನಡವಳಿಕೆಯೊಂದಿಗೆ ಹೊಂದಿಕೊಳ್ಳುವುದು ಸಹ ಸೇರಿದೆ.

# ಸಾಮಾಜಿಕ ನ್ಯಾಯ- ಕಲಿಕೆಯ ತಿರುಳು

ರಾಗಿಣಿ ಲಲಿತ್

ಸಾಮಾನ್ಯವಾಗಿ ತರಗತಿಯಲ್ಲಿ ವಿದ್ಯಾರ್ಥಿಗಳಿಗೆ ಬರುವ ಭಾವನೆಗಳನ್ನು, ಅವು ಬೋಧನೆ ಮತ್ತು ಕಲಿಕೆಗೆ ಸಂಬಂಧಿಸಿದ ಚಟುವಟಿಕೆಯ ಕಡೆಗೆ ಗಮನ ಕೊಡುವಲ್ಲಿ ಅಡ್ಡಿ ಉಂಟುಮಾಡುತ್ತವೆ, ಆದ್ದರಿಂದ ಅವುಗಳನ್ನು ಬದಿಗೊತ್ತಬೇಕು ಅಥವಾ ಪರಿಣಾಮಕಾರಿಯಾಗಿ ನಿಯಂತ್ರಿಸಬೇಕು ಎನ್ನಲಾಗುತ್ತದೆ. ವಸ್ತುನಿಷ್ಠತೆ ಮತ್ತು ತರ್ಕದ ಅಬ್ಬರದಲ್ಲಿ, ಭಾವನೆಗಳು ಎರಡನೇ ಸ್ಥಾನವನ್ನು ಪಡೆದುಕೊಳ್ಳುತ್ತವೆ; ಮತ್ತು ಸಾಮಾನ್ಯವಾಗಿ ಯಾವುದೇ ವಿಚಾರದ ಕುರಿತು ಇವು ನೀಡುವ ತೀರ್ಪನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ. ಭಾವನೆಗಳ ಅಪಮೌಲ್ಯೀಕರಣ (devaluing of emotions) ಎಂದರೆ ಕೆಲವು ರೀತಿಯ ಗುಣಲಕ್ಷಣಗಳನ್ನು – ಉದಾಹರಣೆಗೆ, ಅಧಿಕಾರಕ್ಕೆ ವಿಧೇಯತೆ ತೋರಿಸುವಂತಹ ಗುಣಗಳು ಅಥವಾ 'ಉತ್ತಮ ನಡತೆ' ಎಂದರೆ ತರಗತಿಯಲ್ಲಿ ಮೌನವಾಗಿರುವುದು ಮುಂತಾದವುಗಳನ್ನು ಸಾಮಾನ್ಯವಾಗಿ ಸಾಂಪ್ರದಾಯಿಕ ತರಗತಿಗಳಲ್ಲಿ ಇತರ ಗುಣಗಳಿಗಿಂತ ಹೆಚ್ಚಾಗಿ ಆದರಿಸಲಾಗುತ್ತದೆ; ಮತ್ತು ಈ ಗುಣಗಳನ್ನು ಹೊಂದಿರುವ ತರಗತಿಗಳನ್ನು ಮಾದರಿ ತರಗತಿಗಳು ಎಂದು ಪರಿಗಣಿಸಲಾಗುತ್ತದೆ. ಆದರೂ ನಮ್ಮ ದೈನಂದಿನ ಜೀವನ ಮತ್ತು ಕೆಲಸದಲ್ಲಿ, ಒಬ್ಬರ ಭಾವನೆಗಳು ಅವರಿಗೆ ಮಾತ್ರ ಉಂಟಾಗುವ ವೈಯಕ್ತಿಕ, ವಿಶಿಷ್ಟ ಅಥವಾ ವಿಶೇಷವಾದ ಅನುಭವಗಳಾಗಿರುವುದಿಲ್ಲ ಅಥವಾ ಅವು ಕ್ಷುಲ್ಲಕವಲ್ಲ ಎಂಬುದು ನಮ್ಮ ಅರಿವಿಗೆ ಬರುತ್ತದೆ. ವಿನಾನ್, ವರ್ಶಮ್ ಮತ್ತು ಇತರ ವಿದ್ವಾಂಸರ ಬರಹಗಳು, ಈ ಭಾವನೆಗಳು 'ಮೂರ್ತರೂಪದ ಕಲಿಕೆಯ ಅನುಭವಗಳನ್ನು ಸಾಮಾಜಿಕ ರಚನೆಗಳು ಮತ್ತು ನಂಬಿಕೆಯ ವ್ಯವಸ್ಥೆಗಳಿಗೆ, ಭೂತ ಮತ್ತು ವರ್ತಮಾನಕ್ಕೆ' (ವಿನಾನ್ಸ್, 2012) ಹೇಗೆ ಜೋಡಿಸುತ್ತವೆ ಎಂಬುದನ್ನು ಪರಿಶೀಲಿಸಲು ನಮ್ಮನ್ನು ಪ್ರೇರೇಪಿಸುತ್ತವೆ.

ನಾವು ವಿದ್ಯಾರ್ಥಿಯಾಗಿದ್ದ ದಿನಗಳಲ್ಲಿ ನಮ್ಮ ಸ್ವಂತ ಅನುಭವಗಳತ್ತ ಹಿಂದಿರುಗಿ ನೋಡಿದರೆ, 'ನಾವು ಏನು ಕಲಿತೆವು' ಎಂಬುದು 'ನಾವು ಹೇಗೆ ಕಲಿತೆವು' ಎಂಬ ಅನುಭವದೊಂದಿಗೆ ನಿಕಟವಾಗಿ ಸಂಬಂಧಿಸಿರುವುದನ್ನು ನಾವು ಕಾಣಬಹುದು. ವಿಶೇಷವಾಗಿ ತರಗತಿಯೊಳಗೆ ನಡೆಯುವ ಭಿನ್ನತೆ, ಅಧಿಕಾರ, 'ವಿಶೇಷತೆ' ಅಥವಾ ಸವಲತ್ತುಗಳ ಮೇಲಿನ ಚರ್ಚೆಗಳು, ವ್ಯತ್ಯಾಸಗಳ ಬಗ್ಗೆ ಆಳವಾದ ಕಲ್ಪನೆಗಳು ಮತ್ತು ಊಹೆಗಳಿಗೆ ಸವಾಲೊಡ್ಡಬಹುದು, ಬಲವಾದ ಭಾವನೆಗಳನ್ನು ಬಡಿದೆಬ್ಬಿಸಬಹುದು. ಇದು ಬಹುಶಃ ವಿದ್ಯಾರ್ಥಿಗಳ ತೀರಾ ವೈಯುಕ್ತಿಕ ವಿಚಾರವನ್ನು ಕೆದಕಬಹುದು ಮತ್ತು ಅವರ ಜೀವನ ಅನುಭವಗಳು ಮತ್ತು ನಂಬಿಕೆಗಳನ್ನು ಒಳಗೊಂಡಿದ್ದು ಅದು ಪ್ರಶ್ನಾತೀತವೂ ಆಗಿರಬಹುದು.

ಇಲ್ಲಿ ಒಂದು ಉದಾಹರಣೆಯನ್ನು ಹಂಚಿಕೊಳ್ಳುವುದಾದರೆ, ಇಸ್ಮತ್ ಅವರ 'ಈದ್' ಅನ್ನು (ತುಲಿಕಾ ಬುಕ್ಸ್ ಪ್ರಕಟಿಸಿದ ಜಾನಪದ ಕಥೆ, ಇದರಲ್ಲಿ ಇಸ್ಮತ್ ತನಗೆ ತುಂಬಾ ಉದ್ದವಾದ ಪ್ಯಾಂಟ್ ಖರೀದಿಸಿದಾಗ ನಡೆಯುವ ದುಃಖ–ಹಾಸ್ಯ ಮಿಶ್ರಿತ ಘಟನೆಗಳ ಸರಣಿಯ ಸುತ್ತ ಈ ಕಥೆ ತಿರುಗುತ್ತದೆ) 8ರಿಂದ – 10ರ ವಯಸ್ಸಿನ ಮಕ್ಕಳಿಗೆ ಓದುತ್ತಿರುವಾಗ, ಗುಂಪಿನಲ್ಲಿ ನಡೆಯುತ್ತಿರುವ ಸಂಭಾಷಣೆಯಲ್ಲಿ ಕಥೆಯ ಪಾತ್ರಗಳನ್ನು 'ಇತ್ತೀಚಿನ ದಿನಗಳಲ್ಲಿ ಸುದ್ದಿಯಲ್ಲಿರುವ ಪಾಕಿಸ್ತಾನಿಗಳು', 'ತೊಂದರೆಯನ್ನು ಸೃಷ್ಟಿಸುವವರು' ಮತ್ತು 'ಬುರ್ಖಾವನ್ನು ಧರಿಸುವವರು' ಎಂದು ಹೋಲಿಸುತ್ತ ಒಬ್ಬ ವಿದ್ಯಾರ್ಥಿಯ ಕಡೆಗೆ ತಿರುಗಿತು. ಈ ವಿಷಯದ ಕುರಿತು ಆತನ ನಿರ್ಣಯ ಮತ್ತು ಆ ಸಮಯದಲ್ಲಿ ಪ್ರಮುಖವಾಗಿ ಸುದ್ದಿಯಲ್ಲಿದ್ದ (ಕರ್ನಾಟಕದ ಶಾಲೆಗಳಲ್ಲಿ ಹಿಜಾಬ್ ನಿಷೇಧದ ನಂತರ) ವಿಷಯದ ಬಗ್ಗೆ ತೀವ್ರವಾದ ಭಾವನಾತ್ಮಕ ತೀರ್ಪು ಈ ವಿದ್ಯಾರ್ಥಿಯನ್ನು ಇತರೆ ಏನನ್ನೂ ಪ್ರಶ್ನಿಸದಂತೆ ತಡೆಯಿತು. ಆ ಪ್ರಶ್ನೆಗಳೆಂದರೆ– 'ಅವರು ಪಾಕಿಸ್ತಾನಿ ಎಂದು ನೀವು ಏಕೆ ಭಾವಿಸುತ್ತೀರಿ? ನಿಮ್ಮ ಜೀವನದಲ್ಲಿ ಯಾರಾದರೂ ಹಿಜಾಬ್ ಧರಿಸಿರುವುದನ್ನು ನೀವು ಎಂದಾದರೂ ನೋಡಿದ್ದೀರಾ?' ಇತ್ಯಾದಿ. 'ಅನ್ಯ'ರ ಬಗ್ಗೆ ಇದ್ದ ಎಂಟು ವರ್ಷದ ಮಗುವಿನ ಭಾವನಾತ್ಮಕ ನಿಲುವಿನ ಪ್ರಮಾಣವು, ಸಣ್ಣದೊಂದು ವಿಷಯದಲ್ಲೂ ತುಂಬಾ ಬಲವಾಗಿತ್ತು. ಆನಂತರದಲ್ಲಿ, ಎಚ್ಚರಿಕೆಯಿಂದ ರೂಪಿಸಿದ ಓದಿನ ಚಟುವಟಿಕೆಗಳು ಮತ್ತು ಸಂಭಾಷಣೆಗಳ ಮೂಲಕ, ಶಿಕ್ಷಕರು ಕೆಲವು ಮಕ್ಕಳ ತಲೆಯಲ್ಲಿ ಆಳವಾಗಿ ಹೊಕ್ಕಿರುವ ನಿರ್ದಿಷ್ಟ ಸಮುದಾಯದ 'ಅನ್ಯರ' ಕುರಿತು ಸಂವಾದ ನಡೆಸಲು ಅವಕಾಶ ಮಾಡಿಕೊಡಲು ಸಾಧ್ಯವಾಯಿತು. ಭಾವನೆಗಳು ಸಾಮಾಜಿಕವಾಗಿ ಮತ್ತು ಚಾರಿತ್ರಿಕ ಹಿನ್ನೆಲೆಗಳನ್ನು ಒಳಗೊಂಡು ಹೇಗೆ ರೂಪಿಸಲ್ಪಡುತ್ತವೆ, ಭೌತಿಕವಾಗಿ ಒಬ್ಬರ ಮನಸ್ಸಿನಲ್ಲಿ ಅವರ ನಿರ್ಣಯ ಮತ್ತು ಆಲೋಚನೆಗಳಲ್ಲಿ ಹೇಗೆ ಸಂಕೀರ್ಣ ರೀತಿಯಲ್ಲಿ ಬೆಸೆದುಕೊಂಡಿವೆ ಎಂಬುದು ಇದರಿಂದ ಸ್ಪಷ್ಟವಾಯಿತು.

## ಅಹಿತಯನ್ನು ನಿವಾರಿಸುವುದು

ಶಿಕ್ಷಕರಾಗಿ, ನಾವು ನಮ್ಮ ಪಾತ್ರವನ್ನು ಸಮಾಜೋ–ರಾಜಕೀಯ ನೆಲೆಯಲ್ಲಿ ನೋಡಬಹುದು. ಹಾಗೆಯೇ ಕರ ಭಾವನೇಯ ಶಿಕ್ಷಕರಾಗಿ, ಹಿಂದಿನ ಅಥವಾ ವರ್ತಮಾನ ಕಾಲಘಟ್ಟದ ಮೌಖಿಕ

ಮತ್ತು ಅಚಿತ ಭಾಷೆಯಲ್ಲಿರುವ, ಅಂತೆಯೇ ಪಠ್ಯಗಳಲ್ಲಿರುವ, ಅನ್ಯಾಯದ ಕೃತ್ಯಗಳು ಮತ್ತು ಅಸಮಾನ ನೀತಿಗಳನ್ನು ಪ್ರಶ್ನಿಸಲು ವಿದ್ಯಾರ್ಥಿಗಳಿಗೆ ಅವಕಾಶಗಳು ಮತ್ತು ಸ್ಥಳಗಳನ್ನು ಸೃಷ್ಟಿಸುವುದು ನಮ್ಮ ಆಶಯವಾಗಿದೆ. ಇದನ್ನು ಗಮನದಲ್ಲಿಟ್ಟು–ಕೊಂಡು, ನಮ್ಮ ತರಗತಿಗಳೊಳಗೂ ಸ್ಪಷ್ಟವಾಗಿ ಅಥವಾ ಸೂಚ್ಯವಾಗಿ ಇದೇ ರೀತಿಯ ಮೌಲ್ಯಗಳನ್ನು ಹೊಂದಿರಬಹುದು, ಉದಾಹರಣೆಗೆ ಗುಂಪಿನಲ್ಲಿ ಪರಸ್ಪರರನ್ನು ಗೌರವಿಸುವುದು ಮತ್ತು ಪ್ರತಿಯೊಬ್ಬರ ಅಭಿಪ್ರಾಯಗಳಿಗೆ ಅವಕಾಶ ಮಾಡಿಕೊಡುವುದು, ಆ ಮೂಲಕ ಪರಸ್ಪರರ ಪ್ರತಿಕ್ರಿಯೆಯಲ್ಲಿ ಕಂಡು ಬರುವ ಭಿನ್ನಾಭಿಪ್ರಾಯಗಳನ್ನು ಗೌರವಿಸುವುದು ಮತ್ತು ಸಂವಾದದ ಮೂಲಕ ಈ ಭಿನ್ನಾಭಿಪ್ರಾಯಗಳನ್ನು ಪರಿಹರಿಸುವುದು. ಆದರೆ ಈ ಎಲ್ಲಾ ಭಿನ್ನಾಭಿಪ್ರಾಯಗಳನ್ನು ಪರಿಹರಿಸುವ ಸಾದೃಶ ರೂಪದಂತಿರುವ ಮತ್ತು ಅದೇ ರೀತಿಯ ಕ್ರಿಯೆಯಲ್ಲಿ ಮುಳುಗಿರುವ ತರಗತಿಗಳಲ್ಲಿ, ಆಗಾಗ್ಗೆ ಉದ್ಭವಿಸುವ ಪ್ರಶ್ನೆಯೆಂದರೆ – ಬೋಧನಾ–ಕಲಿಕಾ ಸಮುದಾಯದ ಎಲ್ಲ ಸದಸ್ಯರ ಕಾಳಜಿ ಮತ್ತು ಯೋಗಕ್ಷೇಮವನ್ನು ಗಮನದಲ್ಲಿರಿಸಿಕೊಂಡು, ನಾವು ಅಧಿಕಾರದ ಕೇಂದ್ರಗಳು ಹಾಗೂ ಪ್ರಬಲ ಸಾಂಸ್ಕೃತಿಕ ನಂಬಿಕೆಗಳು ಉಂಟು ಮಾಡಬಹುದಾದ ಅಹಿತಕರ ಭಾವನೆಗಳನ್ನು ಉತ್ತಮವಾಗಿ ನಿಭಾಯಿಸುವುದು ಹೇಗೆ? ಎನ್ನುವುದು.

ಉದಾಹರಣೆಗೆ, ಕಿರಿಯ ವಿದ್ಯಾರ್ಥಿಗಳೊಂದಿಗೆ ಲಿಂಗತ್ವದ ಬಗ್ಗೆ ಮಾತನಾಡುವಾಗ, ನಿಯಮಗಳು ಮತ್ತು ಸಿದ್ಧಮಾದರಿಗಳ ಸುತ್ತ ಘರ್ಷಣೆಗಳು ಉದ್ಭವಿಸುವುದು ಸಾಮಾನ್ಯವಾಗಿದೆ ಮತ್ತು ನಮ್ಮೆಲ್ಲರನ್ನು ಆವರಿಸಿರುವ ಪಿತೃಪ್ರಾಧಾನ್ಯತೆಯ (patriarchy) ವಿಶಾಲ ರಚನೆಯನ್ನು ನಾವು ಉಲ್ಲೇಖಿಸುತ್ತೇವೆ. ಕೆಲವರು 'ಹುಡುಗರು ಹುಡುಗಿಯರಿಗಿಂತ ಬಲಶಾಲಿಗಳು' ಅಥವಾ ಕೆಲವು 'ಹೆಣ್ತನದ' ಮತ್ತು ಕೆಲವು 'ಗಂಡಸುತನದ' ಲಕ್ಷಣಗಳು ಎಂಬಂತಹ ಲಿಂಗ ನಿರ್ದಿಷ್ಟವಾಗಿರುವಂತಹ ಕಲ್ಪನೆಗಳನ್ನು ಹೊಂದಿರಬಹುದು, ಬಹುಶಃ ಈ ಆಲೋಚನಾ ಕ್ರಮದಲ್ಲಿ ದ್ವಂದ್ವವೂ ಇರಬಹುದು. ತರಗತಿಯು ಯಾರನ್ನು 'ಹುಡುಗಿ' ಎಂದು ನಿರ್ದಿಷ್ಟ ಗುಣಗಳನ್ನು ಆರೋಪಿಸಿ ನೋಡುತ್ತದೆಯೋ ಅವರು ತಮ್ಮಲ್ಲಿ ಆ ಗುಣಗಳನ್ನು ಗುರುತಿಸಿಕೊಳ್ಳದೆಯೂ ಇರಬಹುದು. ವಿಶೇಷವಾಗಿ ಆರಂಭದ ತರಗತಿಗಳಲ್ಲಿರುವ ವಿದ್ಯಾರ್ಥಿಗಳಿಗೆ ಇದು ಕಷ್ಟಕರವಾಗಿರುತ್ತದೆ, ಏಕೆಂದರೆ ಪ್ರತಿಕ್ರಿಯಿಸುವ ಕೌಶಲಗಳು ಮತ್ತು ಚರ್ಚೆಯ ಸಾಮರ್ಥ್ಯವು ಅವರಲ್ಲಿ ಇನ್ನೂ ಬೆಳವಣಿಗೆ ಹೊಂದುತ್ತಿರುವುದು. ಒಬ್ಬರು ಜ್ಞಾನವನ್ನು ಪಡೆಯಲು, ಅದರಲ್ಲಿ ತೊಡಗಿಸಿಕೊಳ್ಳಲು ಪ್ರತಿರೋಧ ತೋರುವ ಜಗತ್ತು, ಮತ್ತೊಬ್ಬರು (ಆರಾಮವಾಗಿ) ಜ್ಞಾನವನ್ನು ಪಡೆಯುವಲ್ಲಿ ತೋರುವ ಆಸಕ್ತಿ, ಅದನ್ನು ಪಡೆದು ಆತ ಅನುಭವಿಸುವ ಸಂತೋಷಕ್ಕಿಂತ ಭಿನ್ನವಾಗಿರಬಹುದು ಮತ್ತು ಇದು ಈ ಎರಡೂ ಮನಸ್ಥಿತಿಯವರ ನಡುವೆ ತೀವ್ರವಾದ ಅಹಿತಕರ ಭಾವನೆಗಳನ್ನು ಉಂಟುಮಾಡಬಹುದು. ಆರೈಕೆ, ಪ್ರೀತಿ ಮತ್ತು ಸಮಾನತೆಯ ಮೇಲೆ ಜಾಗತಿಕ ದೃಷ್ಟಿಕೋನಗಳನ್ನು ರೂಪಿಸುವ ಸಂದರ್ಭದಲ್ಲಿ ನಾವು ಈ ಅಹಿತಕರ ಭಾವನೆಯನ್ನು ಹೇಗೆ ಪರಿಹರಿಸಬಹುದು?

೨ರಿಂದ 14ರ ವಯಸ್ಸಿನ ಗುಂಪಿಗೆ ಭಾಷಾ ತರಗತಿಗಳನ್ನು ನಡೆಸುವಾಗ, ನಮ್ಮ ಅನೇಕ ಸಂಭಾಷಣೆಗಳು ಇಂಗ್ಲಿಷ್ ಭಾಷೆಯಲ್ಲಿನ ವೈಯಕ್ತಿಕ ಸರ್ವನಾಮಗಳ ಪರಿಕಲ್ಪನೆಯ ಸುತ್ತ ಇರುವುದನ್ನು ನಾನು ಗಮನಿಸಿದ್ದೇನೆ (ನಾನು, ನೀನು, ಅವನು, ಅವಳು, ಅವರು ಇತ್ಯಾದಿ). ಉದಾಹರಣೆಗೆ, ನಮ್ಮ ದೈನಂದಿನ ಜೀವನದಲ್ಲಿ ವಿವಿಧ ಸ್ಥಳಗಳಲ್ಲಿ ನಾವು ಸ್ವಾಭಾವಿಕವಾಗಿ ಯಾವ ಸರ್ವನಾಮಗಳನ್ನು ಬಳಸುತ್ತೇವೆ ಎಂಬುದನ್ನು ನಮ್ಮ ಸಂಭಾಷಣೆಗಳು ನಿರ್ಧರಿಸುತ್ತವೆ. ನಮ್ಮ ಗುಂಪಿನಲ್ಲಿ ಕೆಲವರು, ತಮ್ಮ ಬಸ್ತಿಯಲ್ಲಿ (ಸ್ಲಂ) (ಅಷ್ಟೇನೂ ಸುರಕ್ಷಿತವಲ್ಲದ ಸ್ಥಳಗಳಲ್ಲಿ) ಮತ್ತು ತರಗತಿಯಲ್ಲಿ (ಹೆಚ್ಚಿನ ವಿಮರ್ಶೆಗೆ ಒಳಗಾಗದ) ವಿಭಿನ್ನ ಲಿಂಗತ್ವ ಗುರುತು (gender identities) ಹೊಂದಿದವರಿದ್ದರು. ಇನ್ನಿತರರು ತಮ್ಮ ಲಿಂಗ ಅಸ್ಥಿರತೆಯನ್ನು ಮತ್ತು ಅದೆಷ್ಟು ಸಾಮಾಜಿಕವಾಗಿ ನಿರ್ಮಿತವಾದುದೆಂದು ವಿಮರ್ಶೆ ಮಾಡಬಲ್ಲವರಾಗಿದ್ದರು. ಗೊಂದಲಗಳು ಸ್ವಾಗತಾರ್ಹವಾಗಿರು–ವಂತಹ, 'ಇಷ್ಟವಾಗದ' ಭಾವನೆಗಳಿಗೆ ಸಾಮೂಹಿಕವಾಗಿ ಹೆಗಲು ಕೊಡಬಲ್ಲಂಥ ಮತ್ತು 'ಗೋಜಲಾಗಿರುವುದನ್ನು' ಸ್ವೀಕರಿಸುವಂಥ, ಒಂದು ತರಗತಿ ಸಂಸ್ಕೃತಿಯನ್ನು ರಚಿಸಲು, ಗುಲ್ಲಿ ಕ್ಯಾನ್ ಫ್ಲೈ (ಮುಸ್ಕಾನ್, 2019), ನವಾಬ್ ಸೆ ನಂದಿನಿ (ನಿರಂತರ, 2006), ದಿ ಅನ್‌ಬಾಯ್ ಬಾಯ್ (ಪಿಕ್ಲಿಯೋಲ್ಕ್ ಬುಕ್ಸ್, 2013), ಅಜೂಬಾ (ಏಕಲವ್ಯ, 2018)ನಂತಹ ಸಮೃದ್ಧ ಮತ್ತು ಸೂಕ್ಷ್ಮ ಕಥೆಗಳನ್ನು ನಾನು ಕಂಡುಕೊಂಡಿದ್ದೇನೆ. ಸಿದ್ಧಮಾದರಿಗಳ ವಿರುದ್ಧ ಹೋರಾಡುವ ಮತ್ತು ಅವರಿಗೆ ಹತ್ತಿರವಾದ, ಸತ್ಯವೆಂದು ಕಂಡುಬಂದ, ಪಾತ್ರಗಳ ಮೂಲಕ ಮಕ್ಕಳು ಸಂತೋಷವನ್ನು ಕಂಡುಕೊಳ್ಳುವುದಕ್ಕೆ ಈ ಕಥೆಗಳು ನಮಗೆ ಸಹಾಯ ಮಾಡಿವೆ. ನಿರಂತರವಾಗಿ ನಮ್ಮ ಗುರುತುಗಳನ್ನು ದೃಢೀಕರಿಸುತ್ತಾ ಮತ್ತು ಒಟ್ಟಿಗೆ ಕೂತು ನಮ್ಮ ಭಾವನೆಗಳನ್ನು ವ್ಯಕ್ತಪಡಿಸುತ್ತಾ ಇದ್ದುದರ ಪರಿಣಾಮವಾಗಿ, ಕೆಲವು ವಾರಗಳ ನಂತರ, ಈ ಓದುವಿಕೆಯಲ್ಲಿ ತೊಡಗಿಕೊಂಡ ಗುಂಪು ಪರಸ್ಪರರಿಗೆ ಯಾವ ಸರ್ವನಾಮಗಳನ್ನು ಬಳಸಬೇಕೆಂದು ತಮ್ಮದೇ ಆದ ರೀತಿಯಲ್ಲಿ ಪರಿಶೀಲಿಸಿ ಕಂಡುಕೊಂಡಿತು ಮತ್ತು ಅವರ ಜನ್ಮ / ಅಧಿಕೃತ ಹೆಸರುಗಳ ಬದಲಿಗೆ, ತರಗತಿಯ ಹೊರಗಿದ್ದರೂ, ಗುಂಪು ಅವರ ಆಯ್ದುಕೊಂಡ ಅಥವಾ ಇಷ್ಟಪಟ್ಟ ಹೆಸರುಗಳನ್ನು ಪರಸ್ಪರ ಬಳಸುವುದನ್ನು ನಾನು ಗಮನಿಸಿದ್ದೇನೆ. ಉದಾಹರಣೆಗೆ, ಪೂಜಾ ಎಂಬ ಮಗು ವಿಭಿನ್ನ ಲಿಂಗದ ಗುರುತನ್ನು ಆರಿಸಿಕೊಳ್ಳಬಹುದು ಮತ್ತು ಅಮನ್ ಎಂದು ಕರೆಸಿಕೊಳ್ಳಲು ಬಯಸಬಹುದು.

ಸಾಮಾನ್ಯವಾಗಿ ಅಧಿಕಾರ ರಚನೆಗಳ ವಿಶ್ಲೇಷಣೆಗೆ ಪ್ರತಿರೋಧ ವ್ಯಕ್ತಪಡಿಸುವುದು ಮತ್ತು ತರಗತಿಗಳಲ್ಲಿ ಪ್ರಬಲವಾದ ಸಾಂಸ್ಕೃತಿಕ ನಂಬಿಕೆಗಳಿಗೆ ಅಂಟಿಕೊಳ್ಳುವುದು, ಗುರುತಿಸುವಿಕೆ ಮತ್ತು ಕಾಳಜಿಗಾಗಿ ಪ್ರಬಲವಾದ ಕೂಗು ಮುಂತಾದವು ಒಬ್ಬರ ಒಳಗಿರುವ ಹೆದರಿಕೆಯ ಭಾವನೆಯಿಂದ ಉಂಟಾಗುತ್ತವೆ. 'ಅಹಿತಕರ ಭಾವನೆಯ ಕುರಿತ ಬೋಧನಾ ವಿಧಾನ' (pedagogy of discomfort) ಎಂಬ ವಿಷಯದ ಕುರಿತು ಅಧ್ಯಯನ ಕೈಗೊಂಡಿರುವ ಮೇಗನ್ ಬೋಲರ್ ಅವರಂತಹ

ವಿದ್ವಾಂಸರು ತಮ್ಮ ಕೃತಿಯಲ್ಲಿ, ಸಹಾನುಭೂತಿ ಮತ್ತು ಭರವಸೆ ಪ್ರಮುಖ ಅಂಶಗಳಾಗಿವೆ ಎಂದು ಭಾವಿಸುತ್ತಾರೆ. ಅಹಿತಕರ ಭಾವನೇಯ ಕುರಿತ ಶಿಕ್ಷಣಶಾಸ್ತ್ರವು 'ದೈನಂದಿನ ಅಭ್ಯಾಸಗಳು, ದಿನಚರಿಗಳು ಮತ್ತು ಪ್ರಜ್ಞಾಹೀನ ಸಂಕೀರ್ಣತೆಯನ್ನು ಪ್ರಾಬಲ್ಯದೊಂದಿಗೆ ರೂಪಿಸುವಲ್ಲಿ ಆಳವಾಗಿ ಹುದುಗಿರುವ ಭಾವನಾತ್ಮಕ ಆಯಾಮಗಳನ್ನು ಗುರುತಿಸುತ್ತದೆ ಮತ್ತು ಅದನ್ನು ತೊಂದರೆಗೊಳಪಡಿಸುತ್ತದೆ' (ಬೋಲರ್, 2004, ಪುಟ. 118). ಹೀಗೆ ಮಾಡುವುದರ ಮೂಲಕ, ಇದು ಕೇವಲ ಬಲಾಢ್ಯ ಗುಂಪಿನ ಸದಸ್ಯರನ್ನು ಮಾತ್ರವಲ್ಲ, ನಿರ್ಲಕ್ಷ್ಯಕ್ಕೊಳಗಾದ ಸದಸ್ಯರನ್ನೂ ಅನಿವಾರ್ಯವಾಗಿ ಅಂತರ್ಗತಗೊಳಿಸಿ-ಕೊಂಡಿರುವ ಮೌಲ್ಯಗಳನ್ನು ಮರುಪರಿಶೀಲಿಸಲು ಆಹ್ವಾನಿಸುತ್ತದೆ. ಅಹಿತಕರ ಬೋಧನಾ ವಿಧಾನವು ಯಾರಾದಾರೊಬ್ಬರ ಜಾಗತಿಕ ದೃಷ್ಟಿಕೋನವನ್ನು ನಿವಾರಿಸಿದರೆ (ವಿಮರ್ಶಾತ್ಮಕ ಶಿಕ್ಷಣಶಾಸ್ತ್ರದ (critical pedagogy) ಪ್ರಕಾರ ಇದು ಅಡ್ಡಿಪಡಿಸಲು ಮತ್ತು ಛಿದ್ರಗೊಳಿಸಲು ಅವಶ್ಯಕವಾಗಿದೆ), ಸಹಾನುಭೂತಿಯ ಮೂಲಕ ನಿರ್ವಾತವನ್ನು ಬೇರೆ ಯಾವುದರ ಮೂಲಕವಾದರೂ ತುಂಬುವ ಸಾಧ್ಯತೆಯಿದೆ. ಹೀಗೆ 'ಸಹಾನುಭೂತಿಯು ಅಹಿತಕರ ಶಿಕ್ಷಣಶಾಸ್ತ್ರವನ್ನು ಅನುಭವಿಸುತ್ತಿರುವವರು ಮತ್ತು ಅಪೂರ್ಣತೆಗಳಿಂದ ತುಂಬಿರುವ ಜಗತ್ತಿನಲ್ಲಿ ಸಂಪೂರ್ಣವಾಗಿ ಜೀವಂತವಾಗಿರಲು ಹೊಸ ಮಾರ್ಗಗಳನ್ನು ಅನ್ವೇಷಿಸುತ್ತಿರುವವರ ನಡುವಿನ ಒಂದು ಸೇತುವೆಯಾಗಿದೆ.' (ಬೋಲರ್, 2004, ಪು.129) ಅಸ್ತಿತ್ವದಲ್ಲಿರುವ ವಾಸ್ತವಗಳನ್ನು ವಿಮರ್ಶಾತ್ಮಕವಾಗಿ ಪ್ರಶ್ನಿಸುವ ಕಾರ್ಯನಿರ್ವಹಿಸಬೇಕಿರುವ ಶಿಕ್ಷಕರ ಕಾರ್ಯವಾಗಿ ಈ ಸೇತುವೆಯ ಸೃಷ್ಟಿಯು ಅತ್ಯಗತ್ಯವಾಗಿದೆ.

## ಸಹಾನುಭೂತಿ ಮತ್ತು ಭರವಸೆ

ಸಹಾನುಭೂತಿಯು ಹೊಸತನದ, ಹೆಚ್ಚು ಸಮಾನವಾದ ಮತ್ತು ಭರವಸೆಯ ಮೇಲೆ ಸ್ಥಾಪಿತವಾದ ಜಗತ್ತನ್ನು ನಿರ್ಮಿಸಲು ಬಾಗಿಲು ತೆರೆಯುತ್ತದೆ. ಕಲಿಕಾ ಸಮುದಾಯವು (ತರಗತಿ) ಅವರ ಸ್ವಇಚ್ಛೆಯಿಂದ, ಆತ್ಮಸಾಕ್ಷಿಗೆ ಅನುಗುಣವಾಗಿ ತಮ್ಮ ಸವಲತ್ತುಗಳು ಎಲ್ಲಿಂದ ಬರುತ್ತಿವೆ ಎಂದು ತಮ್ಮನ್ನು ತಾವು ಪ್ರಶ್ನಿಸಿಕೊಂಡು, ಇತರರ ಸ್ವಾತಂತ್ರ್ಯದ ತ್ಯಾಗದಿಂದಾಗಿ ಬರುತ್ತಿವೆ (ಅಥವಾ ಯಾವುದನ್ನ ಅನಿವಾರ್ಯ ಮತ್ತು ಸ್ಥಿರವಾದ ರಚನೆಗಳು ಎಂದು ಅವರು ಗ್ರಹಿಸುತ್ತಾರೋ ಅವು ನಿಜವಾಗಿ ಐತಿಹಾಸಿಕವಾಗಿ ಮತ್ತು ಸಾಮಾಜಿಕವಾಗಿ ರಚಿಸಲ್ಪಟ್ಟವು) ಎಂದು ಅರಿತುಕೊಳ್ಳಲು ಸಾಧ್ಯವಾದರೆ, ಟೀಕೆ, ಸಿನಿಕತೆಗಳನ್ನು ದೂರಮಾಡಿ ಎಲ್ಲರೂ ಒಂದಾಗಿ ಭವಿಷ್ಯವನ್ನು ರೂಪಿಸಲು ಸಾಧ್ಯ. ಉದಾಹರಣೆಗೆ, ದೆಹಲಿ-ಹರಿಯಾಣ ಗಡಿಯಲ್ಲಿರುವ ನಮ್ಮ ತರಗತಿಯ ವಿದ್ಯಾರ್ಥಿಗಳ ಕುಟುಂಬಗಳಿಗೆ ಒಕ್ಕಲೆಬ್ಬಿಸುವ ನೋಟೀಸ್‌ಗಳನ್ನು ಕೊಡಲಾಗಿತ್ತು. ಆಗ, ಆ ಸಮುದಾಯಗಳು, ಅವರ ಸ್ವಂತ ಕುಟುಂಬಗಳ ಇತಿಹಾಸವನ್ನು, ಇವತ್ತು ಅಸ್ತಿತ್ವದಲ್ಲಿರುವ ಅವರ ಬಸ್ತಿಗಳು ಹೇಗೆ ಮತ್ತು ಏಕೆ ರಚನೆಯಾದವು ಎಂಬುದನ್ನು ದಾಖಲಿಸುವ ಮೂಲಕ ಹೆಚ್ಚಿನ ವಿದ್ಯಾರ್ಥಿಗಳು ಅಧಿಕಾರ ಕೇಂದ್ರದ ವಿರುದ್ಧ ಧ್ವನಿ ಎತ್ತುವ ಭರವಸೆಯನ್ನು ಕಂಡುಕೊಂಡರು. ಅಲ್ಲಿಯವರೆಗೆ ಅದು ಜೀವನಕ್ಕಿಂತ ದೊಡ್ಡದಾಗಿಯೂ ಸ್ಥಿರವಾಗಿಯೂ ಕಂಡಿತ್ತು. ಈ ರೀತಿಯಾಗಿ, 'ನಿರ್ಣಾಯಕ ಭರವಸೆ' (critical hope) ಎಂಬುದು ಕೇವಲ ಉತ್ತಮ ದಿನದ ಕನಸುಗಳನ್ನು ಕಾಣುವುದನ್ನೂ ಮೀರಿ ಎಲ್ಲರೂ ಒಟ್ಟಾಗಿ ಹೇಗೆ ಕೆಲಸ ಮಾಡುವುದು ಎಂಬುದರ ಕುರಿತು ಪ್ರಜ್ಞಾಪೂರ್ವಕವಾಗಿ ಯೋಚಿಸುವಂತೆ ಮಾಡುತ್ತದೆ (ಫ್ರೇರ್ ಮತ್ತು ಇತರರು, 2021). ಈ ರೀತಿಯಲ್ಲಿ ಜವಾಬ್ದಾರಿಯನ್ನು ಚೌಕಟ್ಟುಗೊಳಿಸುವುದು ಕೂಡ ನಮ್ಮನ್ನು ಸಾಮಾಜಿಕ ಸಂಬಂಧಗಳ ಜಾಲದಲ್ಲಿ ಹಿಡಿದಿಡುತ್ತದೆ ಮತ್ತು ಇದರಲ್ಲಿ ನಮ್ಮ ಕ್ರಿಯೆಗಳು ಮುಖ್ಯವಾಗುತ್ತವೆ ಮತ್ತು ಅವು ಪರಿಣಾಮಗಳನ್ನು ಬೀರುತ್ತವೆ. ಈ ರೀತಿಯ ಭರವಸೆಯು ನಿರಾಧಾರವಲ್ಲ, ಅಂದರೆ, ನಾವು ಯೋಚಿಸದೆ ಆಶಾವಾದಿಗಳಾಗುತ್ತೇವೆ ಅಥವಾ 'ಕಠಿಣ ಪರಿಶ್ರಮ ಮಾತ್ರ ಯಶಸ್ಸಿಗೆ ಕಾರಣವಾಗುತ್ತದೆ' ಅಥವಾ 'ಇದು ನನ್ನಂತಹವರ ಹಣೆಬರಹ' ಎಂಬಂತಹ ಕ್ಲೀಷೆಯನ್ನು ನಂಬುತ್ತೇವೆ ಎಂದಲ್ಲ. ಬದಲಾಗಿ, ವರ್ತಮಾನವನ್ನು ಬದಲಾಯಿಸಲು, ಅನ್ಯಾಯದ ಸಂದರ್ಭಗಳನ್ನು ಎದುರಿಸಿ ಅದನ್ನು ಇತರ ಸಂಭವನೀಯ ಭವಿಷ್ಯವಾಗಿ ಪರಿವರ್ತಿಸಲು ನಾವು ಇತರರೊಂದಿಗೆ ಸೌಹಾರ್ದಯುತವಾಗಿ ಮಾತುಕತೆ ನಡೆಸಲು ಪ್ರಯತ್ನಿಸುತ್ತೇವೆ. ಭವಿಷ್ಯಕ್ಕಾಗಿ ಮತ್ತು ಪರಸ್ಪರರಲ್ಲಿರುವ ಭರವಸೆಯು ತರಗತಿಯಲ್ಲಿ ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಚೆನ್ನಾಗಿರುವುದರ ಭಾಗವಾಗಿದೆ, ಅಂತಹ ಶಿಕ್ಷಣವು ಸಬಲೀಕರಣಗೊಳಿಸುತ್ತದೆ ಅಥವಾ ವಿಮೋಚನೆಯು ಗುಣಪಡಿಸುತ್ತದೆ ಮತ್ತು ಅದರ ಪ್ರಮುಖ ಅಂಶವಾಗಿರುವ ಕಾಳಜಿ ಮತ್ತು ಸಹಾನುಭೂತಿಯಿಂದ ನಮ್ಮನ್ನು ಹಿಡಿದಿಟ್ಟುಕೊಳ್ಳುತ್ತದೆ.

ಕೆಲವು ತಿಂಗಳ ಹಿಂದೆ, ಬಸ್ತಿಯಲ್ಲಿ 6ರಿಂದ 10 ವರ್ಷದ ಮಕ್ಕಳ ಗುಂಪು ಗಣಪತಿ ವಿಸರ್ಜನಾ ಮೆರವಣಿಗೆಯಲ್ಲಿ ಸೇರಲು ಉತ್ಸುಕರಾಗಿ ರಸ್ತೆಯಲ್ಲಿ ಧ್ವನಿವರ್ಧಕದ ಹಿಂದೆ ಹೋಗುತ್ತಿದ್ದಾಗ, ಗಣಪತಿಯನ್ನು ನೀರಲ್ಲಿ ಮುಳುಗಿಸುವ ಪದ್ಧತಿಯ ಹಿಂದಿನ ಇತಿಹಾಸ ತಿಳಿದಿದೆಯೇ ಎಂದು ಮಕ್ಕಳನ್ನು ಶಿಕ್ಷಕರು ಕೇಳಿದರು. ನಂತರ ನಡೆದದ್ದು ಜಾತಿಯ ಆಧಾರದ ಮೇಲೆ ಧಾರ್ಮಿಕ ಆಚರಣೆಗಳ ಬಗ್ಗೆ ಚರ್ಚೆ- ವಿಗ್ರಹ ಸ್ಪರ್ಶಿಸುವುದನ್ನು ಏಕೆ ಕೆಲವರಿಗೆ ನಿರಾಕರಿಸಲಾಯಿತು ಮತ್ತು ಅಂತಿಮವಾಗಿ ಅದು ನಿಜವಾಗಿಯೂ ಯಾರ ಧರ್ಮ ಎಂಬ ಪ್ರಶ್ನೆಯೊಂದಿಗೆ ಮುಕ್ತಾಯಗೊಂಡಿತು. ಪ್ರಾಬಲ್ಯ ಹೊಂದಿರುವ ವ್ಯವಸ್ಥೆಗಳನ್ನು ಪ್ರಶ್ನಿಸಲು ಮತ್ತು ಒಬ್ಬರ ಜಾಗತಿಕ ದೃಷ್ಟಿಕೋನವನ್ನು ಬದಲಾಯಿಸಲು ಅನುವು ಮಾಡಿಕೊಡುವ ಕಷ್ಟಕರ ಕೆಲಸದಲ್ಲಿ ತೊಡಗಿಸಿಕೊಳ್ಳುವ ಈ ಭಾವನಾತ್ಮಕ ಇಚ್ಛೆಗೆ (emotional willingness) ಸಂವಾದ ಮತ್ತು ವಿಶ್ವಾಸದ ಅಗತ್ಯವಿರುತ್ತದೆ ಮತ್ತು ಇದು ಸುಗಮಕಾರರ ಜವಾಬ್ದಾರಿಯಾಗಿದೆ. ತರಗತಿಯಲ್ಲಿನ ಭರವಸೆ ಮತ್ತು ಹೆಚ್ಚು ನಿರ್ದಿಷ್ಟವಾಗಿ ನಿರ್ಣಾಯಕ ಭರವಸೆಯು (critical hope), ನಮಗೆ

ವಿಮರ್ಶಾತ್ಮಕವಾಗಿರುವುದು ಮತ್ತು ಅದೇ ಹೊತ್ತಿನಲ್ಲಿ ಸಹಾನುಭೂತಿಯಿಂದಿರುವುದು ಜೊತೆಜೊತೆಗೇ ಸಾಗುವ ಕೆಲವು ವಿಧಾನಗಳನ್ನು ನೆನಪಿಸುತ್ತದೆ.

## ಉಪಸಂಹಾರ

ತರಗತಿಯಲ್ಲಿ ಸಾಮಾಜಿಕ ನ್ಯಾಯ, ನಿರ್ಣಾಯಕ ಭರವಸೆ ಮತ್ತು ಸಹಾನುಭೂತಿಯ ಕಲ್ಪನೆಗಳ ಸಾಮಾನ್ಯ ಗುರಿ ಮಕ್ಕಳನ್ನು ರಕ್ಷಿಸುವುದಾಗಿದೆ. ಇದು ಬಾಲ್ಯದಲ್ಲಿ ಮಕ್ಕಳು 'ಮುಗ್ಧತೆ' ಅಥವಾ 'ನಿಷ್ಕಪಟತೆ' ಹೊಂದಿರುತ್ತಾರೆ ಎಂಬ ಪ್ರಬಲ ಗ್ರಹಿಕೆಯಿಂದ ಬಂದಿದೆ. ಮಕ್ಕಳ ಸಾಹಿತ್ಯ ಅಥವಾ ಮಕ್ಕಳ ಚಲನಚಿತ್ರಗಳನ್ನು ನಾವು ವಯಸ್ಕರು 'ಮಕ್ಕಳ ಸ್ನೇಹಿ' ಎಂದು ಪರಿಗಣಿಸುವಲ್ಲಿ ಮತ್ತು ಚರ್ಚಿಸುವಲ್ಲಿ ನಮ್ಮ ಗ್ರಹಿಕೆಗಳು ಸಹ ಇದೇ ರೀತಿಯವುಗಳಾಗಿರುತ್ತವೆ. ಮಕ್ಕಳಲ್ಲಿ ಇದೆ ಎಂದು ಭಾವಿಸಲಾದ ಮುಗ್ಧತೆ ಯಾವುದೇ ರೀತಿಯ ವ್ಯಕ್ತಿನಿಷ್ಠತೆಯ ಕೊರತೆಯನ್ನು ಸೂಚಿಸುತ್ತದೆ. ಹಿಂಸಾಚಾರ, ನಿಂದನೆ ಮತ್ತು ಯಾವುದೇ ರೀತಿಯ ರಚನಾತ್ಮಕ ಘರ್ಷಣೆಗಳಿಂದ ರಕ್ಷಿಸಲ್ಪಡಬೇಕಾದ, ಯಾವುದೇ ಪೂರ್ವಕಲ್ಪನೆಗಳಿಲ್ಲದೆ ಖಾಲಿ ಹಾಳೆಯಂತಿರುವ ಮಕ್ಕಳಿಗೆ, ಮಕ್ಕಳ ಪುಸ್ತಕಗಳು ಸಾಮಾನ್ಯವಾಗಿ 'ಸರಳ', ನೇರ ನಿರೂಪಣೆಗಳಿಂದ ಕೂಡಿರಬೇಕು ಎಂದು ನಿರೀಕ್ಷಿಸಲಾಗಿದೆ. ವಯಸ್ಕರು ಬರೆದ ಮಕ್ಕಳ ಸಾಹಿತ್ಯದಲ್ಲಿ ಸಾಮಾನ್ಯವಾಗಿ ನೈತಿಕತೆಯ ಬೋಧನೆಯೇ ತುಂಬಿರುತ್ತದೆ. ಆದರೂ, ಮಕ್ಕಳು ಘರ್ಷಣೆಗಳನ್ನು ಅನುಭವಿಸುತ್ತಾರೆ ಮತ್ತು ದೈನಂದಿನ ಜೀವನದ ಎಲ್ಲಾ ನೋವುನಲಿವುಗಳ ಮಧ್ಯೆಯೇ ಎಲ್ಲರ ನಡುವೆ ಬದುಕುತ್ತಾರೆ. ಬಾಲ್ಯದ ಅನುಭವಗಳು ಸರಳ ಅಥವಾ ಏಕರೂಪದಿಂದ ದೂರವಿರುತ್ತವೆ ಮತ್ತು ಬಹುತೇಕ ಸಂದರ್ಭದಲ್ಲಿ ಆಳವಾಗಿ ರಾಜಕೀಯವಾಗಿರುತ್ತವೆ. ಕೆಲವು ವಾಸ್ತವಗಳಿಂದ ಮಕ್ಕಳನ್ನು ರಕ್ಷಿಸುವ ಆಶಯದೊಂದಿಗೆ ನಾವು ಪ್ರಾಥಮಿಕ ಶಾಲೆಯಲ್ಲಿ ಜಟಿಲ ಚರ್ಚೆಗಳನ್ನು ಬದಿಗೊತ್ತಲು ಪ್ರಯತ್ನಿಸುತ್ತೇವೆ. ಆದರೆ, ಇದು ಅವರನ್ನು ತಪ್ಪು ದಾರಿಗೆಳೆಯಬಹುದು, ಅದರಲ್ಲೂ ವಿಶೇಷವಾಗಿ ದಬ್ಬಾಳಿಕೆಯ ವಿರುದ್ಧದ ಹೋರಾಟಗಳನ್ನು ನಿರಂತರವಾಗಿ ನಡೆಸಿಕೊಂಡು ಬಂದಿರುವ ನಿರ್ಲಕ್ಷಿತ ಸಮುದಾಯಗಳಿಂದ ಬಂದಿರುವ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುವಾಗ ಇದನ್ನು ಗಮನಿಸಬಹುದು. ಈ ಕಲಿಕಾರ್ಥಿಗಳಿಗೆ ಬೇಕಾಗಿರುವುದು ತಮ್ಮ ಲೌಕಿಕ ಪರಿಸ್ಥಿತಿಗಳನ್ನು ಬದಲಾಯಿಸದೆ ಜೀವನದಿಂದ ಪಲಾಯನ ಮಾಡುವುದಲ್ಲ, ಅವರಿಗೆದುರಾಗಿ ಪೇರಿಸಿರುವ ವಾಸ್ತವದ ಸ್ವೀಕಾರದ/ ನೈಜತೆಗಳ ಅಂಗೀಕಾರ, ಜೊತೆಗೆ ವಿಭಿನ್ನ ಭವಿಷ್ಯಕ್ಕಾಗಿ ಕೆಲಸ ಮಾಡುವ ಸಾಧನಗಳು. ಈ ನಿಟ್ಟಿನಲ್ಲಿ, ಸಹಾನುಭೂತಿ ಮತ್ತು ನಿರ್ಣಾಯಕ ಭರವಸೆಯು ಗಂಭೀರ ಸ್ವರೂಪದ ಶಿಕ್ಷಣವು ನಮ್ಮಿಂದ ಬಯಸುವ ಜಾಗತಿಕ ದೃಷ್ಟಿಕೋನಗಳ ಸಂಕೋಲೆಯಿಂದ ಕಳಚಿಕೊಂಡು, ಪ್ರೀತಿ, ನ್ಯಾಯ, ಸಮಾನತೆ ಮತ್ತು ಸಂವಾದದ ಅಡಿಪಾಯದ ಮೇಲೆ ನಿರ್ಮಿಸಲಾದ ಸಂಭವನೀಯ ಭವಿಷ್ಯದ ಕಲ್ಪನೆಯ ನಡುವಿನ ಸೇತುವೆಯಾಗಿ ಕಾರ್ಯ ನಿರ್ವಹಿಸುತ್ತದೆ.


**ಪರಾಮರ್ಶನ**

Boler, M. (2004). Teaching for Hope: The Ethics of Shattering World Views. In Teaching, Learning and Loving Reclaiming Passion in Educational Practice (pp. 114–129). Routledge Falmer

Freire, P. Freire, A M A, Barr, R R, & Giroux, H.A (2021). Pedagogy of Hope: Reliving Pedagogy of the Oppressed

Hooks, Bell. (2003). Teaching Community: A Pedagogy of Hope. Routledge

Winans, A E (2012). Cultivating Critical Emotional Literacy: Cognitive and Contemplative Approaches to Engaging Difference. College English, Volume 75, No. 2, (pp. 150–170). National Council of Teachers of English





**ರಾಗಿಣಿ ಲಲಿತ್** ಅವರು ಮಕ್ಕಳು ಮತ್ತು ಯುವಕರಿಗೆ ಭರವಸೆ ಮತ್ತು ಸಹಾನುಭೂತಿಯ ಮೇಲೆ ಕೇಂದ್ರೀಕೃತವಾಗಿರುವ ವಿಮರ್ಶಾತ್ಮಕ ಕಲಿಕೆಯ ಅವಕಾಶಗಳನ್ನು (critical learning spaces) ಸೃಷ್ಟಿಸುವುದಕ್ಕಾಗಿ ಆ ಮಾರ್ಗಗಳ ಅನ್ವೇಷಣೆಯ ಕುರಿತ ಅಧ್ಯಯನದಲ್ಲಿ ತೊಡಗಿಸಿಕೊಂಡಿದ್ದಾರೆ. ಶಿಕ್ಷಣದಲ್ಲಿ ಮಕ್ಕಳ ಸಾಹಿತ್ಯ ಮತ್ತು ಪ್ರದರ್ಶನ ಕಲೆಗಳ ಬಳಕೆಯಲ್ಲಿ ಅವರು ವಿಶೇಷವಾಗಿ ಆಸಕ್ತಿ ಹೊಂದಿದ್ದಾರೆ. ಅವರು ಪ್ರಸ್ತುತ ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಸಂವಾದ, ಭ್ರಾತೃತ್ವ ಮತ್ತು ನ್ಯಾಯದ (Interest Group for Dialogue, Fraternity and Justice) ಕುರಿತ ಆಸಕ್ತರ ಗುಂಪಿನಲ್ಲಿ ಸಂಶೋಧನಾ ಸಹಾಯಕರಾಗಿ ಕೆಲಸ ಮಾಡುತ್ತಿದ್ದಾರೆ. ಅವರನ್ನು ragini.lalit06@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಶ್ರೀನಿಧಿ ಅಡಿಗ** | ಪರಿಶೀಲನೆ: **ನಾಗಮಣಿ ಎಸ್.ಎನ್.**

# ಕ್ಲಾಸ್‌ರೂಂ ವಿತ್ ಎ ವ್ಯೂ: ನೋಟ್ಸ್ ಫ್ರಮ್ ದ ಕೃಷ್ಣಮೂರ್ತಿ ಸ್ಕೂಲ್ಸ್ | ಪುಸ್ತಕ ವಿಮರ್ಶೆ

ಅಂಕುರ್ ಮದನ್

ಅಶ್ವಿನ್‌ಪ್ರಭು ಅವರು ಬರೆದಿರುವ 'ಕ್ಲಾಸ್‌ರೂಂ ವಿತ್‌ಎ ವ್ಯೂ: ನೋಟ್ಸ್ ಫ್ರಮ್ ದ ಕೃಷ್ಣಮೂರ್ತಿ ಸ್ಕೂಲ್' ಪುಸ್ತಕವು ನೋಡಲು ಆಕರ್ಷಕವಾಗಿದೆ. ಕಪ್ಪುಬಿಳುಪು ಚಿತ್ರಗಳನ್ನು ಬಳಸಿ ಸಾಂಪ್ರದಾಯಿಕವಲ್ಲದ ವಿನ್ಯಾಸದಲ್ಲಿ ನಾಜೂಕಾಗಿ ಹೊರಬಂದಿರುವ ಈ ಪುಸ್ತಕ ಹಾಗೂ ಅಧ್ಯಾಯವನ್ನು ತಿರುವಿ ಹಾಕಿದಂತೆ ಓದಲು ಸಿಗುವ ಕೃಷ್ಣಮೂರ್ತಿಯವರ ಉಲ್ಲೇಖಗಳು ನಿಮ್ಮ ಗಮನವನ್ನು ಸೆಳೆಯುತ್ತವೆ ಮಾತ್ರವಲ್ಲದೆ ಪುಸ್ತಕವನ್ನು ಎತ್ತಿಕೊಳ್ಳುವಂತೆ ಪ್ರೇರೇಪಿಸುತ್ತವೆ. ಸರಳ ಭಾಷೆಯಲ್ಲಿ ಬರೆಯಲಾಗಿರುವ ಪಠ್ಯವು ಮುಖ್ಯವಾಗಿ ಶಿಕ್ಷಕರು, ಪೋಷಕರು ಮತ್ತು ಶಾಲಾ ಆಡಳಿತ ಮಂಡಳಿಯವರ ನಡುವೆ ವಿಸ್ತೃತ ಓದುಗರನ್ನು ಸಂಪಾದಿಸಲಿದೆ. ಪುಸ್ತಕದ ಲೇಖಕರಾದ ಅಶ್ವಿನ್‌ಪ್ರಭು ಅವರು, ಕೃಷ್ಣಮೂರ್ತಿಯವರ ಬೋಧನೆಯ ಕುರಿತು ಆಸಕ್ತಿ ಮೂಡಿ, ತನ್ನದೇ ಆದ ಶಾಲಾ ಅನುಭವದ ಕುರಿತು ಪರ್ಯಾಲೋಚಿಸಿ, ಕಾರ್ಪೊರೇಟ್ ಉದ್ಯಮವನ್ನು ತ್ಯಜಿಸಿ ಕೃಷ್ಣಮೂರ್ತಿ ಫೌಂಡೇಷನ್ ಇಂಡಿಯಾ (KFI) ಶಾಲೆಯಲ್ಲಿ ಬೋಧನೆಗೆ ಇಳಿದವರು. ತನ್ನನ್ನು ತಾನೇ ಸೂತ್ರಧಾರಿಯಾಗಿ (ನಿರೂಪಕಿ) ಉಲ್ಲೇಖಿಸಿ, ಬೋಧನೆಯಲ್ಲಿ ಕಳೆದ ಐದು ವರ್ಷಗಳಲ್ಲಿ ತಾನೇನು ಗಳಿಸಿದ್ದೇನೆ ಹಾಗೂ ಕೆ.ಎಫ್.ಐ ಶಿಕ್ಷಣ ಸಂಸ್ಥೆಗಳ ಸಮೂಹಕ್ಕೆ ಮಾರ್ಗದರ್ಶನ ನೀಡುತ್ತಿರುವ ಸಿದ್ಧಾಂತವೇನು ಎಂದು ಹೇಳಲು ಹಾಗೂ ಇದರ ಫಲಿತಾಂಶವಾಗಿ ಹೊರಹೊಮ್ಮುವ ಅಭ್ಯಾಸಗಳ ಮೇಲೆ ಬೆಳಕು ಹರಿಸುವುದಕ್ಕಾಗಿ ಲೇಖಕರು ಪುಸ್ತಕವನ್ನು ಮುಡಿಪಾಗಿರಿಸಿದ್ದಾರೆ.




ಶೀರ್ಷಿಕೆ: ಕ್ಲಾಸ್‌ರೂಂ ವಿತ್‌ಎ ವ್ಯೂ: ನೋಟ್ಸ್ ಫ್ರಮ್ ದ ಕೃಷ್ಣಮೂರ್ತಿ ಸ್ಕೂಲ್ಸ್

ಲೇಖಕರು: ಅಶ್ವಿನ್‌ಪ್ರಭು

ಪ್ರಕಾಶಕರು: ತಾರಾ (ಏಪ್ರಿಲ್ 2022)

ಭಾಷೆ: ಇಂಗ್ಲಿಷ್

ಪೇಪರ್‌ಬ್ಯಾಕ್: 224 ಪುಟಗಳು

ISBN-13 978-8195317356

ಬೆಲೆ: ರೂ ೮೦೦

‘ಶಾಲೆಯು ಯಾವ ವಿಚಾರಗಳಿಗೆ ತಾಣವೆನಿಸಿದೆ’ ಎನ್ನುವ ಪ್ರಶ್ನೆಯನ್ನು ಮುಂದಿರಿಸಿ, ಈ ದಿಸೆಯಲ್ಲಿ ಮಾರ್ಗದರ್ಶನ ನೀಡುವ, ಕೃಷ್ಣಮೂರ್ತಿಯವರ ಅಭ್ಯಾಸಗಳು ಮತ್ತು ಶೈಕ್ಷಣಿಕ ಸಿದ್ಧಾಂತವನ್ನು ವಿವರಿಸುತ್ತಾ ಲೇಖಕರು ಮುಂದೆ ಸಾಗುತ್ತಾರೆ. ಶಿಕ್ಷಕರು ಮತ್ತು ವಿದ್ಯಾರ್ಥಿಗಳ ನಡುವಿನ ಸಂಭಾಷಣೆಯ ರೂಪದಲ್ಲಿ, ಶಿಕ್ಷಕರು ಮಾಡಿರುವ ಅವಲೋಕನಗಳು ಮತ್ತು ಲೇಖಕರ ಟಿಪ್ಪಣಿಗಳು – ಹೀಗೆ ಅನೇಕ ಉಪಾಖ್ಯಾನಗಳು ವಿವರಣೆಗಳಿಗೆ ಜೀವ ತುಂಬುತ್ತವೆ. ಪ್ರಕಾಶಕರಾಗಿರುವ ತಾರಾ ಬುಕ್ಸ್‌ನ ವಿ. ಗೀತಾ ಅವರ ಟಿಪ್ಪಣಿಯು, ಕಾರ್ಯಾಗಾರಗಳು ಮತ್ತು ಪೂರಕ ಶಾಲಾ ಜಾಲಗಳೊಂದಿಗಿನ ಸಂವಾದದ ಮೂಲಕ ಶಿಕ್ಷಕರನ್ನು ತಲುಪುವುದರೊಂದಿಗೆ ಈ ಪುಸ್ತಕದಲ್ಲಿ ವಿವರಿಸಲಾದ ಅಭ್ಯಾಸಗಳ ವಿಸ್ತೃತ ಅನ್ವಯಕ್ಕೆ ಸೂಕ್ತ ಸಾಕ್ಷ್ಯಾಧಾರಗಳನ್ನು ಒದಗಿಸುತ್ತದೆ. ಕೆ.ಎಫ್.ಐ ಶಾಲೆಗಳು ಗಣ್ಯ – ಪರ್ಯಾಯ ವರ್ಗಕ್ಕೆ ಸೇರಿವೆ ಹಾಗೂ ಸಾಮಾನ್ಯ ಶಾಲೆಗಳು ಅವರ ಅಭ್ಯಾಸಗಳನ್ನು ಅಳವಡಿಸಿಕೊಳ್ಳುವುದು ಕಷ್ಟದ ವಿಚಾರ ಎನ್ನುವ ಸಾಮಾನ್ಯ ಭಾವನೆಯನ್ನು ದೂರ ಮಾಡಲು ಕೃತಿಕಾರರು ಯತ್ನಿಸುತ್ತಾರೆ. ಮಕ್ಕಳ ಕಲಿಕೆ ಮತ್ತು ಶಿಕ್ಷಣದ ಕುರಿತು ಕೃಷ್ಣಮೂರ್ತಿಯವರ ಪ್ರಸಿದ್ಧ ವಿಚಾರಧಾರೆಗಳೆನಿಸಿದ, ಭೀತಿಯಿಂದ ಮುಕ್ತಿ, ಸನ್ನಿವೇಶ ಏನೇ ಇರಲಿ, ಶಿಕ್ಷೆ ಮತ್ತು ಅಧಿಕಾರವು ಎಲ್ಲಾ ಮಕ್ಕಳ ಕಲಿಕೆಯಲ್ಲಿ ಕೇಂದ್ರಸ್ಥಾನವೆನಿಸುತ್ತದೆ – ಇತ್ಯಾದಿಗಳನ್ನು ಅವರ ಟಿಪ್ಪಣಿಯಲ್ಲಿ ಉಲ್ಲೇಖಿಸಲಾಗಿದೆ. ಪ್ರತಿ ಅಧ್ಯಾಯದ ಕೊನೆಗೆ ಪ್ರಭು ಅವರು ಸಹ ಇದೇ ರೀತಿಯ ಪ್ರಯತ್ನವನ್ನು ಮಾಡಿದ್ದಾರೆ.

‘ನೋಯಿಂಗ್ ಒನ್ ಸೆಲ್ಫ್’ ಶೀರ್ಷಿಕೆಯ ಮೊದಲ ಅಧ್ಯಾಯವು, ಕೃಷ್ಣಮೂರ್ತಿಯವರ ಶೈಕ್ಷಣಿಕ ವಿಚಾರಧಾರೆಯ (educational philosophy) ಕೇಂದ್ರ ವಿಚಾರವಾಗಿರುವ ಸ್ವಯಂ ಅನ್ವೇಷಣೆಯ (self-enquiry) ಕುರಿತು ಬೆಳಕು ಹರಿಸುತ್ತದೆ. ರಿಶಿ ವ್ಯಾಲಿ ಶಾಲೆಯಲ್ಲಿ ಅನುಸರಿಸುವ ‘ಪಶ್ಚಿಮ ಘಟ್ಟಗಳಲ್ಲಿ ಸೂರ್ಯಾಸ್ತವನ್ನು ವೀಕ್ಷಿಸುವ’ ‘ಅಷ್ಟಾಚಲ’ವೆಂಬ ಅಭ್ಯಾಸವನ್ನು ಪ್ರಭು ಅವರು ಸವಿಸ್ತಾರವಾಗಿ ವಿವರಿಸುತ್ತಾರೆ. ಇಡೀ ದಿನವನ್ನು ಕೆಲಸದಲ್ಲಿ ಕಳೆದ ನಂತರ ಈ ಅಭ್ಯಾಸವನ್ನು ಪಾಲಿಸುವುದು ಮಕ್ಕಳು ಮತ್ತು ಶಿಕ್ಷಕರಿಬ್ಬರ ಪಾಲಿಗೂ ನಿಶ್ಶಬ್ಧ ಅಥವಾ ನಿಶ್ಚಲತೆಯ ಭಾವವನ್ನು ಒದಗಿಸುತ್ತದೆ. ಒಟ್ಟಿಗೆ ನಿಶ್ಶಬ್ಧವನ್ನು ಅನುಭವಿಸುವುದು, ಮಕ್ಕಳು ತಮ್ಮ ಆಂತರ್ಯಕ್ಕೆ ಗಮನ ಹರಿಸಲು ಮಾಡುವ ಒಂದು ಸುಂದರ ಅಭ್ಯಾಸವಾಗಿದೆ. ಎಳೆಯಮಕ್ಕಳು ಆರಂಭದಲ್ಲಿ ಹೇಗೆ ಈ ಅಭ್ಯಾಸಕ್ಕೆ ಪ್ರತಿರೋಧ ತೋರುತ್ತಾರೆ ಹಾಗೂ ಸ್ವಲ್ಪ ಮನವರಿಕೆ ಮತ್ತು ದೀರ್ಘ ಪ್ರಯತ್ನದ ಮೂಲಕ ಇದರ ಮೌಲ್ಯವನ್ನು ಅರಿತುಕೊಳ್ಳಲು ಪ್ರಾರಂಭಿಸುತ್ತಾರೆ ಎಂಬುದನ್ನು ಪ್ರಭು ಅವರು ವಿವರಿಸಿದ್ದಾರೆ. ಮುಕ್ತ ಮಾತುಕತೆ ಸಮಯ (circle Time) ಮತ್ತು ಸಂಸ್ಕೃತಿಯ ಕುರಿತ ತರಗತಿ ಇತ್ಯಾದಿ ಅಭ್ಯಾಸಗಳು ಸಹ ಈ ಉದ್ದೇಶಕ್ಕೆ ಹೇಗೆ ಕೊಡುಗೆಯನ್ನು ನೀಡುತ್ತವೆ ಎಂಬುದನ್ನು ವಿವರಿಸಲಾಗಿದೆ. ಆದರೆ ಸಂವಾದ ಮತ್ತು ಚರ್ಚೆಯ ಮಾಧ್ಯಮದ ಮೂಲಕ ಈ ಕೆಲಸವನ್ನು ಮಾಡಲಾಗಿದೆ.

ಈ ಪುಸ್ತಕದ ಎರಡನೇ ಅಧ್ಯಾಯವು, ನೈಸರ್ಗಿಕ, ಭೌತಿಕ ಮತ್ತು ಸಾಮಾಜಿಕ ಪರಿಸರ ಸೇರಿದಂತೆ ಒಟ್ಟಾರೆ ಕಲಿಕಾ ಪರಿಸರಕ್ಕೆ ಕೆ.ಎಫ್.ಐ ಶಾಲೆಗಳು ಹೇಗೆ ಪ್ರಾಮುಖ್ಯತೆಯನ್ನು ನೀಡುತ್ತಿವೆ ಎಂಬುದನ್ನು ವರ್ಣಿಸುತ್ತದೆ. ಸಾಮಾಜಿಕ ವಿಜ್ಞಾನ ವಿಷಯಗಳನ್ನು ಬೋಧಿಸಲು ಅಳವಡಿಸಿದ ಕಲಿಕಾ ವಿಧಾನವಾಗಿರುವ ‘ಪ್ರದೇಶ ಅಧ್ಯಯನ’ (Area Study) ಅಭ್ಯಾಸವನ್ನು ಲೇಖಕರು ವಿವರಿಸುತ್ತಾರೆ. ನಿಗದಿತ ಪಠ್ಯಪುಸ್ತಕಗಳ ಆಚೆಗೆ ಸಾಗಿ, ಅನುಭವಜನ್ಯ ವಿಧಾನವನ್ನು (experiential approach) ಬಳಸಿ, ಬಹು ಶಿಸ್ತೀಯ ಮಸೂರದ (multi-disciplinary lens) ಮೂಲಕ, ಕಾಲ ಕಳೆದಂತೆ ಹಿರಿಯ ವಿದ್ಯಾರ್ಥಿಗಳು ತಮ್ಮ ಅಕ್ಕಪಕ್ಕದ ಭೌಗೋಳಿಕ ಪ್ರದೇಶವನ್ನು ಅಧ್ಯಯನ ಮಾಡುವಂತೆ ಗುಂಪು ಕಾರ್ಯಯೋಜನೆಗಳನ್ನು (group projects) ವಿನ್ಯಾಸಗೊಳಿಸಲಾಗಿದೆ. ಅಧ್ಯಯನ ಮತ್ತು ಕಲಿಕೆಯ ವೈರುಧ್ಯದ (studying versus learning) ದ್ವಿಭಜನೆಯನ್ನು (dichotomy) ಬಳಸಿ, ಲೇಖಕರು ಮುಂದಿನ ಅಧ್ಯಾಯಕ್ಕೆ ಸಾಗುತ್ತಾರೆ. ಇಲ್ಲಿ ಅನ್ವೇಷಣೆ, ಸೃಜನಶೀಲ ಚಿಂತನೆ ಮತ್ತು ಬಹು ಶಿಸ್ತೀಯ ವಿಧಾನಗಳ ಮೂಲಕ ವಾಸ್ತವಿಕ ಪ್ರಪಂಚದ ಸಮಸ್ಯೆಗಳನ್ನು ಬಗೆಹರಿಸುವುದಕ್ಕಾಗಿ ಒತ್ತು ನೀಡಲಾಗಿದೆ. ‘ಡಿಸೈನ್ ಲ್ಯಾಬ್’ನ ('Design Lab') ಕಲ್ಪನೆಯನ್ನು, ತರಗತಿಯಲ್ಲಿ ಒಬ್ಬ ವಿದ್ಯಾರ್ಥಿಯು ಎತ್ತಿದ ಪ್ರಶ್ನೆಯು, ಮನೆಯಲ್ಲೇ ಬಳಸುವುದಕ್ಕಾಗಿ ಸಾಬೂನನ್ನು ತಯಾರಿಸುವ ಯೋಜನೆಗೆ ಹೇಗೆ ಕಾರಣವಾಯಿತು ಎಂಬ ನಿದರ್ಶನದ ಮೂಲಕ ವಿವರಿಸಲಾಗಿದೆ. ಇಂತಹ ಕಾರ್ಯಯೋಜನೆಗಳು ಮೂರ್ತ ಹಾಗೂ ಅಮೂರ್ತ ವಿಷಯಗಳ ಕಲಿಕೆಗೆ ಕಾರಣವಾಗುತ್ತವೆ ಎಂಬುದಾಗಿ ಪ್ರಭು ಅವರು ತಿಳಿಸುತ್ತಾರೆ. ಅಮೂರ್ತ (intangible) ವಿಚಾರಗಳು ಅಮೂಲ್ಯವಾಗಿದ್ದು, ಸ್ವಾರ್ಥ ಮನೋಭಾವ ಇಲ್ಲದೆಯೇ ಸಾಮಾನ್ಯ ಉದ್ದೇಶವೊಂದಕ್ಕಾಗಿ ಕೊಡುಗೆ ನೀಡಲು ಮಕ್ಕಳನ್ನು ಉತ್ತೇಜಿಸುವುದಾಗಿದೆ. ಇಂತಹ ಕಾರ್ಯಯೋಜನೆಗಳು, ಮಕ್ಕಳ ವೈಯಕ್ತಿಕ ಸಾಮರ್ಥ್ಯ ಮತ್ತು ಕಲಿಕಾ ಶೈಲಿಗೆ ಕೊಡುಗೆ ನೀಡುವುದಕ್ಕೆ ಮಾತ್ರವಲ್ಲದೆ ಅವರಲ್ಲಿ ಸಹಕಾರ ಮತ್ತು ಸಹಯೋಗ ಮನೋಭಾವವನ್ನು ರೂಪಿಸಲು ಸಹಾಯ ಮಾಡುತ್ತವೆ ಎಂದು ಶಿಕ್ಷಕರು ನಂಬಿದ್ದಾರೆ. ಸಹಕಾರ ಮತ್ತು ಅನುಭವಜನ್ಯ ಕಲಿಕೆಯ ಚೇತನವನ್ನು ಮುಂದಿನ ಅಧ್ಯಾಯಕ್ಕೆ ವಿಸ್ತರಿಸಲಾಗಿದೆ. ಕಲಿಕೆಯಲ್ಲಿ ಜಾನಪದ ನೃತ್ಯ ಮತ್ತು ರಂಗಭೂಮಿ ಮುಂತಾದ ವಿವಿಧ ಕಲಾ ಪ್ರಕಾರಗಳು ಹೇಗೆ ಪ್ರಮುಖ ಸಾಧನಗಳಾಗಿ ಕೆಲಸ ಮಾಡುತ್ತವೆ ಎಂಬುದನ್ನು ಹೇಳಲಾಗಿದೆ. ‘ಸಂಬಂಧದ ಪ್ರತಿಬಿಂಬದಲ್ಲಿ ಮಾತ್ರವೇ ತನ್ನ ಕುರಿತು ಒಬ್ಬನು ಕಲಿತುಕೊಳ್ಳಬಹುದು’ ಎಂದು ಕೃಷ್ಣಮೂರ್ತಿ ಹೇಳಿದ್ದಾರೆ. ಈ ವಿಚಾರವನ್ನು ಆಧರಿಸಿ, ಪುಸ್ತಕದಲ್ಲಿ ವಿವಿಧ ಅಭ್ಯಾಸಗಳ ಉದಾಹರಣೆಗಳನ್ನು ನೀಡಲಾಗಿದೆ –ಒಟ್ಟಿಗೆ ಊಟ ಮಾಡುವುದು, ಸಮುದಾಯ ಕೆಲಸದಲ್ಲಿ ಮಕ್ಕಳು ತೊಡಗಿಸಿಕೊಳ್ಳುವುದು, ಮಾನವ ದುಡಿಮೆಯ ಘನತೆ (ಸರದಿ ವ್ಯವಸ್ಥೆಯ ಮೂಲಕ – ಇಲ್ಲಿ ಎಲ್ಲಾ ಮಕ್ಕಳು ಪಾತ್ರೆ ತೊಳೆಯುವ ಕೆಲಸ ಮತ್ತು ಊಟದ ಸ್ಥಳವನ್ನು ಸ್ವಚ್ಛಗೊಳಿಸಬೇಕಾಗುತ್ತದೆ)

ಇತ್ಯಾದಿಗಳಿಗೆ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಇವೆಲ್ಲ ವಿಚಾರಗಳು ಸಂಬಂಧವನ್ನು ರೂಪಿಸುವುದು, ಪರಸ್ಪರ ಗೌರವ ಮತ್ತು ಸಮುದಾಯ ಭಾವನೆಯನ್ನು ಉತ್ತೇಜಿಸುತ್ತವೆ. ಈ ಎಲ್ಲಾ ಅಭ್ಯಾಸಗಳು, ಮಕ್ಕಳಲ್ಲಿ ಸಂವೇದನೆಯನ್ನು ಪೋಷಿಸುವ ವಿಧಾನಗಳಾಗಿವೆ ಎಂದು ಪ್ರಭು ಅವರು ವಿವರಿಸುತ್ತಾರೆ.

ಕೊನೆಯ ಅಧ್ಯಾಯವು, ಭಾರತದಲ್ಲಿ ಶಾಲೆಗೆ ಹೋಗುತ್ತಿರುವ ಮಕ್ಕಳಲ್ಲಿ ವಿವಿಧ ರೂಪಗಳಲ್ಲಿ ವ್ಯಾಪಕವಾಗಿ ಮನೆ ಮಾಡಿರುವ ಭೀತಿಯ ಭಾವನೆಯನ್ನು ಪರಿಶೀಲಿಸುತ್ತದೆ. ವಿಪರೀತ ಪ್ರಾಮುಖ್ಯತೆಯನ್ನು ಪಡೆದಿರುವ ಪರೀಕ್ಷೆಗಳು ಮತ್ತು ಅವರ ಕಲಿಕಾ ಅನುಭವದ ಮೇಲೆ ಇವು ಹೊಂದಿರುವ ಪರಿಣಾಮಗಳ ಕಾರಣ ಮಕ್ಕಳು ಅನುಭವಿಸುವ ಭೀತಿ ಮತ್ತು ಒತ್ತಡವನ್ನು ತೋರಿಸುವುದಕ್ಕಾಗಿ ಲೇಖಕರು ಸಾಂಪ್ರದಾಯಿಕ ಪರೀಕ್ಷಾ ವ್ಯವಸ್ಥೆಯನ್ನು ವಿಶದೀಕರಿಸುತ್ತಾರೆ. ಕೆ.ಎಫ್.ಐ ಶಾಲೆಗಳಲ್ಲಿ, ಪುರಸ್ಕಾರ ಮತ್ತು ಶಿಕ್ಷೆಯನ್ನು ಪ್ರತಿಬಂಧಿಸುವ ವಿಧಾನಗಳನ್ನು ಅಳವಡಿಸುವ ಮೂಲಕ ಮತ್ತು ದೈನಂದಿನ ಶಾಲಾ ಪರಿಸರವನ್ನು ಸ್ಪರ್ಧೆಯಿಂದ ಮುಕ್ತಗೊಳಿಸುವ ಮೂಲಕ ಹಾಗೂ ತರಗತಿಗಳ ರಚನೆ ಮತ್ತು ಪಠ್ಯಕ್ರಮದ ವಿನ್ಯಾಸದಲ್ಲಿ ಮಿಶ್ರ ವಯಸ್ಸಿನ ಗುಂಪನ್ನು (Mixed Age Grouping) ರೂಪಿಸುವ ಮೂಲಕ ಹೋಲಿಕೆಯಿಂದ ಮುಕ್ತಗೊಳಿಸಿ, ಒತ್ತಡ ಮತ್ತು ಭೀತಿಗೆ ಸಂಬಂಧಿಸಿದ ಸಾಧನೆಯನ್ನು ಹೊರಗಿಡಲಾಗಿದೆ.

ಒಬ್ಬ ಓದುಗಳಾಗಿ, ಈ ಪುಸ್ತಕವು ನನಗೆ ಅನೇಕ ರೀತಿಯಲ್ಲಿ ಇಷ್ಟವಾಗುತ್ತದೆ. ಉದಾಹರಣೆಗಳು ಮತ್ತು ಮಕ್ಕಳು ಹಾಗೂ ಶಿಕ್ಷಕರ ಜೊತೆಗಿನ ಸಂವಾದದ ಮೂಲಕ ನಿರೂಪಿಸಲಾದ, ಅಭ್ಯಾಸಗಳ ಸಮೃದ್ಧ ಮತ್ತು ವಿವರಣಾತ್ಮಕ ಚಿತ್ರಣಗಳನ್ನು ಓದುವುದನ್ನು ನಾನು ಆನಂದಿಸಿದೆ. ಈ ಪುಸ್ತಕದಲ್ಲಿ ವಿವರಿಸಲಾಗಿರುವ ಸರಿಸುಮಾರು ಎಲ್ಲಾ ಅಭ್ಯಾಸಗಳು ಇಷ್ಟವಾಗುತ್ತವೆ ಹಾಗೂ ಚಿಕ್ಕ ಮಕ್ಕಳ ಶಿಕ್ಷಣದ ಕುರಿತು ನಾನು ಹೊಂದಿರುವ ನಂಬಿಕೆಗಳ ಜೊತೆ ತಾಳೆಯಾಗುತ್ತವೆ. ಹೀಗಾಗಿ, ಮೊದಲ ನೋಟದಲ್ಲಿ ಈ ಪುಸ್ತಕವು, ಶಿಕ್ಷಣದ ಸಿದ್ಧಾಂತವನ್ನು ಪ್ರಾಯೋಗಿಕ ರೂಪಕ್ಕೆ ಪರಿವರ್ತಿಸಿರುವ ಕುರಿತ ಸಮಗ್ರ ಸಂಗ್ರಹವಾಗಿ ತನ್ನ ಉದ್ದೇಶವನ್ನು ಈಡೇರಿಸುತ್ತದೆ.

ಆದರೆ, ಒಬ್ಬ ಶಿಕ್ಷಕಿಯಾಗಿ ನಾನು ಇನ್ನೂ ಸಾಕಷ್ಟು ನಿರೀಕ್ಷೆಯನ್ನು ಹೊಂದಿದ್ದೇನೆ. ಈ ಪುಸ್ತಕದಲ್ಲಿನ ಶಿಕ್ಷಣಶಾಸ್ತ್ರೀಯ ಅಭ್ಯಾಸಗಳ (pedagogical practices) ವಿವರಣೆಯು ಒಂದಷ್ಟು ಮಟ್ಟಿಗೆ ಅಪಾರದರ್ಶಕವಾಗಿದೆ. ಇವುಗಳನ್ನು ಕೃಷ್ಣಮೂರ್ತಿಯವರ ಶೈಕ್ಷಣಿಕ ಸಿದ್ಧಾಂತದ ಆಧಾರದ ಮೇಲೆ ನಿರೂಪಿಸಲಾಗಿದೆ. ಆದರೆ ಇದರ ಹಿಂದಿನ ತಾರ್ಕಿಕತೆಯನ್ನು ವಿವರಿಸುವ ಯತ್ನವು ಸ್ವಲ್ಪ ಅರೆಮನಸ್ಸಿನಿಂದ ಕೂಡಿದೆ. ಮುಖ್ಯವಾಗಿ ಇವರು ಹೊಂದಿರುವ ಶೈಕ್ಷಣಿಕ ಸಿದ್ಧಾಂತದ ಕುರಿತು ಆಳವಾದ ಒಳನೋಟವನ್ನು ಹೊಂದಿರದೆ ಇರುವವರಿಗೆ ಈ ರೀತಿ ಭಾಸವಾಗುತ್ತದೆ. ಒಂದು ವೇಳೆ ಈ ಪುಸ್ತಕದ ಉದ್ದೇಶವು (ಲೇಖಕರು ಮತ್ತು ಪ್ರಕಾಶಕರು ಹೇಳಿಕೊಂಡಿರುವಂತೆ), ಈ ಅಭ್ಯಾಸಗಳು ಪರ್ಯಾಯ ಶಾಲಾ ವ್ಯವಸ್ಥೆಯೊಳಗೆಯೇ ಇರಬೇಕಾದ ಅಗತ್ಯವಿಲ್ಲ ಹಾಗೂ ಸಾಮಾನ್ಯ ಶಾಲೆಗಳು ಸಹ ಅಳವಡಿಸಿಕೊಳ್ಳಬಹುದು ಎಂಬುದನ್ನು ತೋರಿಸುವುದಾಗಿದ್ದರೆ, ಈ ಪುಸ್ತಕವು ತನ್ನ ಉದ್ದೇಶವನ್ನು ಈಡೇರಿಸುವಲ್ಲಿ ಹಿನ್ನಡೆ ಅನುಭವಿಸುತ್ತದೆ. ಪರ್ಯಾಯ ಶಾಲಾ ವ್ಯವಸ್ಥೆ ಮತ್ತು ಇದರ ಇತಿಹಾಸ ಹಾಗೂ ಭಾರತದ ಸಮಕಾಲೀನ ಸನ್ನಿವೇಶದಲ್ಲಿ ಇದರ ಪ್ರಸ್ತುತತೆಯ ಕುರಿತು ಲೇಖಕರು ಇನ್ನಷ್ಟು ಆಳಕ್ಕೆ ಇಳಿಯಬೇಕಿತ್ತು ಎಂದು ಸಹ ನನಗೆ ಅನಿಸಿತು. ಪುಸ್ತಕದ ಆಕರ್ಷಣೆ ಮತ್ತು ಸಾಮರ್ಥ್ಯವು, ಈ ಅಭ್ಯಾಸಗಳನ್ನು ಸಾಮಾನ್ಯ ಶಾಲಾ ವ್ಯವಸ್ಥೆಯಲ್ಲಿ ಅಳವಡಿಸುವ ಸಾಧ್ಯತೆಯನ್ನು ಎದುರು ನೋಡುತ್ತಿರುವ ನಮ್ಮಂತಹ ಬಹುಪಾಲು ಜನರ ಮನವೊಲಿಸುವಲ್ಲಿ ಹುದುಗಿದೆ. ಆದರೆ ಈ ರೀತಿ ಮಾಡುವುದಕ್ಕಾಗಿ ಪರ್ಯಾಯ ಶಾಲಾ ವ್ಯವಸ್ಥೆಯ (alternative school system) ಸುತ್ತ ಹೆಣೆಯಲಾಗಿರುವ ಅತೀಂದ್ರಿಯವಾದವನ್ನು (mysticism) ಹೋಗಲಾಡಿಸಬೇಕು ಮತ್ತು ಈ ಅಭ್ಯಾಸಗಳು ಯಾವ ಸನ್ನಿವೇಶದೊಳಗೆ ಇವೆಯೋ ಆ ಸನ್ನಿವೇಶವನ್ನು ಹೊಂದಿಸಬೇಕು. 'ಮೀನಾಕ್ಷಿ ಥಪನ್ಸ್ ಲೈಫ್ ಆಟ್ ಸ್ಕೂಲ್ – ಆನ್ ಎಥ್ನೋಗ್ರಾಫಿಕ್ಸ್ಟಡಿ' (Minakshi Thapan's Life at School - An Ethnographic Study ) ಎನ್ನುವುದು ಈ ನಿಟ್ಟಿನಲ್ಲಿ, ಆಂಧ್ರ ಪ್ರದೇಶದ ರಿಶಿ ವ್ಯಾಲಿ ಶಾಲೆಯ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಮನಗಂಡಂತೆ, ಕೃಷ್ಣಮೂರ್ತಿಯವರ ತತ್ವದ ಆಳ, ವ್ಯಕ್ತಿನಿಷ್ಠ ವ್ಯಾಖ್ಯಾನಕ್ಕೆ ಅತ್ಯುತ್ತಮ ಉದಾಹರಣೆ ಎನಿಸುತ್ತದೆ. ಒಬ್ಬ ಓದುಗಳಾಗಿ, ಕೆ.ಎಫ್.ಐ ಶಾಲೆಯಲ್ಲಿ ಶಿಕ್ಷಕಿಯ ಚಿತ್ರಣವನ್ನು ಕಲ್ಪಿಸಿಕೊಳ್ಳಲು ನಾನು ನಿರಂತರವಾಗಿ ಹೆಣಗಾಡಿದ್ದೇನೆ. ಪುಸ್ತಕದಲ್ಲಿ ವಿವರಿಸಲಾದ ಅಭ್ಯಾಸಗಳನ್ನು ಜಾರಿಗೊಳಿಸಲು ಆಕೆ ನಿಭಾಯಿಸಿದ ಪಾತ್ರಗಳನ್ನು ಪರಿಗಣಿಸಿದಾಗ, ಶಿಕ್ಷಕಿಯ ಕುರಿತು ಸಾಕಷ್ಟು ಕಡಿಮೆ ವಿಚಾರಗಳನ್ನು ಹೇಳಲಾಗಿದೆ ಎಂದು ಅನಿಸುತ್ತದೆ. ಆ ವ್ಯಕ್ತಿ ಯಾರು? ಈ ಶೈಕ್ಷಣಿಕ ಆದರ್ಶಗಳನ್ನು ಸ್ವೀಕರಿಸಿ ಅಂತರ್ಮುಖವಾಗಿಸುವುದಕ್ಕಾಗಿ ಶಿಕ್ಷಕಿಯು ಯಾವ ರೀತಿಯ ಪ್ರಯಾಣವನ್ನು ಕೈಗೊಳ್ಳುತ್ತಾರೆ? ಆಕೆ ಹೀಗೆ ಮುಂದುವರಿಯುವಾಗ ಅನುಭವಿಸುವ ಮತ್ತು ಮೆಟ್ಟಿ ನಿಲ್ಲುವ ಹೋರಾಟಗಳು, ಸವಾಲುಗಳು ಮತ್ತು ಪರಿಮಿತಿಗಳು ಯಾವುವು? ಈ ಪ್ರಯಾಣದಲ್ಲಿ ಆಕೆಯ ಕಲಿಕೆ ಮತ್ತು ಬೆಳವಣಿಗೆಯನ್ನು ಬೆಂಬಲಿಸಲು ಮತ್ತು ಆಧರಿಸಲು ಸಂಸ್ಥೆಯು ಯಾವ ಪಾತ್ರವನ್ನು ವಹಿಸುತ್ತದೆ? ಈ ಪ್ರಶ್ನೆಗಳಿಗೆ ಉತ್ತರಿಸಲು ಒಂದು ಅಧ್ಯಾಯವನ್ನು ಮೀಸಲಿಡಬೇಕಿತ್ತು. ನನ್ನ ಪ್ರಕಾರ, ಒಬ್ಬ ಶಿಕ್ಷಕಿಯು, ಶಾಲೆಯಲ್ಲಿ ಪ್ರತಿ ದಿನವೂ ಮಕ್ಕಳು ಕೇಳುವ ಕಷ್ಟಕರ ಪ್ರಶ್ನೆಗಳನ್ನು ಹೇಗೆ ಎದುರಿಸಬೇಕು ಎಂಬ ಕುರಿತು ಸರಿಸುಮಾರು ಎಲ್ಲಾ ಸಂದರ್ಭದಲ್ಲಿ ತಿಳಿದಿರುವ, ಪರಿಪೂರ್ಣ ಹಾಗೂ ಸಂಪೂರ್ಣರಾಗಿ ಸಿದ್ಧರಾಗಿರುವ ಮೂಲಮಾದರಿ ಎನಿಸಿರುವ ಸೂಪರ್ ಮನುಷ್ಯರಂತೆ ಕಾಣಿಸಿಕೊಳ್ಳುತ್ತಾರೆ.

ಇದೇ ರೀತಿಯ ಪ್ರಯತ್ನದಲ್ಲಿ, ಶಾಲೆಗಳಲ್ಲಿ ಕಲಿಯುತ್ತಿರುವ ಮಕ್ಕಳು ತಮ್ಮ ಯೋಚನೆ ಮತ್ತು ಅಭ್ಯಾಸದಿಂದ ಪಡೆದ ಮೌಲ್ಯಗಳು ಮತ್ತು ಕಲಿಕೆಯನ್ನು ಮೈಗೂಡಿಸುವಲ್ಲಿ ಏಕರೂಪತೆಯನ್ನು ಹೊಂದಿದ್ದಾರೆ ಎಂಬುದಾಗಿ ಈ ಪುಸ್ತಕವು

ಹೇಳುತ್ತದೆ. ಮಕ್ಕಳು ಯಾವ ರೀತಿ ಈ ಅಭ್ಯಾಸಗಳನ್ನು ಪ್ರಶ್ನಿಸುತ್ತಾರೆ ಮತ್ತು ಅವರ ಭೀತಿಯನ್ನು ಹೋಗಲಾಡಿಸಲು ನಿರಂತರ ಸಂವಾದ ಮತ್ತು ತರ್ಕವನ್ನು ಶಿಕ್ಷಕರು ಹೇಗೆ ಬಳಸುತ್ತಾರೆ ಎಂಬ ಕುರಿತು ಕೆಲವು ಉಪಾಖ್ಯಾನಗಳನ್ನು ಲೇಖಕರು ವಿವರಿಸುತ್ತಾರೆ. ಆದರೆ ಬಾಲಪ್ರೌಢರು (precocious adolescent) ಈ ಅಭ್ಯಾಸಕ್ಕೆ ಪ್ರತಿರೋಧ ತೋರಿದ ಅಥವಾ ಪ್ರಶ್ನಿಸಿದ ಅಥವಾ ಪೋಷಕರು ಶಾಲೆಯ ನೀತಿಯ ಕುರಿತು ಭಿನ್ನಾಭಿಪ್ರಾಯ ವ್ಯಕ್ತಪಡಿಸಿದ ನಿದರ್ಶನಗಳು ಇಲ್ಲವೇ? ದೈನಂದಿನ ಆಧಾರದಲ್ಲಿ ಈ ಶೈಕ್ಷಣಿಕ ಆದರ್ಶಗಳನ್ನು ಮೂರ್ತರೂಪಕ್ಕೆ ತರುವಲ್ಲಿ ಎದುರಿಸಿದ ಸವಾಲುಗಳು ಮತ್ತು ವೈಫಲ್ಯತೆಗಳು ಹಾಗೂ ಈ ಕಾರಣದಿಂದಾಗಿ ಕಾಲ ಕಳೆದಂತೆ ಈ ಅಭ್ಯಾಸಗಳು ಯಾವ ರೀತಿ ಕೆಲವೊಂದು ಮಾರ್ಪಾಡು ಮತ್ತು ಮರುವ್ಯಾಖ್ಯಾನಕ್ಕೆ ಒಳಗಾಗಿವೆ ಎಂಬ ಕುರಿತು ಕೆಲವೊಂದು ಮಿನುಗುನೋಟಗಳನ್ನು ಈ ಪುಸ್ತಕವು ನೀಡಬೇಕಿತ್ತು. ಅತ್ಯುತ್ತಮ ಅಭ್ಯಾಸಗಳನ್ನು ಯಶೋಗಾಥೆಗಳ ರೂಪದಲ್ಲಿ ಮಾತ್ರವೇ ಏಕವರ್ಣೀಯವಾಗಿ ಪ್ರಸ್ತುತ-ಪಡಿಸುವುದರಿಂದ, ಈ ಪುಸ್ತಕವು ಹೊಂದಿರಬಹುದಾಗಿದ್ದ ಶೈಕ್ಷಣಿಕ ಸಾಮರ್ಥ್ಯಕ್ಕೆ ನ್ಯಾಯ ಒದಗಿಸಿದಂತೆ ಆಗುವುದಿಲ್ಲ. ಇವುಗಳ ಆಳ, ವಿಮರ್ಶಾತ್ಮಕ ಮತ್ತು ಹೆಚ್ಚು ವಿಶ್ಲೇಷಣಾತ್ಮಕ ದೃಷ್ಟಿಕೋನವು, ತಮ್ಮದೇ ಆದ ವ್ಯವಸ್ಥೆಯಲ್ಲಿ ಈ ವಿಚಾರಗಳ ಅನ್ವಯಿಸುವಿಕೆಯ ಮಾಧ್ಯಮವಾಗಿ ಈ ಪುಸ್ತಕವನ್ನು ಇನ್ನಷ್ಟು ಅರ್ಥಪೂರ್ಣವಾಗಿ ಬಳಸಲು ಶಿಕ್ಷಕರಿಗೆ ಸಹಾಯ ಮಾಡುತ್ತಿತ್ತು. ಒಟ್ಟಾರೆಯಾಗಿ, ದೇಶಕ್ಕಾಗಿ ಶಾಲಾ ಶಿಕ್ಷಣದ ಪ್ರಗತಿಶೀಲ ದೃಷ್ಟಿಕೋನವನ್ನು ಪ್ರತಿಧ್ವನಿಸುವ, ಜೆ. ಕೃಷ್ಣಮೂರ್ತಿ ಅವರ ಅತ್ಯಂತ ಒಳನೋಟವುಳ್ಳ ಶೈಕ್ಷಣಿಕ ಸಿದ್ಧಾಂತದಿಂದ ಸುಸಂಘಟಿತವಾಗಿ ಹೊರಹೊಮ್ಮಿದ ಅಭ್ಯಾಸಗಳನ್ನು ವಿಸ್ತೃತವಾಗಿ ನಿರೂಪಿಸುವಲ್ಲಿ ಈ ಪುಸ್ತಕವು ಒಳ್ಳೆಯ ಸಾಧನೆಯನ್ನು ಮಾಡಿದೆ. ಭಾರತದ ಶಾಲೆಗಳು ಯಾವುದೇ ರೀತಿಯ ವಿಚಾರಧಾರೆ ಅಥವಾ ಸನ್ನಿವೇಶವನ್ನು ಹೊಂದಿರಲಿ, ಈ ಶೈಕ್ಷಣಿಕ ಸಿದ್ಧಾಂತದ ಕುರಿತು ಸಾಕಷ್ಟು ವಿಚಾರಗಳನ್ನು ಕಲಿಯಬಹುದು ಮತ್ತು ಈ ಪುಸ್ತಕದಲ್ಲಿ ವಿವರಿಸಲಾದ ಮೌಲ್ಯಗಳು ಮತ್ತು ಅಭ್ಯಾಸಗಳನ್ನು ಅಳವಡಿಸಿಕೊಳ್ಳಬಹುದು. ಖಂಡನೆ ಮತ್ತು ಹೋಲಿಕೆಯ ಭೀತಿ ಇಲ್ಲದೆ ಮಕ್ಕಳು ಬರಬಹುದಾದ ಸ್ಥಳವಾಗಿ ಶಾಲೆಯನ್ನು ರೂಪಿಸುವುದು, ಕಲಾಮೀಮಾಂಸೆಯ ಆಸ್ವಾದನೆಯ ಮೌಲ್ಯಗಳನ್ನು ಅಭಿವೃದ್ಧಿಪಡಿಸುವುದು, ತಮ್ಮ ಸಮುದಾಯದ ಕುರಿತು ಮಕ್ಕಳಲ್ಲಿ ಸಂವೇದನೆಯನ್ನು ರೂಪಿಸುವುದು ಮತ್ತು ವಿಜ್ಞಾನ ಹಾಗೂ ಸಾಮಾಜಿಕ ವಿಜ್ಞಾನವನ್ನು ಕಲಿಸುವುದಕ್ಕಾಗಿ ವಾಸ್ತವಿಕ ಪ್ರಪಂಚದ ಸಮಸ್ಯೆಗಳನ್ನು ಬಳಸುವುದು ಇತ್ಯಾದಿಗಳು, ದೇಶದಲ್ಲಿ ಶೈಕ್ಷಣಿಕ ಸುಧಾರಣೆಯನ್ನು ತರುವುದಕ್ಕಾಗಿ ನಾವು ತೆಗೆದುಕೊಳ್ಳಬೇಕಾದ ಶಿಕ್ಷಣಶಾಸ್ತ್ರೀಯ ಕ್ರಮಗಳಿಗೆ ಅತ್ಯುತ್ತಮ ಉದಾಹರಣೆಗಳಾಗಿವೆ. ಈ ವಿಚಾರಗಳನ್ನು ಪುಸ್ತಕವು ಚೆನ್ನಾಗಿ ಪ್ರಸ್ತುತಪಡಿಸಿದ್ದರೂ, ಈ ವಿಚಾರಗಳ ಹಿಂದಿನ ಯೋಚನೆಗಳ ಕುರಿತು ಆಳವಾದ ಒಳನೋಟವನ್ನು ಅಭಿವೃದ್ಧಿಪಡಿಸದೆ ಹಾಗೂ ಅವು ಎದುರಿಸಬಹುದಾದ ಅಪಾಯಗಳು ಮತ್ತು ಸವಾಲುಗಳನ್ನು ಅರಿತುಕೊಳ್ಳದೆ ಈ ವಿಧಾನಗಳನ್ನು ಅಳವಡಿಸಿಕೊಳ್ಳುವ ಮೊದಲು ಶಾಲಾ ಮುಖ್ಯಸ್ಥರು ಎಚ್ಚರಿಕೆ ವಹಿಸಬೇಕು. ಈ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ವಿವಿಧ ಸಹಭಾಗಿಗಳಾದ ಶಿಕ್ಷಕರು, ಪೋಷಕರು, ಮಕ್ಕಳು ಮತ್ತು ಸಮುದಾಯದ ಸದಸ್ಯರ ಸಿದ್ಧತೆ ಮತ್ತು ಸನ್ನದ್ಧತೆಯು, ಅನುಷ್ಠಾನಕ್ಕೆ ಮೊದಲು ಲಭ್ಯ ಸಂಪನ್ಮೂಲಗಳ ನೈಜ ಮೌಲ್ಯಮಾಪನದಷ್ಟೇ ಪ್ರಮುಖವೆನಿಸುತ್ತದೆ. ಶೈಕ್ಷಣಿಕ ಸುಧಾರಣೆಯನ್ನು ಅಖಂಡತೆಯಿಂದ ಕೂಡಿದ ಪ್ರಯಾಣವಾಗಿ ಪರಿಗಣಿಸಿದಾಗ, ಅದನ್ನು ಪ್ರಾರಂಭಿಸಲು ಯಾವುದೇ ಆದರ್ಶ ಸಮಯ ಅಥವಾ ಸಿದ್ಧತೆಯ ಹಂತ ಎನ್ನುವುದು ಇಲ್ಲ ಎಂಬುದನ್ನು ನಾವು ಮನಗಾಣಬೇಕು.



**ಅಂಕುರ್ ಮದನ್** ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಲ್ಲಿ ಬೋಧಿಸುತ್ತಿದ್ದಾರೆ. ಮಗುವಿನ ಬೆಳವಣಿಗೆ (Child Development) ಮತ್ತು ಸಮನ್ವಯ ಶಿಕ್ಷಣ (Inclusive Education) ಅವರ ಬೋಧನಾ ಮತ್ತು ಸಂಶೋಧನೆಯ ವಿಷಯವಾಗಿದೆ. ಅವರನ್ನು ankur.madan@apu.edu.in ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೋನ್ಸಾ** | ಪರಿಶೀಲನೆ: **ಲತಾ ಕೆ.ಸಿ.**

ಈ ಹಿಂದಿನ ಲರ್ನಿಂಗ್ ಕರ್ವ್ ಸಂಚಿಕೆಗಳು ಈ ಕೆಳಗಿನ ಲಿಂಕ್‌ನಲ್ಲಿ ಲಭ್ಯವಿದೆ
https://azimpremjiuniversity.edu.in/learning-curve

ಹಿಂದಿ ಮತ್ತು ಕನ್ನಡ ಸಂಚಿಕೆಗಳಿಗಾಗಿ ಈ ಕೆಳಗಿನ ಲಿಂಕ್ ನೋಡಿ
https://anuvadasampada.azimpremjiuniversity.edu.in/

ಲರ್ನಿಂಗ್ ಕರ್ವ್ ಚಂದಾದಾರರಾಗಲು ಈ ಕೆಳಗಿನ ಲಿಂಕ್‌ನಲ್ಲಿರುವ ಅರ್ಜಿಯನ್ನು ತುಂಬಿ
https://bit.ly/3SS3kNG

ಸಲಹೆ, ಅಭಿಪ್ರಾಯ ಹಾಗೂ ನಿಮ್ಮ ಅನುಭವ ಹಂಚಿಕೊಳ್ಳಲು, ನಮಗೆ ಬರೆಯಿರಿ
learningcurve@apu.edu.in


**ಮುದ್ರಣ ಮತ್ತು ಪ್ರಕಟಣೆ: ಮನೋಜ್ ಪಿ, ಅಜೀಂ ಪ್ರೇಮ್‌ಜಿ ಫೌಂಡೇಷನ್ ಫಾರ್ ಡೆವಲಪ್‌ಮೆಂಟ್ ಪರವಾಗಿ**
**ಮುದ್ರಣ**: ಲಕ್ಷ್ಮೀ ಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು – 560018. ಕರ್ನಾಟಕ
**ಪ್ರಕಟಣೆ:** ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ, ಸರ್ವೇ ನಂ. 66, ಬುರುಗುಂಟೆ ಗ್ರಾಮ,
ಬಿಕ್ಕನಹಳ್ಳಿ ಮುಖ್ಯ ರಸ್ತೆ, ಸರ್ಜಾಪುರ, ಬೆಂಗಳೂರು – 562125

**ಪ್ರೇಮಾ ರಘುನಾಥ್**, ಮುಖ್ಯ ಸಂಪಾದಕಿ, ಲರ್ನಿಂಗ್ ಕರ್ವ್

Azim Premji University

# ಸಾಹಿತ್ಯ ಸಹವಾಸ

ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮ

## ಡಾ. ಶಿವರಾಮ ಕಾರಂತ, ಡಾ. ಗೋಪಾಲಕೃಷ್ಣ ಅಡಿಗ ಮತ್ತು ನವ್ಯಸಾಹಿತ್ಯ ಕುರಿತಾದ:

- ಪ್ರೊ. ಯು ಆರ್ ಅನಂತಮೂರ್ತಿ ಅವರ ವಿಡಿಯೊ ಉಪನ್ಯಾಸ ಸರಣಿ ಬಿಡುಗಡೆ
- ಸಾಹಿತ್ಯಕ ಗೋಷ್ಠಿಗಳು
- ಒಡನಾಟದ ನೆನಪುಗಳು
- ವಿದ್ಯಾರ್ಥಿಗಳಿಗಾಗಿ ಪ್ರಬಂಧ ಹಾಗೂ ಭಾವಗೀತೆ ಗಾಯನ ಸ್ಪರ್ಧೆ–ಬಹುಮಾನ ವಿತರಣೆ



**ಯಕ್ಷಗಾನ ಪ್ರಾತ್ಯಕ್ಷಿಕೆ**

**ಭಾವಗೀತೆ ಗಾಯನ**

**ಕಲಾಕೃತಿ ಮತ್ತು ಪುಸ್ತಕ ಪ್ರದರ್ಶನ**

**ಶನಿವಾರ, 1 ಜೂನ್, 2024**

ಬೆಳಗ್ಗೆ ೯:೩೦ ರಿಂದ ಸಂಜೆ ೫:೦೦ರವರೆಗೆ

**ಎಂ.ಜಿ.ಎಂ. ಕಾಲೇಜು ಸಭಾಂಗಣ,** ಉಡುಪಿ

**ಬನ್ನಿ, ಎಲ್ಲರೂ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ!**


**ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ**

ಸರ್ವೆ ನಂ. 66, ಬುರುಗುಂಟೆ ಹಳ್ಳಿ, ಬಿಕ್ಕನಹಳ್ಳಿ ಮುಖ್ಯರಸ್ತೆ, ಸರ್ಜಾಪುರ, ಬೆಂಗಳೂರು 562125

080 66144900 | www.azimpremjiuniversity.edu.in

ಫೇಸ್‌ಬುಕ್: /azimpremjiuniversity | ಟ್ವಿಟರ್: @azimpremjiuniv | ಇನ್‌ಸ್ಟಾಗ್ರಾಮ್: @azimpremjiuniv


ಸಾಹಿತ್ಯ ಸಹವಾಸ ಉಪನ್ಯಾಸ ಸರಣಿಯ ವಿಡಿಯೋಗಳನ್ನು ವೀಕ್ಷಿಸಲು

bit.ly/sahityasahavasa

